ಗಳಗನಾಥ ಸುರಸಗ್ರಂಥಮಾಲಾ

# ಕಲಿಕುಠಾರ.

ಅಥವಾ

## ಲೋಕಾಪುರ ಪೀಠಪ್ರಭಾವ

೨ ನೇಭಾಗ



ಲೇಖಕ.

**ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ.**

೧ನೆಯ ಆವೃತ್ತಿ ೧೦೦೦ ಪ್ರತಿಗಳು

**ಬೆಲೆ ೧ ರೂಪಾಯಿ**

# ಪ್ರಸ್ತಾವನೆ.



ಅತ್ಯಂತ ಗಹನವಾದ ಈ "ಕಲಿಕುಠಾರ" ಎಂಬ ಹೆಸರಿನ ಅವಧೂತ ಮಾರ್ಗದ ಚರಿತ್ರಗ್ರಂಥವು ಮುಗಿದದ್ದರಿಂದ, ಒಂದು ದೊಡ್ಡ ಜೂಗಗೆದ್ದಂತಾಗಿ, ನನಗೆ ಬಹಳ ಸಂತೋಷವಾಗಿದೆ! ಕನಕದಾಸಾದಿ ಭಗವದ್ಭಕ್ತರು, ತಾವು ಬರೆದು ಮುಗಿಸಿದ ಗ್ರಂಥಗಳ ಸಂಬಂಧದಿಂದ—"ಇದನ್ನು ನಾನು ಬರೆಯಲಿಲ್ಲ, ದೇವರು ಬರೆಸಿದನೆಂ"ದು ಬರೆದಿರುವ ಮಾತು, ಔಪಚಾರಿಕವೆಂದು ನಾನು ತಿಳಿದಿದ್ದೆನು; ಆದರೆ ನನ್ನ ಅನಧಿಕಾರವನ್ನೂ, ಈ ಗ್ರಂಥದಲ್ಲಿಯ ವಿವಿಧವಿಷಯಗಳ ಗಹನತೆಯನ್ನೂ ಮನಸ್ಸಿನಲ್ಲಿ ತಂದರೆ, ಈ ಗ್ರಂಥವನ್ನು ಲೋಕಾಪುರಪೀಠದ ಮೂಲಪುರುಷರಾದ ಪರಮಹಂಸರೇ ನನ್ನಿಂದ ಬರೆಸಿದರೆಂದು ಪ್ರತಿಜ್ಞಾಪೂರ್ವಕವಾಗಿ ನಾನು ಒಪ್ಪಿಕೊಳ್ಳಬೇಕಾಗುವದು! ಈ ಮಾತು, ಈಗ ವಾಚಕರ ಕೈಯ್ಯಲ್ಲಿರುವ ಕಲಿಕುಠಾರ ಗ್ರಂಥದ ಈ ಎರಡನೆಯ ಭಾಗವನ್ನು ಓದುವಾಗ ವಾಚಕರ ಮನವರಿಕೆಯಾಗದಿದ್ದರೂ, ಇನ್ನು ಬೇಗನೆ ಮುದ್ರಿಸಿ ಪ್ರಸಿದ್ಧಮಾಡಬೇಕಾಗಿರುವ ಈ ಚರಿತ್ರಗ್ರಂಥದ ಒಂದನೆಯ ಭಾಗವನ್ನು ಓದಿದಾಗ ನಿಶ್ಚಯದಿಂದ ಅವರ ಮನವರಿಕೆಯಾಗಿ, ಅವರ ಮುಖದಿಂದ—"ಈ ಚರಿತ್ರಗ್ರಂಥಬರೆದದ್ದು ಗಳಗನಾಥನ ಯೋಗ್ಯತೆಯಲ್ಲ" ಎಂಬ ಉದ್ಗಾರವು ಹೊರಡದೆ ಇರಲಾರದೆಂದು ನಾನು ನಂಬಿರುವೆನು!

ಚರಿತ್ರದ ಒಂದನೆಯಭಾಗವನ್ನು ಮೊದಲು ಮುದ್ರಿಸದೆ, ಒಮ್ಮೆಲೆ ಈಗ ಅದರ ಈ ಎರಡನೆಯ ಭಾಗವನ್ನು ಮುದ್ರಿಸಿದ್ದು ವಾಚಕರಿಗೆ ಅಸಮಂಜಸವಾಗಿ ತೋರಿದರೆ ಆಶ್ಚರ್ಯವಲ್ಲ; ಆದರೆ, ನನ್ನ, ಹಾಗು ಲೋಕಾಪುರಪೀಠದ ಋಣಭಾರದ ದುಸ್ಸಹತೆ, ಸಂಪೂರ್ಣಗ್ರಂಥದ ಮುದ್ರಣಕಾರ್ಯಕ್ಕೆ ಬೇಕಾಗುವಷ್ಟು ದ್ರವ್ಯದ ಅನುಕೂಲತೆಯು ಆಗದೆಯಿದ್ದದ್ದು, ಚರಿತ್ರದ ಒಂದನೆಯ ಭಾಗದಲ್ಲಿಯ ವಿವಿಧವಿಷಯಗಳ ಗಹನತೆ, ಸಾಲತೀರಿಸುವ ಐದು ಹೊಸಪುಸ್ತಕಗಳನ್ನು ಮುದ್ರಿಸಿಕೊಂಡೇ ಗ್ರಂಥಪ್ರಸಾರಮಾಡ

ಲಿಕ್ಕೆ ಹೊರಡಬೇಕೆಂಬ ನನ್ನ ದೃಢನಿಶ್ಚಯದ ಅವಸರ, ಎಂಬ ಈ ನಾಲ್ಕು ಕಾರಣಗಳಮೂಲಕ, ಚರಿತ್ರದ ಈ ಎರಡನೆಯ ಭಾಗವನ್ನೇ ಮೊದಲು ಮುದ್ರಿಸಬೇಕಾಯಿತು. ಅಲ್ಲದೆ, ಪಡಿಕಟ್ಟೆಗಾಗಿ ಎಲ್ಲರೂ ಮೆಚ್ಚಬಹುದಾದ ಹಣ್ಣುಆರಿಸಿ ತಿನ್ನಲಿಕ್ಕೆಕೊಟ್ಟು ರುಚಿಹಚ್ಚುವಂತೆ, ಅಕ್ಷರಸ್ಥರೆಲ್ಲರಿಗೂ ಚರಿತ್ರದ ಸವಿಹತ್ತಿ, ಈ ಚರಿತ್ರದ ರಹಸ್ಯಮಯವಾದ ಒಂದನೆಯ ಕಠಿಣಭಾಗವನ್ನು ಓದುವ ಕುತೂಹಲವು, ಕನ್ನಡಿಗರಲ್ಲಿ ಉಂಟಾಗಬೇಕೆಂಬ ನಮ್ಮ ಸದಿಚ್ಛೆಯು, ಈ ಎರಡನೆಯ ಭಾಗವನ್ನೇ ಮೊದಲು ಮುದ್ರಿಸಲಿಕ್ಕೆ ಮತ್ತೊಂದು ಐದನೆಯ ಪ್ರಬಲಕಾರಣವಾಗಿರುತ್ತದೆ.

ಈ "ಕಲಿಕುಠಾರ"ವೆಂಬ ಚರಿತ್ರಗ್ರಂಥದ ಪದ್ಧತಿಯಂತೆ, ಸಾಂಗೋಪಾಂಗವಾಗಿದ್ದ ಚರಿತ್ರಗ್ರಂಥವನ್ನು ನಾನು ಈವೊದಲು ಬರೆದಿರುವದಿಲ್ಲ; ಮತ್ತು ಅನ್ಯರು ಬರೆದಿರುವ ಅಂತಹ ಚರಿತ್ರಗ್ರಂಥಗಳನ್ನು ನಾನು ಓದಿರುವದೂ ಇಲ್ಲ! ಈ ಚರಿತ್ರಗ್ರಂಥದಲ್ಲಿ– ೧ ಪೀಠಿಕಾಪ್ರಸಂಗ. ೨ ಚರಿತ್ರಪ್ರಸಂಗ. ೩ ಉಪಸಂಹಾರಪ್ರಸಂಗ ಎಂಬ ಮೂರು ಪ್ರಸಂಗಗಳಿದ್ದು, ಆ ಪ್ರಸಂಗಗಳೊಳಗಿನ ಚರಿತ್ರಪ್ರಸಂಗದಲ್ಲಿ—೧ ಜ್ಞಾನಯೋಗಪ್ರಧಾನಖಂಡ ೨ ಭಕ್ತಿಯೋಗಪ್ರಧಾನಖಂಡ ೩ ಕರ್ಮಯೋಗಪ್ರಧಾನಖಂಡ ಎಂಬ ಮೂರು ಖಂಡಗಳಿರುತ್ತವೆ. ಈ ಮೂರು ಖಂಡಗಳ ವಿಷಯವಿಸ್ತಾರವು, ಸಾಧಾರಣ ಸಮಸಮಾನವಾಗಿದ್ದು, ಒಂದನೆಯ ಜ್ಞಾನಯೋಗಪ್ರಧಾನಖಂಡದಲ್ಲಿ, ಪೀಠದ ಮೂಲಪುರುಷರಾದ ಪರಮಹಂಸರದೊಬ್ಬರದೇ ಗಹನವಾದ ಸವಿಸ್ತರ ಚರಿತ್ರವು ಬಂದಿರುವದು; ಆದರ ಮುಂದಿನ ಭಕ್ತಿಯೋಗಪ್ರಧಾನಖಂಡವೆಂಬ ಎರಡನೆಯ ಖಂಡದಲ್ಲಿ— ೧ ಜ್ಞಾನೇಶ್ವರಸ್ವಾಮಿಗಳು. ೨ ಭುಜಂಗಸ್ವಾಮಿಗಳು. ೩ ಗುರುನಾಥಸ್ವಾಮಿಗಳು. ೪ ಎರಡನೆಯ ಜ್ಞಾನೇಶ್ವರಸ್ವಾಮಿಗಳು. ೫ ರಾಮಚಂದ್ರಸ್ವಾಮಿಗಳು ಎಂಬ ಐವರು ಮಹಾಪುರುಷರ ಅದ್ಭುತ ಚರಿತ್ರಗಳು ಬಂದಿರುವವು; ಆದರ ಮುಂದಿನ ಈ ಕರ್ಮಯೋಗಪ್ರಧಾನಖಂಡವೆಂಬ ೩ನೇ ಖಂಡದಲ್ಲಿ— ೧ ಬಾಲಭುಜಂಗಯೋಗಿಗಳು. ೨ ಮೂರನೇ ಜ್ಞಾನೇಶ್ವರಸ್ವಾಮಿಗಳು ಎಂಬ ಇಬ್ಬರು ಮಹಾತ್ಮರ ಸುಂದರ ಚರಿತ್ರಗಳು

ವಿಶದವಾಗಿ ಬಂದಿದ್ದು, ಅವನ್ನು ಈ ಎರಡನೆಯ ಭಾಗದ ಈ ಚರಿತ್ರಗ್ರಂಥದಲ್ಲಿ ವಾಚಕರು ನೀವು ಓದುತ್ತಿರುವಿರಿ. ಇವರಿಬ್ಬರೂ ಮಹಾಪುರುಷರು, ಯಾರೂ ಅರಿಯದಂಥ ಪ್ರಾಚೀನರಲ್ಲ, ಕೇವಲ ಆಧುನಿಕರು. ಇವರಲ್ಲಿ ಮೊದಲನೆಯವರಾದ ಬಾಲಭುಜಂಗಯೋಗಿಗಳು ಗತಿಸಿ ೩೭ ವರ್ಷಗಳೂ, ಎರಡನೆಯವರಾದ ಮೂರನೇಜ್ಞಾನೇಶ್ವರಸ್ವಾಮಿಗಳು ಗತಿಸಿ ಏಳುತಿಂಗಳುಗಳೂ ಮಾತ್ರ ಆಗಿರುವದರಿಂದ, ಅವರ ಚರಿತ್ರದ ಸಂಗತಿಗಳನಂಬಿಗೆಮಾಡಿಕೊಳ್ಳಲಿಕ್ಕೆ ಈಗೂ ಆಸ್ಪದವಿರುವದು; ಯಾಕಂದರೆ, ಆ ಇಬ್ಬರು ಮಹಾಪುರುಷರನ್ನು ನೋಡಿದವರೂ, ಅವರ ಚರಿತ್ರಗಳೊಳಗಿನಸಂಗತಿಗಳ ಸಾಕ್ಷಿಗಳೂ ಈಗೂ ಚಿಕಿತ್ಸಕರಿಗೆ ಬಹುತರ ಸಿದ್ಧವಾಗಿತ್ತಾವೆ!

ಗಹನವಾದ ಈ ಚರಿತ್ರಗ್ರಂಥದ ಪ್ರಸ್ತಾವನೆಯಲ್ಲಿ ಬರೆಯುತಕ್ಕ ಗೌರವದ ಸಂಗತಿಗಳು ಬೇಕಾದಷ್ಟು ಇರುವವು; ಆದರೆ ಅವನ್ನು ಈಗ ಬರೆಯಲಿಕ್ಕೆ ಮನಸ್ಸು ಆಗುವದಿಲ್ಲ; ಯಾಕಂದರೆ, ಚರಿತ್ರಗ್ರಂಥದ ಎರಡೂ ಭಾಗಗಳಲ್ಲಿ ಎಲ್ಲ ವಿಷಯಗಳ ಸಾಂಗೋಪಾಂಗವಿವರಣೆಯಾಗಿರುವದರಿಂದ, ಆ ಸಂಪೂರ್ಣಗ್ರಂಥದ ಪ್ರಸ್ತಾವನೆಯಲ್ಲಿ ಅವನ್ನು ಬರೆಯುವದು ಸಮರ್ಪಕವಾಗಿರುವದು; ಆದ್ದರಿಂದ ಆ ಸುಯೋಗವನ್ನು ಬೇಗನೆ ಒದಗಿಸಿಕೊಡಲು ಮಹಾತ್ಮರಾದ ಪರಮಹಂಸರನ್ನು ಪ್ರಾರ್ಥಿಸಿ, ದೈವೀಗೂಢಶಕ್ತಿಯೊಂದು ಇರುವದೆಂದು ನಂಬಲು ವಾಚಕರನ್ನು ಎಚ್ಚರಗೊಳಿಸಿ, ಇಲ್ಲಿಗೆ ಈ ಪುಟ್ಟ ಪ್ರಸ್ತಾವನೆಯನ್ನು ಮುಗಿಸಿಬಿಡಬೇಕೆಂದು ಮಾಡಿದ್ದೆವು; ಆದರೆ ಈ ಎರಡನೆಯ ಭಾಗದೊಳಗೆ ಪ್ರಾಮುಖ್ಯ ವಿಷಯಗಳಾಗಿರುವ ಮಹಾಪುರುಷರ ಅಲೌಕಿಕ ಮಹಿಮೆಗಳ ವಿಷಯವಾಗಿ, ಮೂಗುಮುರಿದು ತಿರಸ್ಕಾರದಿಂದಏನೇನೋಹೇಳಹೋಗುತ್ತಿರುವನಾಸ್ತಿಕಭಾವದಜನರತಿಳಿಗೇಡಿತನವನ್ನುಕುರಿತು,ಎರಡುಮಾತುಗಳನ್ನುಬರೆಯುವದುಅಗತ್ಯವಾಗಿತೋರುತ್ತದೆ.

ಈಜಗತ್ತಿನಲ್ಲಿದೇವರು,ಆತನಕಾರ್ಯವಾದಸೃಷ್ಟಿ ಇವೆರಡೇ ಇದ್ದು, ದೇವರಸ್ವರೂಪವುಅವ್ಯಕ್ತವು, ಅಂದರೆ ಕಣ್ಣಿಗೆಕಾಣದ್ದುಆಗಿರುವದು; ಆತನ ಕಾರ್ಯವಾದಸೃಷ್ಟಿಯಸ್ವರೂಪವು ಸಾಧಾರಣವಾಗಿ ವ್ಯಕ್ತವು, ಅಂದರೆ ಕಣ್ಣಿಗೆಕಾಣು

ಪದುಲಾಗಿರುವದು. ಸಣ್ಣಹುಡುಗರು ಒಡೆದುಕಾಣುವಬಣ್ಣಬಣ್ಣದ ಒಡವೆಗಳನ್ನು ನೋಡಿ ಹಿರಿಹಿರಿಹಿಗ್ಗುತ್ತ ಅವುಗಳ ವಿಷಯದ ವ್ಯವಹಾರದಲ್ಲಿಯೇ ರಮಮಾಣರಾಗಿಹೋಗಿ, ಅವುಗಳ ಅವ್ಯಕ್ತಕರ್ತೃವನ್ನು ಲಕ್ಷಿಸದಿರುವಂತೆ, ಬಾಲಿಶರಾದ ನಾಸ್ತಿಕರು ಬಣ್ಣಬಣ್ಣದ್ದಾಗಿರುವ ಸೃಷ್ಟಿಯ ವ್ಯವಹಾರದಲ್ಲಿಯೇ ರಮಮಾಣರಾಗಿ ಹೋಗಿ, ಆ ಬಣ್ಣ ಬಣ್ಣದ ಸೃಷ್ಟಿಯ ಅವ್ಯಕ್ತ ಕರ್ತೃವನ್ನು ಅಂದರೆ ದೇವರನ್ನು ಲಕ್ಷಿಸದೆ, ತಮ್ಮ ಬಾಲಿಶತನವನ್ನು ಸಾರ್ಥಕಮಾಡಿಕೊಳ್ಳುತ್ತಿರುವದಕ್ಕಾಗಿ ಮರುಗಬೇಕಾಗುವದು ! ಸೃಷ್ಟಿಯು ಪರಮಾತ್ಮನ ಇಚ್ಛಾರೂಪ ಕಾರಣದಿಂದ ಉಂಟಾಗಿರುವದರಿಂದ, ಅದು ಪರಮಾತ್ಮನ ಇಚ್ಛಾಧೀನತೆಯ ಮೂಲಕ ಪರಾಧೀನವಾಗಿ, ಅದರ ಕಾರ್ಯಗಳೆಲ್ಲ ಕಾರ್ಯಕಾರಣರೂಪಬಂಧನದಿಂದ ಬದ್ಧವಾಗಿರಬೇಕಾಗುವದು; ಆದರೆಸೃಷ್ಟಿಯ ಮೂಲಕಾರಣನಾದ ದೇವರು ಸ್ವತಂತ್ರನು ಅಂದರೆ ಕಾರ್ಯಕಾರಣಾತೀತನು ಆದದ್ದರಿಂದ, ಆತನನ್ನು ಕಾರ್ಯಕಾರಣಭಾವರೂಪಬಂಧನವುಬಾಧಿಸಲಾರದು; ಆದರಿಂದದೇವರು, ಕಾರ್ಯಕಾರಣಭಾವದ ಸೃಷ್ಟಿಯನ್ನುತನ್ನ ಇಚ್ಛೆಬಂದರೆ ಮಾಡಲಿಕ್ಕೂ, ಇಚ್ಛೆಬಾರದಿದ್ದರೆ ಮಾಡದಿರಲಿಕ್ಕೂ, ಇಚ್ಛೆಬಂದರೆ ಆತನು ಕಾರ್ಯಕಾರಣಭಾವಕ್ಕೆ ಹೊರಗಾದ ಹೊಸ ಬಗೆಯ ಸೃಷ್ಟಿಯನ್ನು ಮಾಡಲಿಕ್ಕೂ ಸಮರ್ಥನಾಗಿರುವನು. ಅಂತೇ ಆತನನ್ನು ಆತನಭಕ್ತರು "ಕರ್ತುಂ, ಅಕರ್ತುಂ ಅನ್ಯಥಾ ಕರ್ತುಂಸಮರ್ಥನು" ಎಂದು ಹೊಗಳುತ್ತಿರುವರು; ಆದ್ದರಿಂದ ದೇವರಾಗಲಿ, ದೇವರ ಕೃಪೆಗೆ ಪಾತ್ರರಾದ ಬಾಲಭುಜಂಗ ಸ್ವಾಮಿಗಳಂಥ ಮಹಾಪುರುಷರಾಗಲಿ, ತಮ್ಮ ಮನಸ್ಸಿಗೆ ಬಂದರೆ, ಮಕ್ಕಳಾಗುವಯೋಗವಿಲ್ಲದ ಕಾರ್ಯಕಾರಣ ಭಾವಕ್ಕನುಸರಿಸಿದ ತರುಣ ಸ್ತ್ರೀಗೆ ಮಕ್ಕಳಕೊಡಬಹುದು, ಮನಸ್ಸಿಗೆ ಬಾರದಿದ್ದರೆ ಅಂಥ ಸ್ತ್ರೀಗೆ ಮಕ್ಕಳ ಕೊಡಲಿಕ್ಕಿಲ್ಲ; ಅಥವಾ ಮನಸ್ಸಿಗೆ ಬಂದರೆ ಕಾರ್ಯಕಾರಣಭಾವಕ್ಕೆ ಹೊರಗಾದ ಅಗವತ್ತು ವರ್ಷದ ಮುದುಕಿಗೆ ಮಕ್ಕಳಕೊಡಬಹುದು! ಆದ್ದರಿಂದ ಆಸ್ತಿರಾದವರು ನಿಜವಾದ ಮಹಾಪುರುಷರ ಅಲೌಕಿಕಮಹಿಮೆಗಳ ವಿಷಯದ ಅಶ್ರದ್ಧೆತಾಳಿ, ತಮ್ಮ ದೊಡ್ಡ ಹಾನಿಯನ್ನು ಮಾಡಿಕೊಳ್ಳಬಾರದು.

ಭಕ್ತರಂಥ ಲೌಕಿಕರು ಕೂಡ, ತಮ್ಮ ಲೌಕಿಕ ಮಹಿಮೆ ತೋರಿಸದಿದ್ದರೆ ಅವರು ಸಾಮಾನ್ಯ ಜನರ ಭಕ್ತಿ–ವಿಶ್ವಾಸಗಳಿಗೆ ಪಾತ್ರರಾಗಲಾರರು; ಅಂದಬಳಿಕ ಪರಮಾತ್ಮನ ಕೃಪೆಪಡೆದಿದ್ದ ದೇವಭಕ್ತರಾದ ಮಹಾ ಪುರುಷರು, ತಮ್ಮ ಅಲೌಕಿಕ ಮಹಿಮೆಗಳಿಂದ ಲೋಕದ ಮನಸ್ಸು ಎಳೆದುಕೊಂಡು ಅದನ್ನು ಯೋಗ್ಯ ಮಾರ್ಗಕ್ಕೆ ಹಚ್ಚದಿದ್ದರೆ, ಈಶ್ವರಪ್ರಾಪ್ತಿರೂಪ ಕಲ್ಯಾಣವು ಲೌಕಿಕರಿಗೆ ಹೇಗೆ ಪ್ರಾಪ್ತವಾಗಬೇಕು? ದೃಶ್ಯಗಳಾದ ಅಲೌಕಿಕ ಮಹಿಮೆಗಳಿಂದ ಅದೃಶ್ಯನಾಗಿದ್ದ ಪರಮಾತ್ಮನ ಕಡೆಗೆ ಜನರ ಮನಸ್ಸು ತಿರುಗುವ ಸಂಭವವು ವಿಶೇಷವಾಗಿರುವದು. ಅಂತೇ ಭಾಗವತದಲ್ಲಿ ಶ್ರೀ ಕೃಷ್ಣನು—“ನನ್ನ ಜ್ಞಾನಕ್ಕೆ ನನ್ನ ಮಾಯೆಯು, ಅಂದರೆ ಸೃಷ್ಟಿಯು ಕಾರಣವೆಂ”ದು ಹೇಳಿರುವನು.

---

ಸದ್ಗುರು ಕಾರ್ಯಾಲಯ
ಹಾವೇರಿ,
ತಾರೀಖು—೧೫-೯-೧೯೩೮

ಕನ್ನಡಿಗರ ಸೇವಕ
**ವೇ. ಶಿ ಗಳಗನಾಥ.**

ಅರ್ಪಣ ಪತ್ರಿಕೆ.

# "ಕಲಿಕುಠಾರ"

ಅಥವಾ

## "ಲೋಕಾಪುರ ಪೀಠಪ್ರಭಾವ"

ಎಂಬ

**ಈ ಗಹನವಾದ ವಿಪತ್ರುತರ ಚರಿತ್ರ ಗ್ರಂಥವನ್ನು,**

**ಈ ಗ್ರಂಥದ ಉತ್ಪಾದಕರೂ, ಪ್ರೇರಕರೂ ಮಹಾಮಹಿಮರೂ**

ಆದ

**ಲೋಕಾಪುರ ಪೀಠಸ್ಥ ಪರಮಪೂಜ್ಯ**

**ಕೈ. ವಾ. ಶ್ರೀಜ್ಞಾನೇಶ್ವರಸ್ವಾಮಿಗಳ**

**ದಿವ್ಯಚರಣಗಳಿಗೆ**

ಗ್ರಂಥಕರ್ತೃತ್ವವೆಂಬ ಆರೋಪಕ್ಕೆ ಒಳಗಾದ

ಮಹಾಪರಾಧಿ

**ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ**

ಈತನು

ಭಕ್ತಿ ಪುರಸ್ಸರ

**ಕಾಣಿಕೆಯಾಗಿ** ಅರ್ಪಿಸಿರುವನು.

# ವಿಷಯಾನುಕ್ರಮಣಿಕೆ,

# ಕಲಿ ಕುಠಾರ

ಅಥವಾ

# ಲೋಕಾಪುರ--ಪೀಠ--ಪ್ರಭಾವ



ಚರಿತ್ರ ಪ್ರಸಂಗದಲ್ಲಿಯ

**೩ನೇ ಕರ್ಮಯೋಗ-ಪ್ರಧಾನಖಂಡವು**

**೭ನೆಯ ತಲೆ—ಬಾಲಭುಜಂಗಯೋಗಿಗಳು.**

## ೧ನೇ ಅಧ್ಯಾಯ--ಭವಿಷ್ಯಕಥನ



ವನ್ನಾತೇ ಶಿಶುಮೇವ ಯಂ ಭಗವತೀ ಶ್ರೀಯೋಗವಿದ್ಯಾಗಿರಾಂ |
ದೇವೀಚಸ್ವಯಮೇವ ಚಿನ್ಮಯ ತನುಂ ಪ್ರೇಮ್ಣಾಹ್ಯಹಂಪೂರ್ವಯಾ ||
ಬಾಲಾರ್ಕದ್ಯುತಿಮಾಶ್ರಿತಾರ್ತಿಹರಣಂ ವಂದೇ ಗುರೂಣಾಂ ಗುರುಂ |
ತಂ ಲೋಕಾಪುರಗಂ ದ್ವಿತೀಯಮಮಲಾನಂದಂ ಭುಜಂಗಾಹ್ವಯಂ ||

ಶ್ರೀಕೃಷ್ಣದೀಕ್ಷಿತ

ಈ ಮೇರೆಗೆ ನಮಗೆ ದೊರೆತಿದ್ದ ಸಾಧನಸಾಮಗ್ರಿಯಿಂದ, ಶ್ರೀಪರಮಹಂಸರ ಪ್ರೇರಣೆಯಂತೆ, ಪರಮಹಂಸರ, ಹಾಗು ಅವರ ಮುಂದಿನ ಆರು ತಲೆಯವರ ಚರಿತ್ರಗಳನ್ನು ಯಥಾಮತಿ ಬರೆದೆವು. ಮೂಲ ಪುರುಷರಾದ ಪರಮಹಂಸರ ಚರಿತ್ರಕ್ಕೆ "ಜ್ಞಾನಯೋಗ ಪ್ರಧಾನಖಂಡ" ಎಂಬ ಹೆಸರಿಟ್ಟು, ಅವರ ಚರಿತ್ರ ಬರೆದದ್ದಾಯಿತು; ಯಾಕಂದರೆ ಅವರು ನಿರು.





ಪಾಧಿಕವಾದ ಅದ್ವೈತಜ್ಞಾನಸಿದ್ಧಿಗೋಸ್ಕರ ಘೋರ ತಪಶ್ಚರ್ಯ ಮಾಡಿದ ವರು. ಅವರ ಆ ಅದ್ವೈತಜ್ಞಾನಕ್ಕೆ ಕರ್ಮಯೋಗ-ಭಕ್ತಿಯೋಗಗಳು ಸಹಾಯಕಗಳಾಗಿದ್ದರೂ, ಅದ್ವೈತಜ್ಞಾನಾನಂತರದ ಆ ಜ್ಞಾನಾನಂದಾನುಭವ ಸ್ಥಿತಿಯಲ್ಲಿ ಆ ಕರ್ಮಯೋಗ-ಭಕ್ತಿಯೋಗಗಳ ಉಪಯೋಗವು ಇಲ್ಲದಂತಾಗುವದು. ಒಟ್ಟಿಗೆ, ಪರಮಹಂಸರ ಚರಿತ್ರದಲ್ಲಿ ಕಟ್ಟಕಡೆಗೆ ಜ್ಞಾನಕ್ಕೊಂದಕ್ಕೇಪ್ರಾಶಸ್ತ್ಯ ಉಂಟಾಯಿತೆಂಬ ಮಾತು ವಾಚಕರ ಲಕ್ಷ್ಯದಲ್ಲಿ ಬರಬಹುದಾಗಿದೆ

ಇನ್ನು, ಪರಮಹಂಸರ ಮುಂದಿನಏಳು ತಲೆಗಳವರೆಗೆ ಮಹಾತ್ಮರಾದ ಅಜಮೀರ ಸಾಹೇಬರವರ ವರಪ್ರದಾನದಿಂದ ಜ್ಞಾನವೂ, ಸಿದ್ಧಿಗಳೂ ಜನ್ಮತಃ ಪ್ರಾಪ್ತವಾಗತಕ್ಕವಾದದ್ದರಿಂದ, ಅವರು ಗುರುಭಕ್ತಿಯೊಂದರಿಂದಲೇ ಜ್ಞಾನವನ್ನೂ, ಸಿದ್ಧಿಗಳನ್ನೂ ಅನಾಯಾಸವಾಗಿಪಡೆದರು, ಆದ್ದರಿಂದ ಅವರಿಗೆ ಆ ಜ್ಞಾನದ ಹಾಗು ಸಿದ್ಧಿಗಳ ಪ್ರಾಪ್ತಿಯ ಆದ್ಯಸಾಧನವಾದ ಕರ್ಮಯೋಗದ ಆವಶ್ಯಕತೆಯು ಇಲ್ಲದಾಯಿತು ಅಂತೇ ಅವರು ಸದಾಚಾರ-ದುರಾಚಾರಗಳ ಹಂಗಿಲ್ಲದೆ ಸ್ವೇಚ್ಛಾಚಾರಿಗಳಾಗಿಯೂ ಮಾನ್ಯತೆಪಡೆದು ಲೋಕಕಲ್ಯಾಣಮಾಡಿದರು! ಹೀಗೆ ಪರಮಹಂಸರ ಮುಂದಿನ ಆರು ತಲೆಗಳವರು ಗುರುಭಕ್ತಿಯೊಂದರ ಬಲದಿಂದಲೇ ಜ್ಞಾನವನ್ನೂ, ಸಿದ್ಧಿಗಳನ್ನೂ ಪಡೆದದ್ದರಿಂದ, ಅವರ ಚರಿತ್ರ ಖಂಡಕ್ಕೆ "ಭಕ್ತಿಯೋಗ ಪ್ರಧಾನಂಖಡ" ವೆಂದು ಹೆಸರಿಟ್ಟೆವು.

ಆದರೆ ಈ ಆರು ತಲೆಗಳವರ ಕರ್ಮಹೀನತೆಯೂ, ಸದಾಚಾರ-ದುರಾಚಾರಗಳ ತಾರತಮ್ಯರಾಹಿತ್ಯವೂ ಐಹಿಕಸುಖಕ್ಕೂ, ಲೋಕಸಂಗ್ರಹಕ್ಕೂ, ಲೌಕಿಕಸುವ್ಯಸ್ಥೆಗೂ ಬಾಧಕವಾಗಿದ್ದು, ಅವರ ಆ ಕರ್ಮಹೀನತೆಯು ಅಜ್ಞಾನಿಗಳ ಐಹಿಕ ಸುಖವನ್ನಷ್ಟೇ ಅಲ್ಲ, ಅವರ ಪಾರತ್ರಿಕ ಸುಖವನ್ನೂ ಮಣ್ಣುಗೂಡಿಸುವದು. ಅಂದಬಳಿಕ ಜನ್ಮತಃ ಸಿದ್ಧಿ-ಜ್ಞಾನಗಳನ್ನು ಪಡೆಯಲು ಆಸ್ಪದವಿಲ್ಲದ ಲೋಕಾಪುರ ಪೀಠದ ಏಳನೆಯ ತಲೆಯ ಮುಂದಿನ ತಲೆಗಳಪೀಠಸ್ಥರು, ತಮ್ಮ ಪೀಠದಸಾಂಪ್ರದಾಯದೊಡನೆ ವರ್ಣಾಶ್ರಮಧರ್ಮಕ್ಕನುಸರಿಸಿ, ಕರ್ಮ-ಭಕ್ತಿಗಳ ಸಾಧನದಿಂದ ತಪಶ್ಚರ್ಯಮಾಡಿ, ಅಂದರೆ

ಅಂತರಿಂದ್ರಿಯ-ಬಹಿರಿಂದ್ರಿಯಗಳ ನಿಗ್ರಹಮಾಡಿ ಸದ್ಗುರು ಕೃಪೆಯಿಂದ ಜ್ಞಾನವನ್ನೂ, ಸಿದ್ಧಿಗಳನ್ನೂ ಪಡೆಯುವದು ಆವಶ್ಯವಾಯಿತು. ಅಂತೇ ಅತ್ಯಂತ ಸ್ವೇಚ್ಛಾಚಾರಿಗಳೆಂದು ಅಜ್ಞಾನಿ ಲೌಕಿಕರಿಂದ ತಿರಸ್ಕರಿಸಲ್ಪಟ್ಟ ಮಹಾಜ್ಞಾನಿಗಳಾದ ರಾಮಚಂದ್ರ ಸ್ವಾಮಿಗಳೇ, ತಮ್ಮಣದೀಕ್ಷಿತರ ಪತ್ನಿಯಾದ ಸಾಧ್ವೀ ಗಂಗಾಬಾಯಿಯವರ ಉದರದಿಂದ ಪುನರ್ಜನ್ಮತಾಳಿ "ಬಾಲಭುಜಂಗಯೋಗಿ" ಎಂಬಹೆಸರಿಟ್ಟುಕೊಂಡು, ವರ್ಣಾಶ್ರಮ ಧರ್ಮಗಳ, ಹಾಗು ಸತ್ಕರ್ಮ ಸದಾಚಾರಗಳ ಪ್ರಾಶಸ್ತ್ಯವನ್ನು ಸ್ಥಾಪಿಸ ಬೇಕಾಯಿತು! ಆದ್ದರಿಂದ ಈ ಬಾಲ ಭುಜಂಗಯೋಗಿಗಳ, ಹಾಗು ಅವರ ಮುಂದಿನ ಪೀಳಿಗೆಗಳವರ ಚರಿತ್ರಖಂಡಕ್ಕೆ "ಕರ್ಮಯೋಗ ಪ್ರಧಾನ ಖಂಡ" ಎಂಬ ಹೆಸರನ್ನು ಇಟ್ಟಿರುವೆವು. ಈ ಕರ್ಮಯೋಗ ಪ್ರಾಶಸ್ತ್ಯದ ಪವಿತ್ರ ಸಾಂಪ್ರದಾಯದ ಪ್ರತಿಷ್ಠಾಪನಾಚಾರ್ಯರು, ಅಜಮೀರಸಾಹೇಬರವರ ವರಪ್ರದಾನದಂತೆ ಜನ್ಮತಃ, ಅಂದರೆ ಪೀಠಕ್ಕೆ ಕುಳಿತಂದಿನಿಂದ ಜ್ಞಾನವನ್ನೂ, ಸಿದ್ಧಿಗಳನ್ನೂ ಪಡೆದಿದ್ದ ಏಳನೆಯ ತಲೆಯ ಬಾಲಭುಜಂಗ ಯೋಗಿಗಳೇ ಆಗಿರುವರು; ಆದ್ದರಿಂದ ಆ ಪವಿತ್ರ ಸಾಂಪ್ರದಾಯಾದ್ಯರ ಚರಿತ್ರವನ್ನು, ಪರಮ ಹಂಸರ ಪ್ರೇರಣೆಯಂತೆ ಸಂಕೋಚ ಸಂಶಯಗಳಿಲ್ಲದೆ ಯಥಾಮತಿ ಕ್ರಮವಾಗಿ ಇನ್ನು ಬರೆಯತೊಡಗುವೆವು.

ಈ ಬಾಲಭುಜಂಗ ಯೋಗಿಗಳ ಹಿಂದಿನವರಾದ ಲೋಕಾಪುರ ಪೀಠದ ೬ನೆಯ ತಲೆಯ ರಾಮಚಂದ್ರ ಸ್ವಾಮಿಗಳೆಂಬವರು ಮಹಾ ತೇಜಸ್ವಿಗಳೂ ಮಹಿಮಾಶಾಲಿಗಳೂ ಆಗಿದ್ದರೆಂಬದನ್ನು ಇದರ ಹಿಂದಿನ ಭಕ್ತಿಯೋಗ ಪ್ರಧಾನಖಂಡವೆಂಬ ೨ನೇ ಖಂಡದಲ್ಲಿ ವಿಶದವಾಗಿ ವರ್ಣಿಸಿರುತ್ತದೆ ಈ ರಾಮಚಂದ್ರ ಸ್ವಾಮಿಗಳು ವರ್ಷಂಪ್ರತಿಯಂತೆ ಜ್ಞಾನೇಶ್ವರ ಸ್ವಾಮಿಗಳ ಆರಾಧನೆಗಾಗಿ ಕಾಖಿಂಡಿಕಿಎಂಬ ಗ್ರಾಮಕ್ಕೆ ಹೋದರು ಜ್ಞಾನೇಶ್ವರ ಸ್ವಾಮಿಗಳು ಲೋಕಾಪುರ ಮಠದ ಮೂಲ ಪುರುಷರಾದ ಪರಮಹಂಸರ ಹಿರಿಯ ಮಕ್ಕಳು; ಅಂದರೆ ಲೋಕಾಪುರ ಪೀಠದ ಎರಡನೆಯ ತಲೆಯವರು; ಅವರಿಗೆ ಸನ್ಯಾಸಗ್ರಹಣವಾಗಿದ್ದು, ಅವರ ವೃಂದಾವನವು ಕಾಖಿಂಡಿಕಿಯಲ್ಲಿ ಆಗಿರುತ್ತದೆ. ಈ ಜ್ಞಾನೇ

ಶ್ವರ ಸ್ವಾಮಿಗಳ ಮಹಿಮೆಯ ವರ್ಣನವು ಈ ಕರ್ಮಯೋಗ ಪ್ರಧಾನ ಖಂಡದ ಹಿಂದಿನ “ ಭಕ್ತಿಯೋಗಪ್ರಧಾನಖಂಡವೆ”ಂಬ ೨ನೇ ಖಂಡದ ಲ್ಲಿಯೇ ಬಂದಿರುತ್ತದೆ; ಅದರಂತೆ, ಪೀಠದ ಮೂಲ ಪುರುಷರಾದ ಪರಮಹಂಸರಅಮೃತ ಚರಿತ್ರ ವರ್ಣನವು, “ ಜ್ಞಾನಯೋಗ ಪ್ರಧಾನಖಂಡ” ವೆಂಬ ಒಂದನೆಯ ಖಂಡದಲ್ಲಿ ಬಂದಿರುತ್ತದೆ; ಆ ಹಿಂದಿನ ೧ನೆಯ “ಜ್ಞಾನ ಯೋಗ ಪ್ರಧಾನಖಂಡ ” ವನ್ನೂ, ೨ನೆಯ “ಭಕ್ತಿಯೋಗ ಪ್ರಧಾನ ಖಂಡ ” ವನ್ನೂ, ಇನು ಬೇಗನೆ ಪ್ರಸಿದ್ಧ ಮಾಡುವೆವು. ಇರಲಿ, ಆರಾಧನೆಗೆ ಹೋದ ರಾಮಚಂದ್ರ ಸ್ವಾಮಿಗಳು ತಮ್ಮ ಪ್ರತಿವರ್ಷದ ಪದ್ಧತಿಯಂತೆ ಮಠದ ಮಗ್ಗಲಿನ ಭಾವಿಯ ಹತ್ತರ ಗುಡಿಸಲಿನಲ್ಲಿ ಇಳಿದುಕೊಂಡಿದ್ದರು ಈ ಸಾರೆಯ ಆರಾಧನೆಯೇ ರಾಮಚಂದ್ರ ಸ್ವಾಮಿಗಳಿಗೆ ಕಡೆಯ ಆರಾಧನೆಯಾಗಿದ್ದು, ಈ ಪ್ರಸಂಗದಲ್ಲಿ ಅವರು ಅದ್ಭುತವಾದಭವಿಷ್ಯ ಹೇಳಿದ ವೃತ್ತಾಂತವನ್ನು ಈ ಅಧ್ಯಾಯದಲ್ಲಿ ಬರೆಯುವೆವು. ಈ ಅದ್ಭುತ ಭವಿಷ್ಯಕಥನಕ್ಕೆ ಕೃಷ್ಣಾತೀರದ ಚಿನ್ನಗುಂಡಿ ಎಂಬ ಗ್ರಾಮದ ಅಮ್ಮಣದೀಕ್ಷಿತರ ವಂಶದ ಸಂಬಂಧವಿರುವದರಿಂದ, ಇದರ ಹಿಂದಿನ ಖಂಡದಲ್ಲಿ ವರ್ಣಿಸಿರುವ ಆ ಅಮ್ಮಣದೀಕ್ಷಿತರ ವಂಶಾವಲಿಯನ್ನು ಸ್ವಲ್ಪದರಲ್ಲಿ ಮೊದಲು ಇಲ್ಲಿ ನೆನಪಿಗೆ ತಂದುಕೊಡುತ್ತೇವೆ.

ಶ್ರೀಮಹಾಸ್ವಾಮಿ ಚಿದಂಬರ ದೀಕ್ಷಿತರ ಅನುಗ್ರಹದಿಂದ ಅಮ್ಮಣ್ಣನೆಂಬ ಗೃಹಸ್ಥನು ಅಮ್ಮಣ್ಣದೀಕ್ಷಿತನೆಂಬ ಹೆಸರಿನಿಂದ ವೈದಿಕನಾದ ವೃತ್ತಾಂತವು ಹಿಂದಿನ ಖಂಡದಲ್ಲಿ ಬಂದು ಹೋಗಿದೆ. ಆ ಅಮ್ಮಣದೀಕ್ಷಿತರಿಗೆ ಅಣ್ಣಾದೀಕ್ಷಿತರು, ಯಜ್ಞೇಶ್ವರ ದೀಕ್ಷಿತರು, ರಾಮದೀಕ್ಷಿತರು ಎಂಬ ಮೂವರು ಮಕ್ಕಳಿದ್ದರೆಂಬ ಸಂಗತಿಯನ್ನು ಹಿಂದೆ ಹೇಳಿರುತ್ತದೆ. ಈ ಅಮ್ಮಣದೀಕ್ಷಿತರು ಸ್ವರ್ಗಸ್ಥರಾಗಿದ್ದರಲ್ಲದೆ, ಅವರ ಹಿರಿಯಮಕ್ಕಳಾದ ಅಣ್ಣಾದೀಕ್ಷಿತರೂ, ಯಜ್ಞೇಶ್ವರ ದೀಕ್ಷಿತರೂ ಈಗ ಸ್ವರ್ಗಸ್ಥರಾಗಿ, ರಾಮದೀಕ್ಷಿತರೆಂಬರೊಬ್ಬರುಮಾತ್ರ ಜೀವಂತವಾಗಿದ್ದರು. ಎರಡನೆಯ ಜ್ಞಾನೇಶ್ವರ ಸ್ವಾಮಿಗಳು ಅಣ್ಣಾದೀಕ್ಷಿತರಿಗೆ ಕಾಕಾ ಎಂದು ಕರೆಯುತ್ತಿದ್ದಂತೆ, ಈಗರಾಮಚಂದ್ರಸ್ವಾಮಿಗಳು ರಾಮದೀಕ್ಷಿತರಿಗೆ ಕಾಕಾ ಎಂದು

ಕರೆಯುತ್ತಿದ್ದರು. ಈ ರಾಮದೀಕ್ಷಿತರಿಗೆ ತಮ್ಮಣದೀಕ್ಷಿತರೆಂಬ ಒಬ್ಬ ಮಕ್ಕಳಿದ್ದರು. ವರ್ಷಾ ಆರಾಧನೆಗೆ ಬರುವಂತೆ, ರಾಮದೀಕ್ಷಿತರು ತಮ್ಮ ಮಕ್ಕಳಾದ ತಮ್ಮಣದೀಕ್ಷಿತರೊಡನೆ ಈ ವರ್ಷವೂ ಕಾಖಿಂಡಿಕೆಗೆ ಆರಾಧನೆಗಾಗಿ ಬಂದಿದ್ದರು.

**ಅದ್ಭುತ ಭವಿಷ್ಯ ಕಥನ**—ಆರಾಧನೆಗೆ ಬಂದಜನರು ರಾಮಚಂದ್ರ ಸ್ವಾಮಿಗಳಿಗೆಕಾಯಿಯಿಟ್ಟುನಮಸ್ಕಾರಮಾಡಿದಕೂಡಲೆ, ಅವರಕಾಯನ್ನು ತಿರುಗಿ ಅವರ ಉಡಿಯಲ್ಲಿ ಹಾಕುವದು ಅವರ ಸಾಂಪ್ರದಾಯವಾಗಿತ್ತು; ಆದರೆ ತಮ್ಮಣದೀಕ್ಷಿತರ ಕಾಯನ್ನುಮಾತ್ರ ಅವರು ತಿರುಗಿ ಆವರ ಉಡಿಯಲ್ಲಿಹಾಕದೆ, ತಮ್ಮ ಕಂಟಲಿಯಲ್ಲಿಹಾಕಿಕೊಳ್ಳುತ್ತ ಬರುತ್ತಿದ್ದರು! ಇದರಿಂದ ತಮ್ಮಣದೀಕ್ಷಿತರಿಗೆ ಬಹಳ ಅಸಮಾಧಾನವಾಗುತ್ತಿತ್ತು. ಸಂತತಿಯಿಲ್ಲದ ಅವರಿಗೆ, ಸ್ವಾಮಿಗಳ ಈರೀತಿಯು ಅವರ ಅವಕೃಪೆಯಲಕ್ಷಣವಾಗಿ ತೋರಿದ್ದರಿಂದ, ಸ್ವಾಮಿಗಳು ಕಾಯಿಯನ್ನು ತಮ್ಮ ಕಂಟಲಿಯಲ್ಲಿ ಹಾಕಿ ಕೊಂಡಾಗೆಲ್ಲ ಆ ದೀಕ್ಷಿತರ ಮನಸ್ಸು ಉದಾಸವಾಗುತ್ತಿತ್ತು! ಆದರೆ ತ್ರಿಕಾಲ ಜ್ಞಾನಿಗಳಾದ ರಾಮಚಂದ್ರ ಸ್ವಾಮಿಗಳ ಅಂತರ್ಗತ ವಿಚಾರವು ತಮ್ಮಣದೀಕ್ಷಿತರಿಗೆ ಹೇಗೆಗೊತ್ತಾಗಬೇಕು? ಪ್ರತಿವರ್ಷದಂತೆ ಈ ವರ್ಷವೂ ರಾಮಚಂದ್ರಸ್ವಾಮಿಗಳು ತಮ್ಮಣದೀಕ್ಷಿತರ ಕಾಯನ್ನು ಅವರ ಉಡಿಯಲ್ಲಿಹಾಕದೆ ತಮ್ಮ ಕಂಟಲಿಯಲ್ಲಿಯೇ ಹಾಕಿಕೊಂಡಿದ್ದರು!

ಹೀಗಿರುವಾಗ ತಮ್ಮಣದೀಕ್ಷಿತರು ಮಠದ ಮುಂದಿನ ಹಳ್ಳಕ್ಕೆ ಸ್ನಾನ ಕ್ಕಾಗಿ ಹೋಗಿರಲು, ರಾಮಚಂದ್ರಸ್ವಾಮಿಗಳು ಅಕಸ್ಮಾತ್ತಾಗಿ ತಮ್ಮಣ ದೀಕ್ಷಿತರನ್ನು ಕುರಿತು—"ತಮ್ಯಾ, ತಮ್ಯಾ, ಏ ತಮ್ಯಾ" ಎಂದು ಕೂಗ ಹತ್ತಿದರು. ಆಗ ತಮ್ಮಣದೀಕ್ಷಿತರು ಬುದ್ಧಿಪೂರ್ವಕವಾಗಿಯೇ ಅವರ ಆ ಕೂಗನ್ನು ದುರ್ಲಕ್ಷಿಸಿ, ಅವರ ಬಳಿಗೆ ಹೋಗಲಿಲ್ಲ. ಆಗ ರಾಮಚಂದ್ರ ಸ್ವಾಮಿಗಳು ಅವರಿದ್ದಲ್ಲಿಗೆ ತಾವೇ ಹೋಗಿ ಅವರನ್ನು ಕುರಿತು—"ತಮ್ಯಾ, ಬಾ, ಫಲಕೊಡುತ್ತೇನೆ" ಎಂದು ಕರೆದರು. ಆಗ ತಮ್ಮಣದೀಕ್ಷಿತರು ಸಿಥಿಯ ಎಟ್ಟಿತನದಿಂದ—"ಇಷ್ಟು ದಿವಸ ನನಗೆ ಫಲಕೊಟ್ಟಿರಲ್ಲ, ಈಗೂ ಹಾಗೆಯೇ ಫಲಕೊಡುವವರು; ನನಗೇನು ನಿಮ್ಮ ಫಲವು ಬೇಕಾಗಿರುವ

ದಿಲ್ಲ." ಎಂದು ನುಡಿದರು! ಆಗ ಸ್ವಾಮಿಗಳು ತಮ್ಮಣದೀಕ್ಷಿತರಬಳಿಗೆ ಹೋಗಿ, ಒಮ್ಮೆ ಅವರ ಕಪಾಳಕ್ಕೆ ಹೊಡೆದು, ರಟ್ಟೆಯು ಹಿಡಿದು ಎಳಕೊಂಡು ಬಂದು ಅವರ ಉಡಿಯಲ್ಲಿ ಜುಲುಮೆಯಿಂದ ಫಲಮಂತ್ರಾಕ್ಷತೆಯನ್ನು ಹಾಕಿದರು!

ಪ್ರತಿವರ್ಷ ಜ್ಞಾನೇಶ್ವರ ಸ್ವಾಮಿಗಳ ದೊಡ್ಡ ಆರಾಧನೆಯದಿವಸ ಎಲಿಪೂಜೆಕಟ್ಟುವ ಸಾಂಪ್ರದಾಯವಿದ್ದಂತೆ, ಆ ವರ್ಷವೂ ಎಲಿಪೂಜೆಯನ್ನು ಕಟ್ಟಿದ್ದರು. ಆರತಿಯ ಕಾಲಕ್ಕಷ್ಟೇ ಸ್ವಾಮಿಗಳು ಮಠದಲ್ಲಿ ಬರುತ್ತಿದ್ದು, ಉಳಿದ ಕಾಲದಲ್ಲೆಲ್ಲ ಅವರು ತಮ್ಮ ಸೂಳೆಯೊಡನೆ ಗುಹಿಸಿಲಿನಲ್ಲಿ ಇರುತ್ತಿದ್ದರು. ಆರತಿಯ ಸಮಯವಾಗಲು, ಮಟ್ಟಿಹಾಳದ ತೀರ್ಥಪ್ಪನು ರಾಮಚಂದ್ರಸ್ವಾಮಿಗಳನ್ನು ಕರೆಯುವದಕ್ಕಾಗಿ ಅವರ ಬಳಿಗೆ ಹೋಗಿ—"ಅಣ್ಣಾ, ಆರತಿಗೆ ಬಾ" ಎಂದು ಕರೆದರು. ಆಗ ಆನಂದಮಗ್ನರಾಗಿದ್ದ ರಾಮಚಂದ್ರಸ್ವಾಮಿಗಳು ಕೂಡಲೆ ಎದ್ದು ತೀರ್ಥಪ್ಪನ ಹೆಗಲಮೇಲೆ ಕೈಹಾಕಿಕೊಂಡು ಮಠದಲ್ಲಿ ಬಂದರು. ಆಗ ಜ್ಞಾನೇಶ್ವರ ಸ್ವಾಮಿಗಳ ಆರತಿಗೆ ಪ್ರಾರಂಭವಾಯಿತು. ಹೀಗೆ ಆರತಿ ನಡೆದಿರುವ ಕಾಲದಲ್ಲಿ ಶ್ರೀಜ್ಞಾನೇಶ್ವರ ಸ್ವಾಮಿಗಳಿಗೆ ಕಟ್ಟಿದ್ದ ಎಲಿಪೂಜೆಯು ಕಳಚಿಬಿದ್ದಿತು! ಆಗ ತೀರ್ಥಪ್ಪನು—"ಅಣ್ಣಾ, ಎಲಿಪೂಜೆಯು ಬಿದ್ದಿತು" ಎಂದು ಹೇಳಲು, ಅದಕ್ಕೆ ರಾಮಚಂದ್ರಸ್ವಾಮಿಗಳು—"ಉಳಿದವರಾರೂ ಸಂಶಯಪಡುವ ಕಾರಣವಿಲ್ಲ; ಆದರೆ ಮುಂದಿನವರ್ಷ ಜ್ಞಾನೇಶ್ವರ ಸ್ವಾಮಿಗಳ ಆರಾಧನೆಗೆ ನಾನು ಬರುವದಿಲ್ಲ" ಎಂದು ಎಲ್ಲರ ಸಮಕ್ಷ ಹೇಳಲು, ಎಲ್ಲರಿಗೂ ಆಶ್ಚರ್ಯವಾದದ್ದಲ್ಲದೆ, ಅಸಮಾಧಾನವೂ ಆಯಿತು; ಆದರೆ ಆಗ ಯಾರೂ ಏನೂ ಮಾತಾಡಲಿಲ್ಲ!

ಮುಂದೆ ಆರತಿಮುಂತಾದ ಎಲ್ಲ ವಿಧಾನಗಳು ಮುಗಿದು, ಎಲ್ಲರೂ ಊಟಕ್ಕೆ ಕುಳಿತುಕೊಂಡರು. ಆಗ ಸ್ವಾಮಿಗಳು ಪುನಃ ರಾಮದೀಕ್ಷಿತರನ್ನು ಕುರಿತು—"ಕಾಕಾ, ನನಗೆ ಇದೇ ಕಡೆಯ ಆರಾಧನೆಯು. ಈ ಸಾರೆ ಎಲಿಪೂಜೆ ಕತ್ತರಿಸಿ ಬಿದ್ದಾಗಲೇ ಈ ಮಾತನ್ನು ಎಲ್ಲರ ಸಮಕ್ಷ ಹೇಳಿದ್ದೇನೆ; ಮತ್ತು ಅದನ್ನು ತಿಳಿದು ಆರತಿಯಾಗುವಮೊದಲೇ ತಮ್ಮನಿಗೆ ಫಲಮಂ

ತ್ರಾಕ್ಷತೆಯನ್ನು ಕೊಟ್ಟಿದ್ದೇನೆ. ಮುತ್ತಯ್ಯನ ಅಪ್ಪಣೆಯಾಗಿರುವದರಿಂದ, ಮುಂದಿನ ಆರಾಧನೆಗೆ ನಾನು ಬರುವದಿಲ್ಲ, ಇದು ಖಂಡಿತವು, " ಎಂದು ಹೇಳಿದರು. ಅದನ್ನು ಕೇಳಿದವರಿಗೆಲ್ಲ ಮತ್ತಿಷ್ಟು ಅಸಮಾಧಾನವಾಯಿತು. ಆಗ ರಾಮದೀಕ್ಷಿತರು ರಾಮಚಂದ್ರಸ್ವಾಮಿಗಳನ್ನು ಕುರಿತು—"ಅಪ್ಪಾ, ನಿಮ್ಮ ದೊಡ್ಡವರ ಆಟವು ನಮಗೆ ತಿಳಿಯದು. ಹಾಗಿದ್ದರೆ ಮಠದವ್ಯವಸ್ಥೆ ಯೇನುಮಾಡಿದೆ? "ಎಂದು ಕೇಳಲು, ಸ್ವಾಮಿಗಳು—"ಏನು ಮಾಡಬೇಕೆಂ ಬದನ್ನು ತಮ್ಮಣದೀಕ್ಷಿತನಮುಂದೆ ಹೇಳಿದ್ದೇನೆ. " ಎಂದು ಉತ್ತರಕೊ ಟ್ಟರು. ಆಗ ರಾಮದೀಕ್ಷಿತರು ತಮ್ಮ ಮಗನಾದ ತಮ್ಮಣದೀಕ್ಷಿತನನ್ನು ಕುರಿತು—"ತಮ್ಮಾ, ಸ್ವಾಮಿಗಳು ಏನು ಹೇಳಿರುವರು?" ಎಂದು ಕೇಳಲು, ತಮ್ಮಣದೀಕ್ಷಿತರು—"ಏನೂ ಹೇಳಿರುವದಿಲ್ಲ; ಒಮ್ಮೆ ಕಪಾಳಕ್ಕೆ ಹೊಡೆದು, ಜುಲುಮೆಯಿಂದ ಎಳಕೊಂಡುಹೋಗಿ ಫಲಮಂತ್ರಾಕ್ಷತೆಯನ್ನು ಮಾತ್ರ ಕೊಟ್ಟಿರುವರು. " ಎಂದು ಹೇಳಿದರು. ಅದನ್ನು ಕೇಳಿದಕೂಡಲೆ ರಾಮದೀ ಕ್ಷಿತರು ಸ್ವಾಮಿಗಳಕಡೆಗೆ ತಿರುಗಿ—"ನೀನು ಫಲಕೊಟ್ಟದ್ದರಿಂದ ತಮ್ಮನಿಗೆ ಪುತ್ರೋತ್ಸವವಾಗುವದು ನಿಶ್ಚಯವು; ಆದರೆ ಮಠದ ವ್ಯವಸ್ಥೆಯೇನು ಮಾಡಿದಹಾಗಾಯಿತು? ತಮ್ಮನಿಗೆ ಮಗನು ಹುಟ್ಟಿದರೆ ತಮ್ಮನಿಗಾದನು ಆತನ ಸಂಬಂಧವು ಮಠಕ್ಕೇನು ? " ಎಂದು ಕೇಳಿದರು. ಆಗ ಸ್ವಾಮಿ ಗಳು ಗಾಂಭೀರ್ಯದಿಂದ—" ಕಾಕಾ, ಅಣ್ಣನ ಹೊಟ್ಟೆಯಲ್ಲಿ ಹುಟ್ಟಿ ದರೇನು, ತಮ್ಮನ ಹೊಟ್ಟೆಯಲ್ಲಿ ಹುಟ್ಟಿದರೇನು ? ತಮ್ಮನ ಹೊಟ್ಟೆಯಲ್ಲಿ ಹುಟ್ಟಿದ ಮಗನೇಮಠಕ್ಕೆ ಆಗುವನು. " ಎಂದು ಉತ್ತರ ಕೊಟ್ಟರು. ಅದಕ್ಕೆ ರಾಮದೀಕ್ಷಿತರು ಏನೂ ಮಾತಾಡಲಿಲ್ಲ. ಊಟವಾಯಿತು. ಆರಾಧನೆಯ ಕೆಲಸವೆಲ್ಲಮುಗಿಯಿತು.

ಹೀಗೆ ಆರಾಧನೆಯ ಕಾರ್ಯವೆಲ್ಲ ಮುಗಿದಬಳಿಕ ರಾಮಚಂದ್ರಸ್ವಾಮಿ ಗಳು, ನಿಶಾನೆಯನ್ನು ಲೋಕಾಪುರ ಮಠಕ್ಕೆ ಒಯ್ಯಹೇಳಿ, ಅದನ್ನು ಮಠ ದೊಳಗಿನಬೇವಿನಗಿಡಕ್ಕೆ ಕಟ್ಟಿಹಾಕಿಬಿಡೆಂದು ನಿಶಾನೆಯವನಿಗೆ ಆಜ್ಞಾಪಿಸಿ, ತಾವು ರಾಮದೀಕ್ಷಿತರೊಡನೆ ಅವರ ಊರಾದ ಚಿನಗುಂಡಿಗೆ ಹೊರಟರು. ಅವರು ಚಿನಗುಂಡಿಗೆ ಮುಟ್ಟಿ, ಮನೆಗೆಬರಲು, ತಮ್ಮಣದೀಕ್ಷಿತರ ಹೆಂಡತಿ

ಗಂಗಾಬಾಯಿಯೆಂಬವರು ಮುಟ್ಟಾಗಿ ನಾಲ್ಕನೆಯದಿವಸವಾದದ್ದರಿಂದ, ಎರ ಕೊಂಡು ಹಿತ್ತಲಲ್ಲಿ ಕುಳ್ಳುಹಚ್ಚುತ್ತ ಕುಳಿತಿದ್ದರು. ಆಗ ರಾಮಚಂದ್ರಸ್ವಾಮಿಗಳು ಅವರನ್ನು ಕುರಿತು—"ಗಂಗಾಬಾಯೀ, ಬೇಗನೆ ಅಡಿಗೆ ಮಾಡು" ಎಂದು ಹೇಳಿದರು. ಅದಕ್ಕೆ ಗಂಗಾಬಾಯಿಯವರು ಸಂಕೋಚಪಡುತ್ತ–" ಸ್ವಾಮೀ, ನಾನು ಮುಟ್ಟಾಗಿ ಇಂದು ಎರಕೊಂಡಿದ್ದೇನೆ, ಅಡಿಗೆಮಾಡುವದು ಹೇಗೆ?" ಎಂದು ನುಡಿಯಲು, ಸ್ವಾಮಿಗಳು—"ಅದನ್ನಾರು ನಿನ್ನನ್ನು ಕೇಳಿದರು? ನಾನು ಅಡಿಗೆಮಾಡೆಂದು ಹೇಳುವೆನು, ಮಾಡಿದರಾಯಿತು!" ಎಂದು ನುಡಿದರು.

ರಾಮಚಂದ್ರಸ್ವಾಮಿಗಳ ಮಾತಿಗೆ ತಿರುಗಿ ಮಾತಾಡುವದುಂಟೆ? ಅವರ ತೇಜಸ್ವಿತೆಯೇ ಅಷ್ಟು ಪ್ರಖರವಾದದ್ದು. ಸದಾಚಾರಿಗಳಾದ ತೇಜಸ್ವಿಗಳು ತಮ್ಮ ಸದಾಚರಣೆಯ ವರ್ಚಸ್ಸಿನ ಸಹಾಯದಿಂದ ಮಂದಿಯಮೇಲೆ ವರ್ಚಸ್ಸನ್ನು ಸಹಜವಾಗಿ ಕೂಡಿಸಬಹುದು; ಆದರೆ ರಾಮಚಂದ್ರಸ್ವಾಮಿಗಳಂಥ ದುರಾಚಾರಿಗಳತೇಜಸ್ವಿತೆಗೆ ಅವರ ದುರಾಚಾರದ ಹೀನತೆಯು ಪ್ರತಿಬಂಧಕವಾಗಿದ್ದರೂ, ಅವರ ತೇಜಸ್ಸು ಅಪ್ರತಿಬಂಧದಹಂಗಿಲ್ಲದೆ ಮಂದಿಯಮೇಲೆ ತನ್ನ ವರ್ಚಸ್ಸು ಕೂಡಿಸುತ್ತಿರುವದನ್ನು ಮನಸ್ಸಿನಲ್ಲಿ ತಂದರೆ, ಅವರ ಆ ತೇಜಸ್ಸು ಎಷ್ಟು ಪ್ರಖರವಾದದ್ದೆಂಬದರ ಕಲ್ಪನೆಯಾಗುವದು! ಗಂಗಾಬಾಯಿಯು ಕೂಡಲೆ ಕುಳ್ಳುಹಚ್ಚುವದನ್ನು ಬಿಟ್ಟು, ಸ್ವಾಮಿಗಳ ಅಪ್ಪಣೆಯಂತೆ ಮೈತೊಳಕೊಂಡು ಅಡಿಗೆಗೆ ಇಟ್ಟಳು! ಅಡಿಗೆಯಾಯಿತು, ಸ್ವಾಮಿಗಳ ಪಂಗ್ತಿಯಲ್ಲಿ ಎಲ್ಲರೂ ಊಟಕ್ಕೆ ಕುಳಿತುಕೊಂಡರು. ಆಗ ಸ್ವಾಮಿಗಳು ಕೈಯಲ್ಲಿ ಆಪೋಶನಹಾಕಿಕೊಂಡು ರಾಮದೀಕ್ಷಿತರನ್ನು ಕುರಿತು—"ಕಾಕಾ, ತಮ್ಮಣದೀಕ್ಷಿತನ ಹೊಟ್ಟೆಯಲ್ಲಿ ಗಂಡುಹುಟ್ಟುವದಂತು ನಿಶ್ಚಯವು. ಆ ಹುಡುಗನನ್ನು ಮಠಕ್ಕೆ ಕೊಡುತ್ತೇನೆಂದು ನೀನು ಹೇಳಿದರೆ, ಆಪೋಶನತಕ್ಕೊಳ್ಳುವೆನು, ಇಲ್ಲದಿದ್ದರೆ ನೀರು ಕೆಳಗೆ ಚಲ್ಲುವೆನು!" ಅನ್ನಲು, ರಾಮದೀಕ್ಷಿತರು—"ಅವರ ತಾಯಿತಂದೆಗಳು ಕೊಟ್ಟರೆ, ನನ್ನ ಪ್ರತಿಬಂಧವಿಲ್ಲ; ನಿಮ್ಮಮಾತು ನಡಿಸುವದರಲ್ಲಿಯೇ ನಮ್ಮ ಕಲ್ಯಾಣವಿರುವದು." ಅನ್ನಲು,

ಮಗನನ್ನು ನಮ್ಮ ಮಠಕ್ಕೆ ಕೊಡುತ್ತೀಯೋ ಇಲ್ಲವೊ?" ಎಂದು ಕೇಳಲು, ತಮ್ಮಣದೀಕ್ಷಿತರು—"ಹಿರಿಯರ ಒಪ್ಪಿಗೆಯಿದ್ದಬಳಿಕ ನನ್ನ ಒಪ್ಪಿಗೆಯಿದ್ದ ಹಾಗೆಯೇ. ತಮ್ಮ ಅಪ್ಪಣೆಯಂತೆ ಇನ್ನು ಹುಟ್ಟುವ ಮಗನನ್ನು ಆವಶ್ಯ ವಾಗಿ ಮಠಕ್ಕೆಕೊಡುವೆನು" ಎಂದು ಹೇಳಿದರು. ಬಳಿಕ ಸ್ವಾಮಿಗಳು ಗಂಗಾಬಾಯಿಗೆ—"ಯಾಕೆ ಗಂಗಾಬಾಯೀ, ನೀನೇನನ್ನುವೆ ?" ಎಂದು ಕೇಳಲು, ಆಕೆಯು ಅನುಮಾನಿಸುತ್ತ, ಉತ್ತರಕೊಡದೆ ಸುಮ್ಮನೆ ನಿಂತು ಕೊಂಡಳು. ಆಗರಾಮದೀಕ್ಷಿತರು ತಮ್ಮಸೊಸೆಯನ್ನು ಕುರಿತು—"ಗಂಗಾ, ಸುಮ್ಮನೆ ಯಾಕೆನಿಂತೆ? ಕೊಡುತ್ತೇನೆಂದು ಹೇಳು. ಸ್ವಾಮಿಗಳು ಆಪೋಶ ನೋದಕವನ್ನು ಚಲ್ಲಿಕೊಟ್ಟರೆ, ಹುಟ್ಟುವಮಗನೂ ಹುಟ್ಟಲಿಕ್ಕಿಲ್ಲ! ಅಂದ ಬಳಿಕ ನಿನಗೂ ಇಲ್ಲ, ಮಠಕ್ಕೂ ಇಲ್ಲ ಎಂದಹಾಗಾದೀತು" ಅನ್ನಲು, ಗಂಗಾಬಾಯಿಯು ಸ್ವಾಮಿಗಳಿಗೆ—"ನಿಮ್ಮ ಮಾತು ಮೀರುವದು ಹೇಗೆ? ಕೊಡುತ್ತೇನೆ" ಎಂದು ಹೇಳಿದಳು !

ಬಳಿಕ ರಾಮಚಂದ್ರಸ್ವಾಮಿಗಳು ಆಪೋಶನೋದಕವನ್ನು ತಕ್ಕೊಂಡು ಊಟಮಾಡುತ್ತ ರಾಮದೀಕ್ಷಿತರನ್ನು ಕುರಿತು—"ಕಾಕಾ, ಬಹಳ ಸಂತೋ ಷವಾಯಿತು. ನಾನೇ ನಿಮ್ಮ ಮೊಮ್ಮಗನಾಗಿ ಹುಟ್ಟುವೆನು. ಗಂಗಾಬಾ ಯಿಯು ಗರ್ಭಿಣಿಯಾದದಿವಸವೇ ನಿಮ್ಮ ವೃಂದಾವನದಲ್ಲಿ ಒಂದು ಅಶ್ವತ್ಥ ವೃಕ್ಷವೂ, ಒಂದು ಔದುಂಬರವೃಕ್ಷವೂ ಹುಟ್ಟುವವು! ಅವೇ ನನ್ನ ಮಾತಿನ ಸತ್ಯತೆಯಕುರುಹೆಂದುತಿಳಿ. ಹುಟ್ಟಿದ ಆಕೂಸು ಮಠಕ್ಕೆ ಅಧಿಕಾರಿಯಾಗಿ, ನಾನು ಬೇವಿನಮರಕ್ಕೆಬಿಗಿಯುಹೇಳಿದ್ದ ನಿಶಾನೆಯನ್ನು ಬಿಚ್ಚುವನು. ಇನ್ನು ಒಂದು ವರ್ಷದೊಳಗೆ ಆ ಮಹಾತಪಸ್ವಿಯಾದ ಮಗನು ಹುಟ್ಟುವನು." ಎಂದುಹೇಳಿ, ಮಹಾತ್ಮರಾದ ರಾಮಚಂದ್ರಸ್ವಾಮಿಗಳು ಅಂದೇಲೋಕಾಪು ರಕ್ಕೆ ಹೊರಟುಹೋದರು. ಪ್ರಿಯವಾಚಕರೇ, ಇಲ್ಲಿ ಪ್ರಕಟವಾದ ರಾಮ ಚಂದ್ರಸ್ವಾಮಿಗಳ ದೈವೀತೇಜಸ್ಸಿನ ಒಗರನ್ನು ನೋಡಿದಿರೇನು ? ಪುನರ್ಜ ನ್ಮವು ಸತ್ಯವೆಂಬ ಮಾತು ನಿಮಗೆ ಮನದಟ್ಟಾಗಿ ತಿಳಿಯಿತಷ್ಟೆ? ರಾಮಚಂ ಚಂದ್ರಸ್ವಾಮಿಗಳು ತಾವೇ ಹುಟ್ಟಬರುವೆನೆಂದು ಹೇಳಿರುವದರಿಂದ, ಈ ಜನ್ಮದಲ್ಲಿಯು ಅವರ ಪ್ರಖರವಾದ ಅನಾಚಾರವೂ, ಮುಂದಿನ ಜನ್ಮ

ಪಲ್ಲಿಯ ಪ್ರಖರವಾದ ಅವರ ಸದಾಚಾರವೂ ಆ ರಾಮಚಂದ್ರಸ್ವಾಮಿಗಳ ನಿರುಪಾಧಿಕ ಪರಿಶುದ್ಧನಾದ ಆತ್ಮಕ್ಕೆ ಸರ್ವಥಾ ಸಂಬಂಧಿಸುವದಿಲ್ಲವೆಂಬದನ್ನೂ, ಆ ದುರಾಚಾರ-ಸದಾಚಾರಗಳ ದುಷ್ಫಲ-ಸತ್ಫಲಗಳ ಭೋಗಗಳ ವಿಕಾರಗಳು ರಾಮಚಂದ್ರಸ್ವಾಮಿಗಳ ಪರಿಶುದ್ಧಾತ್ಮದಮೇಲೆ ಸರ್ವಥಾ ಆಗುವದಿಲ್ಲವೆಂಬದನ್ನೂ ನೀವು ಸ್ಪಷ್ಟವಾಗಿ ತಿಳಿದುಕೊಳ್ಳಿರಿ.

---

## ೨ನೇ ಅಧ್ಯಾಯ—ಭುಜಂಗಯೋಗಿಯ ಜನ್ಮ



ಹೀಗೆ ಮಹಾತ್ಮರಾದ, ರಾಮಚಂದ್ರಸ್ವಾಮಿಗಳು ತಮ್ಮಣ ದೀಕ್ಷಿತರಿಗೆ ಒತ್ತಾಯದಿಂದ ಫಲ ಮಂತ್ರಾಕ್ಷತೆಯನ್ನುಕೊಟ್ಟು ಭವಿಷ್ಯ ಹೇಳಿದಂತೆ, ಅವರ ಪ್ರಭಾವದಿಂದ ತಮ್ಮಣ ದೀಕ್ಷಿತರ ಕುಟುಂಬವಾದ ಸಾಧ್ವೀ ಗಂಗಾಬಾಯಿಯು ಗರ್ಭಿಣಿಯಾಗಲು, ತಮ್ಮಣ ದೀಕ್ಷಿತರ ಹಿತ್ತಲದ ವೃಂದಾವನದಲ್ಲಿ ಅಶ್ವತ್ಥದ ಹಾಗು ಔದುಂಬರದ ಅಂಕುರಗಳು ಒಡೆದು, ಅವು ದಿನದಿನಕ್ಕೆ ಬೆಳೆಯಹತ್ತಿದವು. ಆ ಪವಿತ್ರ ವೃಕ್ಷಾಂಕುರಗಳು ಬೆಳೆಯತೊಡಗಿದಂತೆ ಗಂಗಾಬಾಯಿಯ ಪವಿತ್ರ ಗರ್ಭಾಂಕುರವು ಬೆಳೆಯತೊಡಗಿತು; ಆ ಪವಿತ್ರ ಗರ್ಭದ ಅಂಕುರವು ಬೆಳೆಯುತ್ತಹೋದಂತೆ ಪುತ್ರೇಚ್ಛುಗಳಾದ ತಮ್ಮಣ ದೀಕ್ಷಿತರ, ಹಾಗು ಗಂಗಾಬಾಯಿಯ ಹೃದಯಗಳೊಳಗಿನ ಆನಂದಾಂಕುರಗಳು ಬೆಳೆಯುತೊಡಗಿದವು ಹೀಗೆ ತಮ್ಮಣ ದೀಕ್ಷಿತರ ಮನೆಯಲ್ಲಿ ರಾಮಚಂದ್ರ ಸ್ವಾಮಿಗಳ ಕೃಪಾಪ್ರಸಾದದಿಂದ, ಹಲವು ಶುಭಾಂಕುರಗಳು ಬೆಳೆಯುತ್ತಿರಲು, ಗಂಗಾಬಾಯಿಗೆ ಒಂಬತ್ತು ತಿಂಗಳು ತುಂಬಿ ಹತ್ತನೆಯ ತಿಂಗಳು ನಡೆಯುತ್ತಿರುವಾಗ, ಶಕೆ ೧೭೭೪ ಶ್ರೀಮುಖಸಂವತ್ಸರದ ಭಾದ್ರಪದ ಶುದ್ಧ ಪಂಚಮಿ ರವಿವಾರ

ದಿವಸ ಸೂರ್ಯಾಸ್ತಸಮಯದಲ್ಲಿ ಗಂಗಾಬಾಯಿಯು ತೇಜಸ್ವಿಯಾದ ಸುಂದರ ಪುತ್ರನನ್ನು ಹಡೆದಳು! ಆ ಪುತ್ರರತ್ನದ ದರ್ಶನದಿಂದ ಗಂಗಾಬಾಯಿಗಾದ ಆನಂದವು ಆಕೆಯ ಹೊಟ್ಟೆಯಲ್ಲಿ ಹಿಡಿಸದೆ ಉಕ್ಕಹತ್ತಿತು! ಆದರೆ ಇಂಥ ಅಪರೂಪದ ಚಲುವ ಕೂಸನ್ನು ಮಠಕ್ಕೆ ಹೇಗೆ ಕೊಡಬೇಕೆಂಬ ಕಾರ್ಪಣ್ಯವು ತಟ್ಟನೆ ಆ ಸಾಧ್ವಿಯ ಹೃದಯದಲ್ಲಿ ಉತ್ಪನ್ನವಾಗಲು, ಆಕೆಯ ಆ ಆನಂದದ ಉಕ್ಕು ಕುಗ್ಗಿ, ಆಕೆಯ ಹೃದಯಕ್ಕೆ ತಾಪವಾಯಿತು! ಯಾಕಂದರೆ, ಪುತ್ರಪ್ರಾಪ್ತಿಯಿಂದ ತಾಯಿಯ ಹೊಟ್ಟೆ ತಣ್ಣಗಾಗುವಂತೆ, ಪುತ್ರವಿಯೋಗದ ಸ್ಮರಣದಿಂದ ಆಕೆಯ ಹೊಟ್ಟೆ ಕಾಯುವದು ಸ್ವಾಭಾವಿಕವಾಗಿರುತ್ತದೆ!

**ವಚನಭ್ರಷ್ಟತೆ**—ಆ ಕೂಸಿನ ಸೌಂದರ್ಯ-ತೇಜಸ್ಸುಗಳನ್ನು ನೋಡಿ ತಾಯಿ ತಂದೆಗಳಿಗಷ್ಟೆ ಅಲ್ಲ, ಅದನ್ನು ನೋಡಿದವರೆಲ್ಲರಿಗೂ ಪರಮಾನಂದವಾಗುತ್ತಿತ್ತು. ಈತನು ರಾಮಚಂದ್ರಸ್ವಾಮಿಗಳವರ ವರಪುತ್ರನಾದದ್ದರಿಂದಲೇ ಇಂತಹ ಲೋಕವಿಲಕ್ಷಣ ಸುಂದರನೂ, ತೇಜಸ್ವಿಯೂ ಆಗಿರುವನೆಂದು ಎಲ್ಲರೂ ಭಾವಿಸಿ, ತಮ್ಮ ತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು. ಇಂತಹ ಅಲೌಕಿಕ ಸೌಂದರ್ಯದ ಕೂಸಿಗೆ, ಹನ್ನೆರಡನೆಯ ದಿವಸ ಭುಜಂಗನೆಂದು ಹೆಸರಿಟ್ಟರು. ತನ್ನ ವಿಷಯದ ಆದರಭಾವವು ಜನರಲ್ಲಿ ಬೆಳೆಯುತ್ತಿರಲು, ಭುಜಂಗನು ಅದರೊಡನೆ ತಾನೂ ಬೆಳೆದನು. ಆತನ ಬಾಲಲೀಲೆಗಳನ್ನು ಎಷ್ಟು ನೋಡಿದರೂ ಜನರಿಗೆ ತೃಪ್ತಿಯಾಗುತ್ತಿದ್ದಿಲ್ಲ. ಆತನ ಬಾಲಲೀಲೆಗಳನ್ನು ನೋಡುವಾಗ ಮನಸ್ಸಿನ ಕುತೂಹಲವೂ, ಆತನ ರೂಪವನ್ನು ನೋಡುವಾಗ ಕಣ್ಣುಗಳ ಆಶೆಯೂ, ಆತನ ತೊದಲು ನುಡಿಗಳನ್ನು ಕೇಳುವಾಗ ಕಿವಿಗಳ ಹಸಿವೆಯೂ, ಆತನ ನೆತ್ತಿಯನ್ನು ಮೂಸಿನೋಡುವಾಗ ಘ್ರಾಣೇಂದ್ರಿಯದ ತೀವ್ರತೆಯೂ, ಆತನನ್ನು ಆಲಿಂಗಿಸುವಾಗ ವೈತಂಪೂ, ಆತನಿಗೆ ಹೊಸ ಹೊಸ ತೊದಲು ನುಡಿಗಳನ್ನು ಕಲಿಸುವಾಗ ನಾಲಿಗೆಯ ರುಚಿಯೂ ಹೆಚ್ಚುತ್ತಲೇ ಇರಲು, ಆ ಜನ ಮುದ್ದುಕೂಸಾದ ಭುಜಂಗನು ಬುರು ಬುರು ಬೆಳೆಯುತ್ತ ಐದು ವರ್ಷದವನಾದನು. ಆಗ ಆತನ ಚಲ್ವಿ

ಕೆಯು ಮತ್ತಿಷ್ಟು ಹೆಚ್ಚಲು, ಕೃಪಣನಿಗೆ ತನ್ನ ದ್ರವ್ಯದನಿಧಿಯೇ ತನ್ನ
ಜೀವವಾಗಿರುವಂತೆ, ಭುಜಂಗನು ಎಲ್ಲರ ಜೀವವಾಗಿ, ಆತನನ್ನು ಅಗಲಿ
ಹೋಗುವದೆಂದರೆ, ಜನರ ಜೀವದ ಸುತ್ತು ಬಂದಂತಾಗುತ್ತಿತ್ತು! ಅಂದಬ
ಳಿಕ ಹೀಗೆ ಸರ್ವರ ಚಿತ್ತಹರಣಮಾಡುವ ಸುಂದರ ಬಾಲಭುಜಂಗನನ್ನು
ಲೋಕಾಪುರದ ಬೂದಿಬಡಕ ಬಡ ಭಿಕ್ಷುಕ ಮಠಕ್ಕೆ ಕೊಟ್ಟುಬಿಡಲು,
ಆತನ ತಾಯಿತಂದೆಗಳ ಮನಸ್ಸು ಹೇಗೆ ಒಪ್ಪಬೇಕು? ಕಡೆಗೆ ಅವರು
ತಮ್ಮ ಮುದ್ದುಭುಜಂಗನನ್ನು ಲೋಕಾಪುರದ ಮಠಕ್ಕೆ ಕೊಡಲಿಕ್ಕಿಲ್ಲವೆಂದು
ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡರಲ್ಲದೆ, ಪ್ರಸಂಗವಶಾತ್ ಜನರ
ಮುಂದೆ ಆ ಮಾತನ್ನು ಬಾಯಿಂದಲೂ ಆಡಹತ್ತಿದರು!

ಸಾಂಸಾರಿಕರಿಗೆ ಸಂಸಾರಮೋಹವು ಹೆಚ್ಚಿದಂತೆ, ಅವರಲ್ಲಿ ಕಾರ್ಪಣ್ಯವೂ,
ಕೃತಘ್ನತೆಯೂ, ವಂಚಕತನವೂ ಹೆಚ್ಚುವ ಸಂಭವವು ವಿಶೇಷವಾಗಿರು
ತ್ತದೆ. ತಮ್ಮಣದೀಕ್ಷಿತರಿಗೂ, ಅವರ ಹೆಂಡತಿಯಾಗಿದ್ದ ಗಂಗಾಬಾಯಿಗೂ
ಬಹುದಿವಸ ಗಂಡುಮಕ್ಕಳು ಆಗದ್ದರಿಂದ, ಅವರಿಗೆ—" ಗಂಡುಹುಟ್ಟಿದರೆ
ಸಾಕು, ಬೇಕಾದದ್ದು ಮಾಡೇವು" ಅನ್ನುವಹಾಗೆ ಮೊದಮೊದಲು ಆಗು
ತ್ತಿತ್ತು. ಬಹಳ ಹೇಳುವದೇನು? ತಮಗೆ ಗಂಡುಮಕ್ಕಳಾಗಬೇಕೆಂಬ ಆತು
ರದಲ್ಲ ಅವರು-"ಗಂಡು ಹುಟ್ಟಿ ಸತ್ತರೂ ಸಾಯಲಿ, ಅದರ ಮೋರೆ ನೋಡಿ
ಯಾದರೂ ಸಂತೋಷಪಟ್ಟೇವು" ಅನ್ನುವವರೆಗೆ ಅವರು ಹುಚ್ಚುತನವನ್ನು
ತೋರಿಸುವರು! ಹೀಗಿರುವಾಗ, ರಾಮಚಂದ್ರಸ್ವಾಮಿಗಳ ಕೃಪೆಯಿಂದ
ಅವರಿಗೆ ಮುತ್ತಿನಂಥ ಗಂಡುಮಗನು ಹುಟ್ಟಲು, ಆ ಕೂಸಿನ ಮೋರೆ
ನೋಡಿದಕೂಡಲೆ ಅವರು ಮೋಹಿತರಾಗಿ—" ಇಂಥ ಕೂಸನ್ನು ಮಠಕ್ಕೆ
ಕೊಡಬಹುದೆ?" ಎಂದು ಕೂಸುಕೊಡುವವಿಷಯದಲ್ಲಿ ಮೊದಲು ಶಂಕಿತ
ರಾದದ್ದರಲ್ಲಿ ಆಶ್ಚರ್ಯವಿಲ್ಲ. ಮುಂದೆ ಆ ಕೂಸು ಜನಮೋಹಕವಾಗಿ
ಬೆಳೆಯಹತ್ತಿದಂತೆ ಅದರಮೇಲಿನ ಮೋಹವು ಬೆಳೆದು,—" ಈ ಮುದ್ದು
ಕೂಸನ್ನು ಮಠಕ್ಕೆ ಕೊಡದಿದ್ದರೆ ಏನಾಗುವದು? ಕೊಡದಿದ್ದರಾಯಿತು"
ಎಂದು ಅವರು ಮನಸ್ಸಿನಲ್ಲಿ ಅಂದುಕೊಳ್ಳಹತ್ತಿದರು! ಮುಂದೆ ಆಕೂಸು
ಐದುವರ್ಷದ್ದಾಗಿ, ಅದರ ತೊದಲುನುಡಿಗಳ, ಹಾಗು ಅದರ ಆಟಪಾಟಗಳ

ಮೋಹವು ಅವರನ್ನು ಮುಸುಕಲು, ಅವರಲ್ಲಿ ಕಾರ್ಪಣ್ಯವೂ, ಕೃತಘ್ನತೆಯೂ, ವಂಚಕತನವೂ ಹೆಚ್ಚಿ, ಮೇಲೆಕೇಳಿದಂತೆ ಅವರು—"ನಮ್ಮ ಈ ಕೂಸು ಭುಜಂಗನನ್ನು ಆ ಬೂದಿಬಡಕ ಬಡಭಿಕ್ಷುಕಮಠಕ್ಕೆ ಎಂದೂ ಕೊಡಲಿಕ್ಕಿಲ್ಲವೆ"ಂದು ನಿಶ್ಚಯಿಸಿ, ಅವರು ಕೃತಘ್ನತೆಯ ಪರಮಾವಧಿಯ ದೋಷಕ್ಕೆ ಪಾತ್ರರಾದರು! ಅಥವಾ ಈ ವಿಷಯದಲ್ಲಿ ಅವರಿಗಾದರೂ ಏಕೆದೋಷವಿಡಬೇಕು? ಮಹಾಸಮರ್ಥನಾದ ದಶರಥಮಹಾರಾಜನುಕೂಡ, ತನ್ನ ಮೋಹದ ರಾಮ-ಲಕ್ಷ್ಮಣರನ್ನು ಕೆಲಕಾಲದಮಟ್ಟಿಗೆ, ಅದೂ ಭರತ-ಶತ್ರುಘ್ನರೆಂಬ ತನ್ನ ಇನ್ನು ಇಬ್ಬರು ಸುಂದರ ಮಕ್ಕಳು ತನ್ನ ಹತ್ತಿರ ಇರುತ್ತಿರುವಾಗ, ವಿಶ್ವಾಮಿತ್ರರಂಥ ಮಹಾತಪಸ್ವಿಸಮರ್ಥರಿಗೆ, ಅವರ ಯಜ್ಞರಕ್ಷಣಾರ್ಥವಾಗಿ ಒಪ್ಪಿಸಲು ಹಿಂದೆಮುಂದೆ ನೋಡಿರುವಾಗ, ಏಕಪುತ್ರವಿಷಯದ ನಮ್ಮ ದೀಕ್ಷಿತದಂಪತಿಗಳು, ತಮ್ಮ ಮಗನನ್ನು ಬಡಮಠಕ್ಕೆಕೊಟ್ಟುಬಿಡಲು ನಿರಾಕರಿಸಿದ್ದರಲ್ಲಿ ಆಶ್ಚರ್ಯವಿಲ್ಲವು!

**ಕೃತಘ್ನತೆಯ ಪ್ರಾಯಶ್ಚಿತ್ತ**—ಲೋಕಾಪುರ ಪೀಠದಂಥಜಾಗ್ರತಪೀಠಕ್ಕೆ ಈದೀಕ್ಷಿತದಂಪತಿಗಳ ಕೃತಘ್ನತೆಯ ಅಕ್ಷಮ್ಯವಾದಅಪರಾಧದ ಸಹನವು ಹೇಗಾದೀತು? ಹಿರಿಯರ ಪಾಪಪುಣ್ಯಗಳ ಫಲಗಳು ಕಿರಿಯರಿಗೆ ಮುಟ್ಟುವ ಸಿದ್ಧಾಂತದಂತೆ, ಭುಜಂಗನತಾಯಿತಂದೆಗಳ ಕೃತಘ್ನತೆಯಂಥ ನಿಷ್ಕೃತಿರಹಿತ ಪಾಪದ ಫಲವನ್ನು ನಿರಪರಾಧಿ ಭುಜಂಗನು ಭೋಗಿಸಬೇಕಾಗಲು, ಭುಜಂಗನ ತಲೆಗೆ ಒಂದು ಹುಣ್ಣು ಹುಟ್ಟಿತು! ಹಿರಿಯರ ಪುಣ್ಯಪಾಪಗಳ ಫಲಗಳನ್ನು ಕಿರಿಯರು ಮುಂದೆ ಮಕ್ಕಳು ಮೊಮ್ಮಕ್ಕಳವರೆಗೆ ಭೋಗಿಸಬೇಕಾಗುವದು! ಎಷ್ಟು ಔಷಧೋಪಚಾರಮಾಡಿದರೂ ಭುಜಂಗನ ಆಹುಣ್ಣು ಮಾಯಲೊಲ್ಲದು! ಎಲ್ಲರೂ ಚಿಂತಾಕ್ರಾಂತರಾದರು. ಮೋಹದಿಂದ ಪುತ್ರರೂಪರಾಗಿ ಹೋಗಿದ್ದಭುಜಂಗನ ಮೋಹಿಷ್ಠ ತಾಯಿತಂದೆಗಳಂತು, ಪ್ರತ್ಯಕ್ಷ ತಮ್ಮ ತಲೆಗೇ ಹುಣ್ಣಾಗಿರುವಂತೆ ವ್ಯಸನಪಡಹತ್ತಿದರು! ಆಗ ದೇವರಿಗೆ ಬೇಡಿಕೊಳ್ಳುವದಾಯಿತು, ಮೀಸಲುತೆಗೆದಿಡುವದಾಯಿತು; ಆದರೆ ಮಠಕ್ಕೆ ಮಗನಕೊಡುವ ವಿಚಾರವೇ ಅವರಮನಸ್ಸಿನಲ್ಲಿ ಸುಳಿಯಲಿಲ್ಲ, ಅಪ್ಪಿತಪ್ಪಿ ಸುಳಿದರೂ

ಅದಕ್ಕೆ ಅವರು ಮಹತ್ವಕೊಡಲಿಲ್ಲ! ಇಂಥ ಪ್ರಸಂಗದಲ್ಲಿಯೇ ಸಂಸಾರ ಮೋಹದ ಸ್ವಾರಸ್ಯವು ಗೊತ್ತಾಗುದು! ಹೀಗಿರುವಾಗ ರಾಮಚಂದ್ರಸ್ವಾಮಿಗಳು ಭುಜಂಗನ ಅಜ್ಜಿಯು, ಅಂದರೆ ಗಂಗಾಬಾಯಿಯತಾಯಿಯಾದ ಸೀತಮ್ಮನ ಕನಸಿನಲ್ಲಿ ಬಂದು—"ನೀವು ಭುಜಂಗನನ್ನು ಮಠಕ್ಕೆ ಕೊಡದಿದ್ದರೆ, ಆತನು ಬದಕುವದಿಲ್ಲ" ಎಂದು ಹೇಳಲು, ಅದನ್ನು ಕೇಳಿದ ಭುಜಂಗನ ತಾಯಿತಂದೆಗಳು ಸ್ವಾಮಿಗಳಭೀಮಭಿಕ್ಷೆಗಾಗಿ ಭಯಪಟ್ಟು ಗತಿಕಾಣದೆ— "ಭುಜಂಗನನ್ನು ಮಠಕ್ಕೆ ಕೊಡುವೆವು, ಆತನ ಹುಣ್ಣು ನೆಟ್ಟಗಾದರೆ ಸಾಕು" ಎಂದು ನುಡಿದರು; ಆದರೆ ಇನ್ನೂ ಅವರ ದೃಢನಿಶ್ಚಯವಾದಂತೆ ತೋರದ್ದರಿಂದ, ಭುಜಂಗನ ತಲೆಯಹುಣ್ಣುವಾಯದೆ ಮತ್ತಿಷ್ಟು ಹೆಚ್ಚಾಗಿ ಅದರಲ್ಲಿಹುಳಗಳುಬಿದ್ದವು! ಅದ್ದರಿಂದ ಎಲ್ಲರೂ ನಿರಾಶರಾದರು ಆಗತಮ್ಮಣ ದೀಕ್ಷಿತರೂ, ಗಂಗವ್ವನವರೂಒಮ್ಮನಸ್ಸಿನಿಂದ ರಾಮಚಂದ್ರಸ್ವಾಮಿಗಳನ್ನು ಕುರಿತು ಬಡಿದ ಭಕ್ತಿಯಿಂದ—"ಸ್ವಾಮೀ, ನಾವು ಕೃತಘ್ನರು, ನಮ್ಮ ತಪ್ಪನ್ನು ಕ್ಷಮಿಸಬೇಕು. ಇನ್ನು ಹುಡುಗನನ್ನು ಮಠಕ್ಕೆಕೊಡುವದು ನಿಶ್ಚಯವು, ಎಂದೂ ತಪ್ಪುವದಿಲ್ಲ; ಹುಣ್ಣು ನೆಟ್ಟಗಾದಕೂಡಲೆ ಆತನನ್ನು ಮಠಕ್ಕೆ ಕರಕೊಂಡೇಹೋಗುವೆವು; ದಯಮಾಡಿ ನಮ್ಮ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ" ಎಂದು ಪ್ರಾರ್ಥಿಸಿದರು.

**ಭುಜಂಗನು ಮಠಕ್ಕೆ ಬಾದದ್ದು**—ಹೀಗೆ ದೀಕ್ಷಿತದಂಪತಿಗಳು ಮನಃಪೂರ್ವಕನಿಶ್ಚಯಮಾಡಲು, ಅಂದೇರಾತ್ರಿಯಲ್ಲರಾಮಚಂದ್ರಸ್ವಾಮಿಗಳು ಪುನಃ ಸೀತಮ್ಮನ ಸ್ವಪ್ನದಲ್ಲಿ ಬಂದು—"ಹುಣ್ಣುವಾಯಲಿಕ್ಕೇಕೆ ಇಷ್ಟು ಚಿಂತೆಮಾಡುವಿರಿ? ಕುದುರೆಯ ಉಚ್ಚೆಯಲ್ಲ ಬೂದಿಯನ್ನುಕಲಿಸಿ, ಹುಣ್ಣಿಗೆ ಬಡಿಯಿರಿ, ಬೆಳಗಾಗುವದರೊಳಗೆ ಹುಣ್ಣು ಉಮರಿಬೀಳುತ್ತದೆ" ಎಂದು ಹೇಳಿದರು. ಅದರಂತೆ ಸೀತಮ್ಮನು ಮರುದಿವಸ ಕುದುರೆಯ ಉಚ್ಚೆಯನ್ನು ತಂದು ಅದರಲ್ಲಿ ಬೂದಿಯನ್ನು ಕಲಿಸಿ ಭುಜಂಗನ ತಲೆಗೆ ಚೆನ್ನಾಗಿ ಬಡಿದಳು. ಮರುದಿವಸ ಬೆಳಗಾದಮೇಲೆ ತಲೆಬಿಚ್ಚಿನೋಡಲು, ತಲೆಯ ಟಪಾರಿಕೆಯೇ ಕಡೆಗಾಯಿತು; ಆದರೆ ತಲೆಯು ಅಚ್ಚಳಿದಿದ್ದಿಲ್ಲ; ಅದು ಕೂದಲುಸಹಿತವಾಗಿ ಮೊದಲು ಇದ್ದಂತೆಯೇ ಇತ್ತು. ಅದರಲ್ಲಿ

ಹುಣ್ಣಿನಗಾಯವೂ ಇದ್ದಿಲ್ಲ! ಈ ಮಹಾದ್ಭುತವನ್ನು ನೋಡಿದವರೆಲ್ಲರೂ ಪರಮಾಶ್ಚರ್ಯಪಟ್ಟು, ರಾಮಚಂದ್ರ ಸ್ವಾಮಿಗಳಮಹಿಮೆಯುಹೆಚ್ಚಿನ ದೆಂದುಎಲ್ಲರೂಭಯಗ್ರಸ್ತರಾದರು! ಆಗಭುಜಂಗನತಾಯಿತಂದೆಗಳಭಯ—ಭಕ್ತಿ—ವಾತ್ಸಲ್ಯಕಂಪಿತ ಹೃದಯಗಳು ದ್ರವಿಸಿಉಕ್ಕೇರಲು, ಅವರಕಣ್ಣುಗಳಿಂದ ನೀರು ದಳದಳಸುರಿಯಹತ್ತಿದವು. ಆಗ ಆ ಭುಜಂಗನ ತಾಯಿತಂದೆಗಳೂ, ಉಳಿದ ಆಪ್ತೇಷ್ಟರೂ ತಮ್ಮೊಳಗೆ ಆಲೋಚಿಸಿ—“ ಇನ್ನು ಭುಜಂಗನನ್ನು ಮಠಕ್ಕೆ ಕೊಡದಿದ್ದರೆ, ಆತನು ನಮಗೆ ಸರ್ವಥಾ ದಕ್ಕುಹದಿಲ್ಲ; ಆದ್ದರಿಂದ ನಾವು ವಚನಕೊಟ್ಟಂತೆ ಈಗೇ ಆತನನ್ನು ಮಠಕ್ಕೆ ಕರಕೊಂಡು ಹೋಗಿಬಿಡೋಣ ” ಎಂದು ನಿಶ್ಚಯಿಸಿ, ಸಕುಟುಂಬ ಸಪರಿವಾರ ಅವರು ಭುಜಂಗನನ್ನು ಕರಕೊಂಡು ಲೋಕಾಪುರ ಮಠಕ್ಕೆ ಬಂದುಬಿಟ್ಟರು!

**ಆಗಿನ ಮಠದಸ್ಥಿತಿ**—ಆಗ ಮಠದಲ್ಲಿ ಕಾಶೀಬಾಯಿಎಂಬವರ ಹೊರತು ಬೇರೆಯಾರೂ ಇದ್ದಿಲ್ಲ. ಆಗಿನ ಮಠವೆಂದರೆ, ಒಂದೆಂದರೆ ಒಂದೇಕೋಣೆ, ಮತ್ತು ಬೈಲಲ್ಲಿಯಆರುಸಮಾಧಿಗಳು, ಇಷ್ಟರಹೊರತು ಬೇರೆಏನೂಇದ್ದಿಲ್ಲ. ಸಮಾಧಿಗಳ ಮುಂದುಗಡೆಯಲ್ಲಿ ಒಂದುಧುನಿಯು, ಅಂದರೆ ಅಗ್ನಿಕುಂಡವು ಉರಿಯುತ್ತಿದ್ದು, ಅದರ ಸುತ್ತುಮುತ್ತು ಸೆರೆ—ಗಾಂಜಿಗಳಅಮಲಿನಲ್ಲಿಜನರು ಎಚ್ಚರದಪ್ಪಿ ಗುದ್ದಾಡುತ್ತಿದ್ದರು! ಹೀಗೆ ಅವರು ಒಬ್ಬರನ್ನೊಬ್ಬರುನೂಕುತ್ತ, ಒಬ್ಬರ ದೋತರವನ್ನೊಬ್ಬರು ಕಳೆಯುತ್ತ, ಬಾಯಿಗೆಬಂದಂತೆ ಬೊಗಳುತ್ತ, ಗೊಂದಲಹಾಕುತ್ತಿರಲು, ಯಾರಾದರೂ ಅವರಿಗೆ—“ ಎಲೇ, ಬೆಂಕಿಯಹತ್ತರ ನಿಮ್ಮ ಗೊಂದಲವೇಕೆ? ಎಲ್ಲಿಯಾದರೂ ಬೆಂಕಿಯಲ್ಲಿ ಬಿದ್ದುಗಿದ್ದೀರಿ; ಬೇಕಾದರೆ, ಬೈಲಿಗೆ ಬಂದು ಗುದುಮುರಿಗೆ ಹಾಕಿರಿ ” ಎಂದು ಬುದ್ಧಿಯ ಹೇಳಿದರೆ, ಅವರು—“ ಯಪ್ಪಾ, ನಾವು ಹೇಳಿಕೇಳಿ ನೆರೆಗುಡುಕರು, ಬಂಗಿಮುಕ್ಕರು! ನಾವು ಬೆಂಕಿಯಲ್ಲಿ ಬಿದ್ದು ಸತ್ತರೆ, ಬಿದ್ದವರನ್ನು ಹುಗಿಯಬೇಕೋ, ಸುಡಬೇಕೊ, ಎಂಬದರನಿರ್ಣಯುವನ್ನಷ್ಟು ನೀನು ಹೇಳಿಬಿಡೆಂದರಾಯಿತು.” ಎಂದು ಜೀವದ ಪರಿವೆಯೂ ಇಲ್ಲದೆ ಉತ್ತರಕೊಡುತ್ತಿದ್ದರು! ಮೊದಲೇವಿರಾಗಿಗಳ, ಅಂದರೆ ವೈರಾಗ್ಯಶಾಲಿಗಳಮಠ; ಅದರಲ್ಲಿ ಐದಾರುವರ್ಷಗಳಿಂದ ಗುರುವಿಲ್ಲದಮಠ; ಅಂದಬಳಿಕ ಕೇಳುವದೇನು? ಶ್ಮಶಾನವಾಸಿ

ಶಿವಗಣದಚಂದದ ಮಠದಲ್ಲಿಯ ಅಮಲೇರಿದ ಆ ಪರಿವಾರವನ್ನು ನೋಡಿ. ಸಾಂಸಾರಿಕರುಬೆದರಿ, ಅವರಮನಸ್ಸು ಅತ್ಯಂತ ಉದಾಸವಾದರೆ ಆಶ್ಚರ್ಯವೇನು? ಆದರೆ ಇನ್ನುಮುಂದೆ ಆಸ್ಥಿತಿಯು ನಡೆಯುವದು ಪರಮಹಂಸರಿಗೆ ಇಷ್ಟವಿಲ್ಲವೆಂಬಂತೆ ತೋರುತ್ತದೆ; ಯಾಕಂದರೆ, ಆ ಪರಮಹಂಸರ ಸಂಕೇತದಂತೆಯೇ ಅವರ ಪ್ರೇರಣೆಯಿಂದ ರಾಮಚಂದ್ರಸ್ವಾಮಿಗಳು ಬಾಲಭುಜಂಗಯೋಗಿಯ ರೂಪದಿಂದ ಅವತರಿಸಿ, ಈಗ ಮಠಕ್ಕೆ ಬಂದಿರುವರೆಂದು ನಮಗೆತೋರುವದು ನಮ್ಮ ಈ ತೋರಿಕೆಯು, ಮುಂದೆ ವಿವರಿಸುವ ಬಾಲಭುಜಂಗಯೋಗಿಯ ಪವಿತ್ರಾಚರಣೆಯಿಂದ ವಾಚಕರಿಗಾದರೂ ಯಥಾರ್ಥವಾದದ್ದೆಂದು ತೋರಬಹುದು.

**ಮನುಷ್ಯರ ಮೂರು ವರ್ಗಗಳು**—ನಿಜಗುಣ ಶಿವಯೋಗಿಗಳ ಮತದಂತೆ ಮನುಷ್ಯರಲ್ಲಿ ರಾಗಿ, ವಿರಾಗಿ, ತನ್ಮಿಶ್ರ ಎಂಬ ಮೂರು ವರ್ಗಗಳಿರುವವು. ರಾಗಿಗಳೆಂದರೆ ಕೇವಲ ವಿಷಯಾಸಕ್ತರು; ವಿರಾಗಿಗಳೆಂದರೆ ಕೇವಲ ವಿಷಯಪರಾಙ್ಮುಖರು; ತನ್ಮಿಶ್ರರೆಂದರೆ, ಧರ್ಮದಂತೆ ವಿಷಯೋಪಭೋಗಮಾಡಿ, ಈ ಲೋಕದಲ್ಲಿ ಸುಖಪಟ್ಟು, ಪರಲೋಕದಲ್ಲಿ ಉಚ್ಚಗತಿಯನ್ನು ಪಡೆಯುವವರು. ಈ ಮೂರುವರ್ಗಗಳಲ್ಲಿ ವಿರಾಗಿಗಳುಮಾತ್ರ ಮೋಕ್ಷಕ್ಕೆಅಧಿಕಾರಿಗಳು. ಇವರು ಬುದ್ಧಿಪೂರ್ವಕ ದ್ರವ್ಯಸಂಪಾದನಮಾಡಿ ಕೂಡಿಡುವದಿಲ್ಲ ಪ್ರಾರಬ್ಧಯೋಗದಿಂದ ದ್ರವ್ಯಸಂಪಾದನವಾದರೆ, ಆ ದ್ರವ್ಯವನ್ನು ಭೂತಸಂತರ್ಪಣಾದಿ ಸತ್ಕಾರ್ಯಗಳಲ್ಲಿ, ಅಥವಾ ಕಸವನ್ನು ಕಸಬರಿಗೆಯಿಂದ ತಿಪ್ಪಿಯಲ್ಲಿ ಚಲ್ಲುವಂತೆ. ಮದ್ಯಪಾನಾದಿ ದುರ್ವ್ಯಸನಗಳಲ್ಲಿ ತಮ್ಮ ಪ್ರಾರಬ್ಧಯೋಗವಿದ್ದಂತೆ, ಅದನ್ನು ಕ್ರಮವಾಗಿ ವೆಚ್ಚಮಾಡುವರು. ಇಲ್ಲವೆ ಅದನ್ನು ಬೀದಿಯಲ್ಲಿ ಸೂರೆಮಾಡಿ ಹಾಳುಮಾಡಿಬಿಡುವರು! ಒಟ್ಟಿಗೆ, ಯಾವಬಗೆಯಿಂದಲೇ ಆಗಲಿ, ಅವರಲ್ಲಿ ತಂಗಳ ದುಡ್ಡು ಉಳಿಯುವ ಸಂಭವವಿಲ್ಲ; ಇದರಮೇಲೆ ಉಳಿದರೂ ಅದರ ವಿಷಯದಲ್ಲಿ ಅವರು ಕೇವಲಅನಾಸಕ್ತರಾಗಿರುವರು! ಈ ಪ್ರಸಂಗದಲ್ಲಿ ಲೋಕಾಪುರದ ಪೀಠಕ್ಕಿರುವ "ತಂಗಳ ದುಡ್ಡು ಕಟ್ಟುವವರಗಂಡ" ಎಂಬ ಬಿರುದು ವಿಚ್ಛಾರಿಸತಕ್ಕದ್ದಾಗಿದೆ!

ಇನ್ನು, ರಾಗಿಗಳೆಂದರೆ ಕೇವಲ ವಿಷಯಾಸಕ್ತರೆಂದು ಮೇಲೆ ಹೇಳಿದೆಯಷ್ಟೆ? ಇವರು ಧರ್ಮಾಧರ್ಮವಿಚಾರವಿಲ್ಲದೆ, ಪ್ರಯತ್ನಪೂರ್ವಕ ದ್ರವ್ಯಸಂಪಾದನಮಾಡುವರು, ಮತ್ತು ಧರ್ಮಾಧರ್ಮವಿಚಾರವಿಲ್ಲದೆ ಇವರು ಕಾಮೋಪಭೋಗ ಮಾಡುವರು; ಇದರಿಂದ ರಾಗಿಗಳ ಐಹಿಕಸುಖವು ಅಶಾಂತಿಕಾರಕವಾಗಿ, ಅವರು ಪರಗತಿಗೆ ಎರವಾಗುವರಲ್ಲದೆ, ಅವರು ನರಕಕ್ಕೆ ಇಳಿಯಬೇಕಾಗುವದು! ಈ ರಾಗಿಗಳಿಂದಲೇ ಜಗತ್ತಿನಲ್ಲಿ ಅನರ್ಥಗಳುಂಟಾಗುವವು; ಅಂದರೆ, ಕಳವು, ಹಾದರ, ಮೋಸಗಾರಿಕೆ, ಅಸತ್ಯ, ಅನ್ಯಾಯ, ದಂಭ, ದರ್ಪ, ದುರಭಿಮಾನ, ಕ್ರೋಧ, ಕ್ರೂರತನ, ಅಜ್ಞಾನ, ಮೊದಲಾದ ಆಸುರೀಸಂಪತ್ತು ಹೆಚ್ಚಾಗಿ, ಅವರು ಜನ್ಮಜನ್ಮಗಳಲ್ಲಿ ಆಸುರೀಯೋನಿಯಲ್ಲಿ ಬೀಳಬೇಕಾಗುವದು. ಇದಕ್ಕೆ ಶ್ರೀ ಭಗವದ್ಗೀತೆಯಲ್ಲಿಯು—"ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ | ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ||" ಎಂಬ ಭಗವದುಕ್ತಿಯು ಆಧಾರವಾಗಿರುತ್ತದೆ.

ಮೇಲಿನ ವಿರಾಗಿ-ರಾಗಿಗಳ ಲಕ್ಷಣಗಳನ್ನು ನೋಡಿದರೆ, ಅವು ಲೋಕದ ಸುವ್ಯವಹಾರಕ್ಕೂ, ಸುರಕ್ಷಿತತೆಗೂ, ಶಾಂತಿಕಾರಕಸುಖಕ್ಕೂ ತಕ್ಕವಲ್ಲವೆಂಬದು ಗೊತ್ತಾಗಬಹುದು; ಆದ್ದರಿಂದ ತನ್ಮಿಶ್ರವರ್ಗವು, ಅಂದರೆ ಧರ್ಮಸಮ್ಮತವಾಗಿ ಅರ್ಥವನ್ನುಗಳಿಸಿ, ಧರ್ಮಸಮ್ಮತವಾಗಿ ಕಾಮವನ್ನು ಭೋಗಿಸಿ, ಆ ಧರ್ಮಾರ್ಥಕಾಮಗಳನ್ನು, ಒಂದರಿಂದೊಂದಕ್ಕೆ ಬಾಧೆಬಾರದಂತೆ, ವಿವೇಕದಿಂದ ಸಾಧಿಸುವವರ್ಗವು ಲೋಕಹಿತಕಾರಿಯಾಗಿರುವದು. ಈ ವರ್ಗದಿಂದ ಜಗತ್ತಿನಲ್ಲಿ ಆಸುರೀಸಂಪತ್ತು ಹೆಚ್ಚದೆ, ದೈವೀಸಂಪತ್ತುಹೆಚ್ಚುವದು; ಅಂದರೆ ಜಗತ್ತಿನಲ್ಲಿ ಅಂತರಿಂದ್ರಿಯವೆನಿಸುವ ಮನಸ್ಸಿನ ನಿಗ್ರಹ, ಬಹಿರಿಂದ್ರಿಯಗಳೆನಿಸುವ ಕರ್ಮೇಂದ್ರಿಯ-ಜ್ಞಾನೇಂದ್ರಿಯಗಳ ನಿಗ್ರಹ, ತ್ರಿಕರಣಶುಚಿರ್ಭೂತತಾ, ಕ್ಷಮಾಗುಣ, ಸರಳಭಾವ, ಅಹಿಂಸೆ, ಅಕ್ರೋಧ, ಅಭಯದಾನ, ಅಧ್ಯಯನ, ಶಾಂತಿ, ಭೂತದಯಾ, ಅನಾಸಕ್ತಿ, ಸಾಧುವೃತ್ತಿ, ಲಜ್ಜಾ, ತೇಜಸ್ಸು, ಧೈರ್ಯ, ಕ್ಷಮೆ ಮುಂತಾದ ಸದ್ಗುಣಗಳ ಬೆಳವಣಿಗೆಯಾಗುವದು; ಆದ್ದರಿಂದ

ಪ್ರತಿಒಬ್ಬ ಧರ್ಮಪೀಠಸ್ಥರೂ ಈ ದೈವೀಸಂಪತ್ತನ್ನು ಲೋಕದಲ್ಲಿ ಹೆಚ್ಚಿಸುವದು ತಮ್ಮ ಕರ್ತವ್ಯವೆಂದು ತಿಳಿಯಬೇಕಾಗಿರಲು, ಲೋಕಾಪುರ ಪೀಠವಾದರೂ ಇನ್ನು ಮುಂದೆ ಹಾಗೆ ದೈವೀಸಂಪತ್ತನ್ನು ತಮ್ಮ ಶಿಷ್ಯರಲ್ಲಿ ಹೆಚ್ಚಿಸಬೇಕಾಗುವದು ; ಅಂದರೆ ಲೋಕಾಪುರ ಪೀಠದ ಈ ವರೆಗಿನ ವಿರಾಗಿತನದ ಕಸುವು ಕಡಿಮೆಯಾಗಿ, ಅದು ರಾಗಿ–ವಿರಾಗಿ ಮಿಶ್ರಸ್ಥಿತಿಯಲ್ಲಿ, ಅಂದರೆ ಧರ್ಮಸಮ್ಮತವಿಷಯಗಳಲ್ಲಿ ರಾಗವುಳ್ಳದ್ದೂ, ಧರ್ಮಕ್ಕೆ ಅಸಮ್ಮತವಾದ ವಿಷಯಗಳಲ್ಲಿ ವಿರಾಗ ಉಳ್ಳದ್ದೂ ಆಗಿ ರೂಪಾಂತರಿಸಬೇಕಾಗಿರುವದು ರಾಮಚಂದ್ರಸ್ವಾಮಿಗಳ ತರುವಾಯದಲ್ಲಿ ಮಠದೊಳಗೂ, ಮಠದಕಾರ್ಯಗಳೊಳಗೂ ಆಗುತ್ತಬಂದಿಷ್ಟು ಹಿತಕಾರಕಗಳಾದ ಲೌಕಿಕ ತಿದ್ದುಪಡೆಗಳು, ಈ ರೂಪಾಂತರವ್ಯಾಪಾರದ ಮಂಗಲಾಚರಣವೆಂದು ತಿಳಿಯುವಹಾಗಿರುತ್ತವೆ !

---

## ೬ನೇ ಅಧ್ಯಾಯ—ಪೀಠದ ಜಾಗರೂಕತೆ.



ಈ ಮೊದಲೆ ಹೇಳಿದಂತೆ ತಮ್ಮಣದೀಕ್ಷಿತರು, ನಯನಾಭಿರಾಮನಾದ ಭುಜಂಗನನ್ನು ಕರಕೊಂಡು, ಪರಿವಾರವನ್ನು ಕಟ್ಟಿಕೊಂಡು ಲೋಕಾಪುರಮಠಕ್ಕೆ ಬಂದರು ; ಆದರೆ ಮಠದಲ್ಲೇನಿದೆ ? ಶ್ರೀರಾಮರಕ್ಷೆ ! ತಮ್ಮಣದೀಕ್ಷಿತರು ಆ ಅವ್ಯವಸ್ಥಿತ ಬಡಮಠದಲ್ಲಿ ಹೇಗಾದರೂ ತಮ್ಮ ಕುಟುಂಬದವರ ಯೋಗಕ್ಷೇಮವಸಾಗಿಸುತ್ತ, ಅಭಿಷೇಕಪ್ರಿಯರಾದ ೩ನೇ ತಲೆಯ ೧ನೇ ಭುಜಂಗಸ್ವಾಮಿಗಳ ಸಮಾಧಿಯಲಿಂಗಕ್ಕೆ ನಿತ್ಯ

ಅಭಿಷೇಕ ಮಾಡತೊಡಗಿದರು. ಒಂದುದಿನ ಪರಮಹಂಸರು ತಮ್ಮಣ ದೀಕ್ಷಿತರ ಸ್ವಪ್ನದಲ್ಲಿ ಬಂದು—"ನೀನು ಹೀಗೆಯೇ ಅನುಷ್ಠಾನಮಾಡುತ್ತ ಹೋಗು, ನಿನ್ನ ಯೋಗಕ್ಷೇಮವು ತಾನೇ ಸಾಗುವದು, ಯಾವ ಚಿಂತೆಯನ್ನೂ ಮಾಡಬೇಡ" ಎಂದು ಹೇಳಿದರು! ಸ್ವಪ್ನವಾದಂತೆ ಎಲ್ಲ ವ್ಯವಸ್ಥೆಯೂ ಗುರುತಂತ್ರದಿಂದ ತಾನಾಗಿಯೇ ಆಗತೊಡಗಿತು. ಲೋಕಾಪುರದಲ್ಲಿ ಗುರಪ್ಪನೆಂಬಹೆಸರಿನ ಒಬ್ಬ ಬಣಜಿಗನು ಇದ್ದನು. ಆತನು ಕಿರಾಣಿಯ ವ್ಯಾಪಾರಮಾಡುತ್ತಿದ್ದನಲ್ಲದೆ, ಒಕ್ಕಲತನವನ್ನೂ ಇಟ್ಟಿದ್ದನು. ತನ್ನ ಹೊಲಪೊಳಗೆ ಬೆಳೆದ ಎಲ್ಲ ಪದಾರ್ಥಗಳನ್ನು ಅಂಶತಃ ಪ್ರತಿವರ್ಷ ಮಠಕ್ಕೆ ಕೊಡುವದು ಆತನ ಮನೆತನದ ಬಹುದಿನದ ಸಾಂಪ್ರದಾಯವಾಗಿತ್ತು. ರಾಮಚಂದ್ರಸ್ವಾಮಿಗಳು ದೇಹಬಿಟ್ಟಬಳಿಕ ನಾಲ್ಕಾರುವರ್ಷ ಮಠದಲ್ಲಿ ಯಾರೂ ಇಲ್ಲದ್ದರಿಂದ, ಮಠಕ್ಕೆ ಕೊಡತಕ್ಕ ಧಾನ್ಯಾದಿಗಳೆಲ್ಲ ಗುರಪ್ಪನ ಮನೆಯಲ್ಲ ಸಂಗ್ರಹವಾಗಿದ್ದವು. ಆಗ ಆತನ ಸ್ವಪ್ನದಲ್ಲಿ ಪರಮಹಂಸರು ಬಂದು—"ಗುರಪ್ಪಾ, ಮಠದ ಸ್ವಾಮಿಗಳು ಮಠಕ್ಕೆ ಬಂದಿದ್ದಾರೆ, ನಿನ್ನಲ್ಲಿರುವ ಧಾನ್ಯಾದಿಗಳನ್ನೆಲ್ಲ ಮಠಕ್ಕೆ ಮುಟ್ಟಿಸು" ಎಂದು ಹೇಳಲು, ಅವರಂತೆ ಭಾವಿಕನಾದ ಗುರಪ್ಪನು ಉಪ್ಪುಮೊದಲಾಗಿ ಎಲ್ಲ ಸಾಮಾನುಗಳನ್ನು ಮಠಕ್ಕೆ ತಂದು ಹಾಕಿದನು! ಆದ್ದರಿಂದ ತಮ್ಮಣ ದೀಕ್ಷಿತರ ಕುಟುಂಬದ ಯೋಗಕ್ಷೇಮವು ಯಥಾಸ್ಥಿತವಾಗಿ ಸಾಗತೊಡಗಿತು!

ಹೀಗೆ ಮಠದ ವ್ಯವಸ್ಥೆಯು ಯಥಾಸ್ಥಿತವಾಗಿ ಸಾಗತೊಡಗಲು, ಅತ್ತ ಪರಮಹಂಸರು ಒಂದುದಿನರಾತ್ರಿ ಲೋಕಾಪುರದ ದೇಸಾಯರ ಸ್ವಪ್ನದಲ್ಲಿ ಹೋಗಿ—"ನಿಮ್ಮ ಮಠದ ಸ್ವಾಮಿಗಳು ಮಠದಲ್ಲಿ ಬಂದಿರುವರು, ನೀನು ಅವರಿಗೆ ಮಠದ ಅಧಿಕಾರವನ್ನುಕೊಟ್ಟು, ಎಲ್ಲ ವ್ಯವಸ್ಥೆಯನ್ನು ಮಾಡಿಸು" ಎಂದು ಹೇಳಿದರು. ಮರುದಿವಸ ದೇಸಾಯರು ತಮ್ಮ ಒಬ್ಬ ಕಾರಕೂನನನ್ನು ಕರೆದು—"ಹೋಗು, ಮಠಕ್ಕೆ ಹೋಗಿ ಸ್ವಾಮಿಗಳು ಯಾರು ಬಂದಿರುವರು ಎಂಬದನ್ನು ನೋಡಿ, ಎಲ್ಲ ಸಂಗತಿಯನ್ನು ವಿಚಾರಿಸಿಕೊಂಡು ಬಾ" ಎಂದು ಹೇಳಲು, ಕಾರಕೂನನು

ತಮ್ಮಣದೀಕ್ಷಿತರಬಳಿಗೆ ಬಂದು ಅವರನ್ನು ಕುರಿತು—" ಸ್ವಾಮೀ, ಮಠದ ಸ್ವಾಮಿಗಳು ಯಾರು ?" ಎಂದು ಕೇಳಿದನು. ಈವೊದಲೆ ದೇಸಾಯರು ಒಬ್ಬ ಸ್ವಾಮಿಯನ್ನು ಮಠಕ್ಕೆ ಕೂಡಿಸಿದ ಸಂಗತಿಯು ತಮ್ಮಣದೀಕ್ಷಿತರಿಗೆ ಕೇಳಿ ಗೊತ್ತಿತ್ತು ; ಆದ್ದರಿಂದ ಅವರು ಕಾರಕೂನನಿಗೆ—" ಸ್ವಾಮಿಗಳು ಯಾರೆಂಬದನ್ನು ನಾವೇನು ಹೇಳೋಣ ? ನನಗೆ ನನ್ನ ಮಗನನ್ನು ಮಠಕ್ಕೆ ಕೊಡಬೇಕೆಂದು ಸ್ವಪ್ನವಾದದ್ದರಿಂದ, ನಮ್ಮ ಈ ಹುಡುಗನನ್ನು ಮಠಕ್ಕೆ ಕರಕೊಂಡು ಬಂದಿದ್ದೇನೆ. ಬೇರೆಯಾರಾದರೂ ಮಠದ ಸ್ವಾಮಿಗಳಾದರೆ, ಅವರ ಸೇವಕನಾಗಿ ಈತನು ಮಠದಲ್ಲಿರುವನು. ಈತನನ್ನೇ ಸ್ವಾಮಿಯಾಗಮಾಡಿದರೆ ಸ್ವಾಮಿಯಾಗುವನು" ಎಂದು ಹೇಳಿದರು ! ಬಾಲಭುಜಂಗನ ಸುಂದರ ಮೂರ್ತಿಯನ್ನು ನೋಡಿ, ಆ ಕಾರಕೂನನ ಚಿತ್ತಹರಣವಾಗಿಹೋಯಿತು. ಈ ಹುಡುಗನು ಸ್ವಾಮಿಯಾಗಲಿಕ್ಕೆ ಯೋಗ್ಯನಿರುವನೆಂದು ಆತನ ಭಾವನೆಯಾಯಿತು. ಆತನು ದೇಸಾಯರ ಬಳಿಗೆ ಬಂದು ಎಲ್ಲ ವೃತ್ತಾಂತವನ್ನು ಹೇಳಲು, ದೇಸಾಯರು ಆ ಬಂದ ಹುಡುಗನನ್ನೇ ಮಠದ ಅಧಿಕಾರಿಯಾಗಮಾಡಬೇಕೆಂದು ನಿಶ್ಚಯಿಸಿದರು !

ಈವೊದಲೆ ದೇಸಾಯರು ಬೇರೊಬ್ಬರನ್ನು ಮಠದ ಅಧಿಕಾರಿಯನ್ನಾಗಿ ಮಾಡಿದ್ದರೆಂದು ಮೇಲೆ ಹೇಳಿದೆಯಷ್ಟೆ ? ಅದರ ವೃತ್ತಾಂತವನ್ನು ಇಲ್ಲಿ ಹೇಳುವೆವು. ರಾಮಚಂದ್ರಸ್ವಾಮಿಗಳು ದೇಹಬಿಟ್ಟಬಳಿಕ, ಮೂಲಪರಮಹಂಸರ ವಂಶದವರಾದ ತೆಲಸಂಗವೆಂಬ ಊರಲ್ಲಿ ಇದ್ದ ಅಪ್ಪಾಭಟ್ಟ ಬೇಣಾರೆ ಎಂಬವರು, ತಮ್ಮ ವಾರಸಾನಾತೇದಿಂದ ತಮ್ಮ ಚಿರಂಜೀವನಾದ ರಾಮಭಟ್ಟ ಎಂಬವನನ್ನು ಮಠಕ್ಕೆ ಕರಕೊಂಡುಬಂದು, ದೇಸಾಯರ ಮುಖಾಂತರ ಮಠಕ್ಕೆ ಅಧಿಕಾರಿಯನ್ನಾಗಿ ಮಾಡಿದರು. ಆದರೆ ಆಗ ಆ ಹುಡುಗನ ತಾಯಿ ಊರಲ್ಲಿ ಇದ್ದಿಲ್ಲ. ಆಕೆಗೆ ತನ್ನ ಮಗನನ್ನು ಲೋಕಾಪುರ ಮಠಕ್ಕೆ ದತ್ತಕಕೊಟ್ಟರೆಂಬ ಸುದ್ದಿಯು ಗೊತ್ತಾಗಲು, ಆ ತಾಯಿಯು ಸಿಟ್ಟಿನಿಂದ ಲೋಕಾಪುರಕ್ಕೆ ಬಂದು ಕರ್ಕಶತನದಿಂದ—" ಈ ಬೂದಿಬಡಕ ಮಠಕ್ಕೆ ನಾನು ಏನೆಂದು ಮಗನನ್ನು ಕೊಡಲಿ ?

ಹೊಲವಿರುವದೇ, ಮನೆಯಿರುವದೇ? ಯಾವಸೌಭಾಗ್ಯಕ್ಕಾಗಿ ಮಗನನ್ನು ಕೊಡಬೇಕು?" ಎಂದು ನುಡಿದು, ಮಗನ ಮೈಮೇಲಿನ ಶಾಟಿಯನ್ನು ಹರಿದು ಒಗೆದು, ಕೊರಳೊಳಗಿನ ಶಿಲಾಮಣಿಯ ಸರವನ್ನು ಹರಿದು ಚಲ್ಲಿ ಗಂಡನಸಂಗಡ ಜಗಳಾಡಿ ಮಗನನ್ನು ಕಟ್ಟಿಕೊಂಡು ತೆಲಸಂಗಕ್ಕೆ ಹೋಗಿಬಿಟ್ಟಳು! ದೊಡ್ಡವರ ಕೃತಿಯೇ ಕೌತುಕದ್ದಾಗಿರುವದು. ರಾಮ ಚಂದ್ರಸ್ವಾಮಿಗಳು ಮೊದಲೇ ಮಠದ ಸ್ವಾಮಿಯನ್ನು ಗೊತ್ತುಮಾಡಿ ಇಟ್ಟಿರಲು, ನಡುವೆಯೊಬ್ಬರು ಮಠದ ಬೇರೆ ಸ್ವಾಮಿಯ ನಿರ್ಮಾಣ ಮಾಡಿದರೆ, ಅದು ಹೇಗೆ ನಡೆಯಬೇಕು? ದೊಡ್ಡವರ ಸಂಕಲ್ಪಕ್ಕೆ ಎಂದೂ ಚ್ಯುತಿಯು ಬಾರದು; ಆದ್ದರಿಂದ ಬೇಣಾರೆ ಅಪ್ಪಾಭಟ್ಟರ ಹೆಂಡ ತಿಯ ಬುದ್ಧಿಯಲ್ಲಿ ವಿಕಲ್ಪವನ್ನುಂಟುಮಾಡಿ ಇಷ್ಟೆಲ್ಲ ಕೃತಿಯನ್ನು ರಾಮ ಚಂದ್ರಸ್ವಾಮಿಗಳೇ ಮಾಡಿಸಿದರೆಂದು ಹೇಳಬೇಕಾಗುವದು. ಭುಜಂಗನು ಮಠಕ್ಕೆ ಬರುವ ಮೊದಲೇ ಇಷ್ಟೆಲ್ಲ ಅನರ್ಥವು ಆಗಿಹೋಗಿರಲು, ದೇಸಾಯರು ಪುನಃ ಮಠಕ್ಕೆ ಬಂದು, ಭುಜಂಗನನ್ನು ವಿಧಿಯುಕ್ತ ಮಠಾಧಿಕಾರಿಯನ್ನಾಗಿಮಾಡಿ, ಬ್ರಾಹ್ಮಣಭೋಜನಮಾಡಿಸಿದರು. ಆಗ ಚಲುವ ಚನ್ನಿಗ ಭುಜಂಗನು ಮಠದ ಎರಡನೇ ಭುಜಂಗಸ್ವಾಮಿ ಯಾದನು!

**ಭುಜಂಗನ ರೂಪ-ಗುಣ-ಶೀಲ-ಸ್ವಭಾವಗಳು**—ಭುಜಂ ಗನು ಪೀಠಕ್ಕೆ ಕುಳಿತಾಗ ಆರು ವರ್ಷದವನಾಗಿದ್ದನು. ಈ ಬಾಲಮೂ ರ್ತಿಯ ಬಣ್ಣ ಕಾದ ಬಂಗಾರದಂತೆ ತೇಜಃಪುಂಜ; ಕಣ್ಣುಗಳು ಹೊಳಪು ಳ್ಳವು; ಮುಖವು ದುಂಡಗೆ–ಸುಂದರ–ಉಲ್ಲಾಸಯುಕ್ತ; ಮೈಕಟ್ಟು ಮನೋಹರ; ಸ್ವಭಾವವು ವಿನೋದಿ–ಸ್ವಚ್ಛಂದಿ–ಲೋಕಸಂಗ್ರಹಕಾರಿ– ಕಿಡಿಗೇಡಿ–ಆಟಗುಳಿ; ಪಾರಿವಾಳವಾಡುವದು–ನಾಯಿಸಾಕುವದು–ಗೋಲಿ ಗಜ್ಜುಗಗಳಾಡುವದು–ಗಿಡಮರಗಳೇರುವದು–ಜಾಲಗಾರರಿಗೆ ಹಳ್ಳದಲ್ಲಿ ಮೀನ ಹಿಡಿದುಕೊಡುವದು ಆತನ ಪ್ರೀತಿಯ ವ್ಯವಸಾಯಗಳು; ವಿದ್ಯೆಕ ಲಿಯುವಲ್ಲಿ ಆತನ ಲಕ್ಷವಿಲ್ಲ; ಸಾಲೆ ತಪ್ಪಿಸುವಲ್ಲಿ ಆತನು ಬಹುಶೂರ; ದನ ಕಾಯುವ ಹುಡುಗರ ಸಹವಾಸಮಾಡುವಲ್ಲಿ ಆತನಿಗೆ ಬಹುಪ್ರೀತಿ; ಆಟ

ವಾಡುವ ಭರದಲ್ಲಿ ಆತನಿಗೆ ಊಟದ ಪರಿವೆಯಿಲ್ಲ; ಎಷ್ಟು ಹೊತ್ತಾಯಿ ತೆಂಬದರ ಲಕ್ಷ್ಯವಿಲ್ಲ-ಗುರುಹಿರಿಯರ ಭಯವಿಲ್ಲ! ಈ ಚಂದದ ಭುಜಂಗನು ಸ್ವಾಮಿಯಾದರೇನು, ದೇವರಾದರೇನು? ಭೂಮಿಯನ್ನು ಹೊತ್ತಿರುವ ಪ್ರತ್ಯಕ್ಷ ಆದಿಶೇಷ-ಭುಜಂಗನೇ ಸ್ವಾಮಿಯಾದರೂ, ಆತನು ನಮ್ಮ ಬಾಲಭುಜಂಗನಂತೆ ಉಡಾಳನೂ, ಉದ್ಧಟನೂ, ಸ್ವಚ್ಛಂದಿಯೂ, ಸ್ನಾನಸಂಧ್ಯಾದಿ ಕರ್ಮಹೀನನೂ ಆದರೆ, ಆತನನ್ನು ಜನರು ಯೋಗ್ಯನೆಂದು ಹೇಗೆ ಮನ್ನಿಸುವರು? ಆದ್ದರಿಂದ ಉಡಾಳ ಬಾಲಭುಜಂಗನನ್ನು ಕೆಲಸಕ್ಕೆ ಬಾರದ ಸ್ವಾಮಿಯೆಂದು ಮನೆಯವರೂ, ಹೊರಗಿನವರೂ ಕೂಡಿಯೇ ತಿರಸ್ಕರಿಸಹತ್ತಿದ್ದರೆ, ಆಶ್ಚರ್ಯವಲ್ಲವು!

ಬೂದಿಬಡಕ ಬಡ ಭಿಕ್ಷುಕ ಮಠವೆಂದು ಮೊದಲೇ ಜನರಿಂದ ತಿರಸ್ಕರಿಸಲ್ಪಡುತ್ತಿದ್ದ ಲೋಕಾಪುರ ಮಠವು, ರಾಮಚಂದ್ರಸ್ವಾಮಿಗಳು ದೇಹಬಿಟ್ಟ ಬಳಿಕ ಐದಾರುವರ್ಷ ಗುರುವಿಲ್ಲದ ಮಠವಾಗಿ, ಬಹುಮಟ್ಟಿಗೆ ಜನರ ಔದಾಸೀನ್ಯಕ್ಕೆ ಪಾತ್ರವಾಗಿತ್ತು. ಆಗ ಮಠದ ಅವ್ಯವಸ್ಥೆಯು ಎಷ್ಟರಮಟ್ಟಿಗೆ ಆಗಿತ್ತೆಂಬದನ್ನು ಮೇಲೆ ಹೇಳಿಯೇ ಇದೆ. ಇನ್ನು ಮೇಲೆ ಆ ಅವ್ಯವಸ್ಥೆಯು ನಷ್ಟವಾಗಿ ಲೋಕಾಪುರ ಮಠವು ಸುವ್ಯವಸ್ಥೆಯುದಾಗುವ ಯೋಗವನ್ನು ಪರಮಹಂಸರು ಒದಗಿಸಿಕೊಟ್ಟದ್ದರಿಂದಲೇ, "ಶಾಂತವಾಗುವ ದೀಪವು ದೊಡ್ಡದಾಗುವ" ಂತೆ ಮಠದ ಅವ್ಯವಸ್ಥೆಯು ಪರಮಾವಧಿಗೆ ಮುಟ್ಟಿತೆಂದು ಹೇಳಬಹುದು ಅದರಲ್ಲಿ, ಉಡಾಳ ಭುಜಂಗನು ಸ್ವಾಮಿಯಾದ ಬಳಿಕಂತು ಕೇಳುವದೇನು? ಆ ಅವ್ಯವಸ್ಥೆಯ ಗುಡಿಗೆ ಅವಿವೇಕದ ಕಳಸವಿಟ್ಟಂತಾಯಿತು! ಬಾಲಭುಜಂಗಸ್ವಾಮಿಯು ಹಿಂದಿನ ಸ್ವಾಮಿಗಳು ಎಂತಹ ವ್ಯವಹಾರ ಪರಾಙ್ಮುಖರಾಗಿದ್ದರೂ, ಎಂತಹ ಅವ್ಯವಸ್ಥಿತಾಚರಣೆಯವರಾಗಿದ್ದರೂ ಅವರು ಮಹಾ ಜ್ಞಾನಿಗಳೂ, ಮಹಿಮಾಶಾಲಿಗಳೂ ಆಗಿದ್ದದ್ದರಿಂದ, ಮಠದ ಹುಳುಕುಗಳೆಲ್ಲ ಮುಚ್ಚಿಕೊಂಡು, ಆ ಸ್ವಾಮಿಗಳ ಮುಂದೆ ಲೋಕವೇ ವಿನಮ್ರವಾಗುತ್ತಿತ್ತು! ಲೋಕಾಪುರದ ಸ್ವಾಮಿಗಳು ತಮ್ಮ ಮಹಿಮೆಯಿಂದ ಒಣಗಿದ ಕೊರಡು ಚಿಗಿಸುಸುವವರು, ಬಂಜೆಗೆ ಮಕ್ಕಳ ಕೊಡುವವರು, ಒರಡು ಹೈನು ಮಾಡುವ

ವರು ಎಂದು ಖ್ಯಾತಿಯನ್ನು ಪಡೆದಿದ್ದರು! ಆದರೆ ಬಾಲ ಭುಜಂಗನಲ್ಲಿ ಅಂತಹ ಯಾವ ಯೋಗ್ಯತೆಯೂ ಕಂಡುಬಾರದೆ, ಆತನು ಬರಿಯ ಉಡಾಳನಾಗಿರಲು, ಮಠಕ್ಕೆ ಗೌರವವು ಹೇಗೆ ಬರಬೇಕು? ಆದರೆ "ದುಃಖದ ಮುಂದೆ ಸುಃಖವು" ಎಂಬ ನಿಯಮದಂತೆ, ಅವ್ಯವಸ್ಥೆಯ ಮುಂದೆ ವ್ಯವಸ್ಥೆಯಾಗುವ ಯೋಗವು, ಉಡಾಳ ಭುಜಂಗನಿಂದಲೇ ಒದಗಿ ಬರಲಿಕ್ಕೆ ತಕ್ಕ ಕಾರಣವಿತ್ತೆಂಬದು, ಕೆಳಗಿನ ವಿವರಣದಿಂದ ಗೊತ್ತಾಗಬಹುದು.

ಮಹಾತ್ಮರಾದ ಅಜಮೀರ ಸಾಹೇಬರು ತಮ್ಮ ಶಿಷ್ಯರಾದ ಪರಮಹಂಸರಿಗೆ—"ನಿನ್ನ ಮುಂದಿನ ಏಳು ತಲೆಗಳವರು ಜನ್ಮತಃ ಸಿದ್ಧಿಗಳನ್ನೂ, ಜ್ಞಾನವನ್ನೂ ಪಡೆಯುವರೆಂತಲೂ, ಅವರ ಮುಂದಿನವರು ತಪಸ್ಸಿನಿಂದ ಜ್ಞಾನ—ಸಿದ್ಧಿಗಳನ್ನು ಸುಲಭವಾಗಿ ಪಡೆಯುವರೆಂತಲೂ ವರಪ್ರದಾನ ಮಾಡಿದ್ದನ್ನು ನಾವು ಆಗಾಗ್ಗೆ ಹೇಳುತ್ತ ಬಂದಿರುವೆವಷ್ಟೆ? ಆದರಂತೆಯೇ ತಪಸ್ಸಿಗೆ, ರಾಗಿ—ವಿರಾಗಿ ಸ್ಥಿತಿಗಳಿಗಿಂತ ತನ್ಮಿಶ್ರಸ್ಥಿತಿಯು ಅನುಕೂಲವೆಂಬ ಮಾತನ್ನು ಈ ಕರ್ಮಯೋಗ ಪ್ರಧಾನಖಂಡದ ಆರಂಭದಲ್ಲಿ ಸೂಚಿಸಿದ್ದೇವೆ ಬಾಲ ಭುಜಂಗನು ಪರಮಹಂಸರಿಂದ ಏಳನೆಯ ತಲೆಯವನಾದದ್ದರಿಂದ, ಅಜಮೀರ ಸಾಹೇಬರ ವರಪ್ರದಾನದಂತೆ ಆತನು ಪೀಠಕ್ಕೆಬಂದಕೂಡಲೆ ಆತನಲ್ಲಿಸಿದ್ಧಿಗಳ, ಹಾಗುಜ್ಞಾನದವೊಳಿಕೆಗಳು ಒಡೆದಿದ್ದವು; ಆದರೆ ಆವೊಳಿಕೆಗಳು ಜನರ ಕಣ್ಣಿಗೆ ಬೀಳಲಿಕ್ಕೆ ಕೆಲ ಕಾಲಾವಧಿಯುಬೇಕಾಗಿತ್ತು. ಪರಮಹಂಸರು ಲೋಕಕಲ್ಯಾಣಕ್ಕಾಗಿ ಬಾಲಭುಜಂಗನ ಮುಖಾಂತರ, ಲೋಕಾಪುರಪೀಠದ ಮುಂದಿನ ಸ್ವಾಮಿಗಳಿಗೆ ಕರ್ಮಯೋಗದ ಮಾರ್ಗವನ್ನು ತೋರಿಸಬೇಕಾಗಿರಲು, ಆ ಮಾರ್ಗವನ್ನು ತೋರಿಸುವದಕ್ಕಾಗಿ ಸ್ವತಃ ತಾವೇ ಬಾಲಭುಜಂಗಯೋಗಿಗಳ ರೂಪದಿಂದ ಅವತರಿಸಿ ಬಂದಿದ್ದರೆಂತಲೂ ಹಿಂದೆಯೊಮ್ಮೆ ನಾವು ಸೂಚಿಸಿರುವೆವು; ಆದ್ದರಿಂದಲೇ ಬಾಲಭುಜಂಗನು ಪರಮಹಂಸರಂತೆ ಮಹಾ ತಪಸ್ವಿಯೂ, ಮಹಿಮಾಶಾಲಿಯೂ. ಹೊಸ ಕರ್ಮಯೋಗವನ್ನು ಬಳಕೆಯಲ್ಲಿ ತರುವಷ್ಟು ಕರ್ತೃತ್ವಶಾಲಿಯೂ ಆದನು! ಅದರಿಂದಆತನಿಗೆಕರ್ಮಯೋಗದ

ಆಚಾರ್ಯಪದವಿಯುದೊರೆಯಿತು! ಹೀಗೆ ಬಾಲಭುಜಂಗನು ಕರ್ಮಯೋಗವನ್ನು ಆಚರಿಸಿ ಜಗತ್ತಿಗೆ ಸತ್ಕರ್ಮದ ಮಹಿಮೆಯನ್ನು ತೋರಿಸದಿದ್ದರೆ, ಈವರೆಗೆ ಕೇವಲ ವಿರಾಗಿಯು, ಅಂದರೆ ವೈರಾಗ್ಯಶಾಲಿಯು ಆಗಿದ್ದ ಲೋಕಾಪುರ ಪೀಠವು, ರಾಗಿ–ವಿರಾಗಿಮಿಶ್ರ ಪೀಠವು ಆಗುತ್ತಿದ್ದಿಲ್ಲ; ಮತ್ತು ಆ ಪೀಠದಿಂದ ಪ್ರಾಮುಖ್ಯವಾಗಿ ಜನರ ವ್ಯಾವಹಾರಿಕ ಕಲ್ಯಾಣವೂ ಆಗುತ್ತಿದ್ದಿಲ್ಲ; ಯಾಕಂದರೆ, ಕೇವಲ ವಿರಾಗಿಯಾಗಿದ್ದ ಮಠವು ಎಸರು ಬಂದ ನಿರ್ಮಲ ನೀರಿನಂತೆ ದುಸ್ಸಹವೂ, ಕೇವಲ ರಾಗಿಯಾಗಿದ್ದ ಮಠವು ಹೆಪ್ಪುಗಟ್ಟಿದ ಬಚ್ಚಲನೀರಿನಂತೆ ರೋಗಕಾರಕವೂ ಆಗಿ, ಜನರ ಬಳಿಕೆಗೆ ಅನುಪಯುಕ್ತವಾಗುವದರಿಂದ, ಹವಣಿಯಾದ ಸ್ವಚ್ಛ ನೀರಿನಂತೆ, ಜನರ ಬಳಿಕೆಗೆ ತಕ್ಕದ್ದಾದ ರಾಗ–ವಿರಾಗಮಿಶ್ರಸ್ಥಿತಿಯನ್ನು ಲೋಕಾಪುರಪೀಠವು ಹೊಂದುವದು ಅವಶ್ಯವಾಗಿರಲು, ಆ ಸುಯೋಗವು ಬಾಲಭುಜಂಗ ಯೋಗಿಗಳ ಕಾಲದಲ್ಲಿ ಒದಗಿ ಬಂದಿತೆಂದು ತಿಳಿಯಬೇಕಾಗುವದು.

**ಭುಜಂಗನ ಉಪನಯನವೂ, ಆತನಿಗಾದ ಮಂತ್ರೋಪದೇಶವೂ**—ಬಾಲಭುಜಂಗನು ಎಂಟು ವರ್ಷದವನಾಗಲು, ಆತನ ತಂದೆ ತಮ್ಮಣದೀಕ್ಷಿತರು ಆತನ ಉಪನಯನ ಮಾಡಿದರು ; ಆದರೆ ರಾಮಚಂದ್ರಸ್ವಾಮಿಗಳು ದೇಹ ಬಿಟ್ಟ ಬಳಿಕ ಬಾಲಭುಜಂಗನಿಗೆ ಪೀಠವಾದದ್ದರಿಂದ, ಆತನಿಗೆ ಮಠದ ಮೂಲ ಮಂತ್ರೋಪದೇಶವಾಗಿದ್ದಿಲ್ಲ ; ಆದ್ದರಿಂದ ತಮ್ಮಣದೀಕ್ಷಿತರು ಬಾಲಭುಜಂಗನನ್ನು ಕರಕೊಂಡು ಗುರುಮಂತ್ರೋಪದೇಶ ಕೊಡಿಸುವದಕ್ಕಾಗಿ ಜಮಖಂಡಿಗೆ ಬಂದರು. ಅಲ್ಲಿ ಮಂತ್ರೋಪದೇಶ ಕೊಡಲು ಸಮರ್ಥರೂ, ಮಠದ ಪುರೋಹಿತರೂ, ಮಠದ ಶಿಷ್ಯರಲ್ಲೆಲ್ಲ ಹಿರಿಯರೂ ಆದ ನಿಂಬರಗಿ ಎಂಬ ಅಡ್ಡಹೆಸರಿನ ರಾಮಭಟ್ಟರೆಂಬ ಹೆಸರಿನ ಬ್ರಾಹ್ಮಣರು ಇದ್ದರು. ರಾಮಭಟ್ಟರು ದಶಗ್ರಂಥಿಗಳಿದ್ದು, ಶಿವಪೂಜಾತತ್ಪರರಾಗಿದ್ದರು. ಹೀಗೆ ಉಪದೇಶ ಕೊಡಲು ಅಧಿಕಾರಿಗಳಾಗಿದ್ದ ರಾಮಭಟ್ಟರನ್ನು ಕುರಿತು ತಮ್ಮಣದೀಕ್ಷಿತರು— “ ರಾಮಭಟ್ಟರೇ, ಲೋಕಾಪುರ ಪೀಠಸ್ಥನಾದ ಈ ಬಾಲಭುಜಂಗನಿಗೆ ಮಠದ ಮೂಲಮಂತ್ರೋಪದೇಶವಾ

ಗಿಲ್ಲವು; ಆದ್ದರಿಂದ, ಲೋಕಾಪುರದ ಮಠದವರಿಂದ ಮಂತ್ರೋಪದೇಶ ಪಡೆದಿರುವ ನೀವು, ಈ ಭುಜಂಗನಿಗೆ ಮಂತ್ರೋಪದೇಶ ಮಾಡಬೇಕು" ಎಂದು ಪ್ರಾರ್ಥಿಸಿದರು. ಆಗ ರಾಮಭಟ್ಟರು ತಮ್ಮಣದೀಕ್ಷಿತರಿಗೆ-"ಈ ಬಾಲಭುಜಂಗರು ನನಗೆ ಗುರುಗಳಾಗಿರಲು, ಅವರಿಗೆ ಉಪದೇಶಕೊಡಲು ನಾನು ಯೋಗ್ಯನಲ್ಲವು; ಆದರೂ ಅವರ ವಂಶಜರೇ ನನಗೆ ಕೊಟ್ಟಿರುವ ಉಪದೇಶವನ್ನು, ನನ್ನ ಮೇಲೆ ಅವರ ಕೃಪೆಯಾಗುವದಕ್ಕಾಗಿ ಈ ಬಾಲ ಭುಜಂಗರವರಿಗೆ ಮಂತ್ರೋಪದೇಶ ಮಾಡುವೆನು" ಎಂದು ಹೇಳಿ, ರಾಮ ಭಟ್ಟರು ಗುರುಸಾಂಪ್ರದಾಯದಂತೆ ಬಾಲಭುಜಂಗ ಸ್ವಾಮಿಗಳಿಗೆ ಮಂತ್ರೋಪದೇಶ ಮಾಡಿದರು! ಆಗ ಸತ್ಪಾತ್ರದಲ್ಲಿ ವಿದ್ಯೆಯು ಫಲಿಸು ವಂತೆ, ಬಾಲಭುಜಂಗನಲ್ಲಿ ಮಂತ್ರಪ್ರಭಾವದ ಗುರುಕಲೆಯುಂಟಾಗಲು, ತಮ್ಮಣದೀಕ್ಷಿತರು ಆತನನ್ನು ಕರಕೊಂಡು ಲೋಕಾಪುರಕ್ಕೆ ಬಂದರು.

**ದೊಡ್ಡವರ ಗುರುತು ದೊಡ್ಡವರಿಗೆ**— ಉಡಾಳ ಭುಜಂಗ ಸ್ವಾಮಿಯು ಜನತಿರಸ್ಕೃತನಾಗಿದ್ದನೆಂದು ಮೇಲೆ ಹೇಳಿದೆಯಷ್ಟೇ? ಲೋಕಾಪುರದ ಬ್ರಾಹ್ಮಣರೆಲ್ಲ ವೈಷ್ಣವರು; ಪರಮಹಂಸರ ಮಠವು ಒಂದೇ ಕಣ್ವಶಾಖೆಯದು; ಆದರೂ ಮಠದ ಪ್ರಭಾವದ ವಿಷಯದಲ್ಲಿ ಜನರ ನಂಬಿಗೆಯಷ್ಟೇ ಅಲ್ಲ, ಭಯವೂ ಇತ್ತು! ಆದರೂ ಭುಜಂಗನ ಉಡಾಳತ ನದ ಮೂಲಕ ಮಠದ ವಿಷಯದಲ್ಲಿ ಜನರ, ವಿಶೇಷವಾಗಿ ವೈಷ್ಣವರ ತಿರ ಸ್ಕಾರವು ಹೆಚ್ಚಿದ್ದರಲ್ಲಿ ಆಶ್ಚರ್ಯವಿಲ್ಲ. ಹೀಗಿರುವಾಗ ಗಲಗಲಿಯ ಸುಪ್ರ ಸಿದ್ಧ ನರಸಿಂಹಾಚಾರ್ಯರೆಂಬ ಮಹಾತ್ಮರು ಸಂಚಾರಾರ್ಥವಾಗಿ ಲೋಕಾ ಪುರಕ್ಕೆ ಬಂದರು. ಆಗ ವೈಷ್ಣವರಲ್ಲಿ ಅವರ ಆದರ ಸತ್ಕಾರಗಳು ನಡೆ ದವು. ಒಂದು ದ್ವಾದಶಿಯ ದಿವಸ ನರಸಿಂಹಾಚಾರ್ಯರು ಲೋಕಾಪು ರದ ಸ್ವಾಮಿಗಳಿಗೆ ಆಮಂತ್ರಣ ಕೊಟ್ಟರು; ಆದರೆ ತಮ್ಮಣದೀಕ್ಷಿತರು ತಮ್ಮ ಮಗನಾದ ಉಡಾಳ ಭುಜಂಗನನ್ನು ಪರಿಶುದ್ಧವೈಷ್ಣವರಲ್ಲಿ ಊಟಕ್ಕೆ ಕರಕೊಂಡು ಹೋಗಲಿಕ್ಕೆ ಸಂಕೋಚಪಟ್ಟು, ತಾವು ಒಬ್ಬರೇ ಊಟಕ್ಕೆ ಹೋದರು. ಆಗ ನರಸಿಂಹಾಚಾರ್ಯರು ತಮ್ಮಣದೀಕ್ಷಿತರನ್ನು ಕುರಿತು—"ಯಾಕೆ ತಮ್ಮಣದೀಕ್ಷಿತರೇ, ಸ್ವಾಮಿಗಳು ಊಟಕ್ಕೆ ಬರ

ಲಿಲ್ಲ? ವೈಷ್ಣವರಲ್ಲಿ ಊಟಮಾಡಬಾರದೆಂಬ ನಿಯಮವಿರುವದೋ ಹೇಗೆ? ಎಂದು ಕೇಳಲು, ಅದಕ್ಕೆ ತಮ್ಮಣದೀಕ್ಷಿತರು—“ ನಿಯಮಗಿ ಯಮವೇನು ಇಲ್ಲ; ಸಣ್ಣವ, ಕಿಡಗೇಡಿ ಹುಡುಗ, ಸಮೂಹದಲ್ಲಿ ಊಟಕ್ಕೆ ಕುಳ್ಳಿರುವದು ಪ್ರಶಸ್ತವಲ್ಲವೆಂದು ತಿಳಿದು ಊಟಕ್ಕೆ ಕರಕೊಂಡು ಬಂದಿಲ್ಲ; ಸಾಗಲಿ, ನಾನು ಬಂದಿರುವೆನಲ್ಲ” ಎಂದು ಹೇಳಿದರು. ಆದಕ್ಕೆ ನರಸಿಂಹಾ ಚಾರ್ಯರು—“ ಇಲ್ಲ, ಸ್ವಾಮಿಗಳು ಊಟಕ್ಕೆ ಬರಲೇಬೇಕು. ಅವರು ಊಟಕ್ಕೆ ಬಾರದಿದ್ದರೆ ನಾವು ಊಟಕ್ಕೆ ಕುಳಿತುಕೊಳ್ಳುವದಿಲ್ಲ.” ಎಂದು ಹೇಳಿದರು! ಆಗ ತಮ್ಮಣದೀಕ್ಷಿತರು ಅನಿವಾರ್ಯಹಕ್ಕಸ್ಸ ಮರಕ್ಕೆ ಹೋಗಿ ಭುಜಂಗಸ್ವಾಮಿಗಳನ್ನು ಊಟಕ್ಕೆ ಕರಕೊಂಡು ಬಂದರು; ಆದರೆ ನರಸಿಂ ಹಾಚಾರ್ಯರ ಪಂಗ್ತಿಯಲ್ಲಿ ಎಲೆ ಇಲ್ಲದ್ದರಿಂದ, ತಮ್ಮಣದೀಕ್ಷಿತರು ಎಲೆ ಯಿದ್ದಲ್ಲಿ ಮಗನನ್ನು ಕರಕೊಂಡು ಕುಳಿತುಕೊಂಡರು.

ಇತ್ತ ನರಸಿಂಹಾಚಾರ್ಯರು ತಮ್ಮ ಬಳಿಯಲ್ಲಿದ್ದವರನ್ನು ಕುರಿತು— “ ಯಾಕೆ? ಇನ್ನೂ ಸ್ವಾಮಿಗಳು ಬರಲಿಲ್ಲ?” ಎಂದು ಕೇಳಲು, ಆಚಾ ರ್ಯಮಂಡಲಿಯು—“ ಆಗಲೇ ಬಂದಿದ್ದಾರೆ; ಆದರೆ ಇಲ್ಲಿ ಎಲೆ ತೆರವಿಲ್ಲ ದ್ದರಿಂದ ತಮ್ಮಣದೀಕ್ಷಿತರು ಮಗನನ್ನು ಕರಕೊಂಡು ಹೊರಗೆ ಕುಳಿತಿ ದ್ದಾರೆ” ಎಂದು ಹೇಳಿದರು. ಆಗ ನರಸಿಂಹಾಚಾರ್ಯರು ತಮ್ಮ ತಂಬಿಗೆ ಥಾಲಿಗಳನ್ನು ತಕ್ಕೊಂಡು ತಾವು ಕುಳಿತಿದ್ದ ಎಲೆಯನ್ನು ಬಿಟ್ಟು ಮೇಲಕ್ಕೆ ಎದ್ದರು! ಆಗ ತಮ್ಮ ತಮ್ಮ ಎಲೆಗಳಮೇಲೆ ಕುಳಿತುಕೊಂಡಿದ್ದ ಆಚಾ ರ್ಯಮಂಡಲಿಯು ಎದ್ದುನಿಂತು ನರಸಿಂಹಾಚಾರ್ಯರಿಗೆ—“ ಇದೇನು ಮಹಾಸ್ವಾಮಿ, ಏಳುವದೇಕೆ?” ಎಂದು ಪ್ರಶ್ನಮಾಡಲು, ನರಸಿಂಹಾ ಚಾರ್ಯರು—“ ನಮಗೆ ಸ್ವಾಮಿಗಳ ಪಂಗ್ತಿಯು ಬೇಕಾಗಿದೆ; ಇಲ್ಲಿ ಯಂತು ಎಲೆಗಳು ತುಂಬಿರುವವು; ಕುಳಿತವರಿಗೆ ಏಳಿರೆಂದು ಹೇಳುವದು ರೀತಿಯಲ್ಲ; ಆದ್ದರಿಂದ ನಾವೇ ಸ್ವಾಮಿಗಳಿದ್ದಲ್ಲಿಗೆ ಹೋಗುವೆವು” ಅನ್ನಲು, ಬಳಿಯಲ್ಲಿದ್ದವರು—“ ಇಲ್ಲ, ತಾವು ಇಲ್ಲಿಯೇ ಕುಳಿತುಕೊಳ್ಳ ಬೇಕು; ಎರಡು ಎಲೆಗಳನ್ನು ಮಾಡುವೆವು” ಎಂದು ಹೇಳಿದರು. ಆಗ ನರಸಿಂಹಾಚಾರ್ಯರು—“ ನಮ್ಮ ಎಡಕ್ಕೊಂದು ಬಲಕ್ಕೊಂದು ಎಲೆ ಹಾಕಿ

ಸಿರಿ''ಎಂದು ಹೇಳಿದರು ಅದರಂತೆ ಎರಡು ಎಲೆಗಳನ್ನು ತೆರವುಮಾಡಿಸಲು, ನರಸಿಂಹಾಚಾರ್ಯರು ಸ್ವಾಮಿಗಳಿಗೆ ತಮ್ಮ ಬಲಕ್ಕೆ, ತಮ್ಮಣದೀಕ್ಷಿತರಿಗೆ ತಮ್ಮ ಎಡಕ್ಕೆ ಕೂಡಬೇಕೆಂದು ಹೇಳಿದರು. ಆಗ ತಮ್ಮಣದೀಕ್ಷಿತರು ಸಂಕೋಚಪಟ್ಟು ನರಸಿಂಹಾಚಾರ್ಯರಿಗೆ ಮೊದಲಿನಂತೆ—"ಸಣ್ಣ ಹುಡುಗ, ಕಿಡಿಗೇಡಿಸ್ವಭಾವ, ಸಿಡಿಸಿಗಿಡಿಸಿಯಾನು; ಎಲೆ ಸ್ವಲ್ಪದೂರ ಹಾಕುವದು ನೆಟ್ಟಗೆ" ಎಂದು ಸೂಚಿಸಿದರು. ಅದಕ್ಕೆ ಆಚಾರ್ಯರು—"ಏನೂ ಚಿಂತೆಯಿಲ್ಲ, ಇಲ್ಲಿಯೇ ಕುಳಿತುಕೊಳ್ಳಲಿ ಅವರ ಪ್ರಸಾದಕ್ಕಾಗಿಯೇ ನಾನು ಬಂದಿದ್ದೇನೆ." ಎಂದು ಹೇಳಿ, ಭುಜಂಗಸ್ವಾಮಿಗಳನ್ನು ತಮ್ಮ ಬಲಕ್ಕೆ. ತಮ್ಮಣದೀಕ್ಷಿತರನ್ನು ತಮ್ಮ ಎಡಕ್ಕೆ ಕುಳ್ಳಿರಿಸಿಕೊಂಡರು! ಊಟವಾದಬಳಿಕ ತಾಂಬೂಲತಕ್ಕೊಂಡು ತಮ್ಮಣದೀಕ್ಷಿತರು ಮಗನೊಡನೆ ಮಠಕ್ಕೆ ಹೋಗಲು, ಇತ್ತ ನರಸಿಂಹಾಚಾರ್ಯರು ತಮ್ಮ ಜನರ ತಪ್ಪುತಿಳುವಳಿಕೆಯನ್ನು ದೂರಮಾಡಿ. ಮಠದಲ್ಲಿ ವಿಶ್ವಾಸವಿಟ್ಟು ನಡೆದುಕೊಳ್ಳಬೇಕೆಂದು ಹೇಳಿದರು ಬಾಲಭುಜಂಗನು ಸಾಮಾನ್ಯಜನರಿಗೆ ಉಡಾಳನಾಗಿತೋರಿದರೂ, ದೊಡ್ಡವರಿಗೆ ಆತನ ನಿಜವಾದ ಯೋಗ್ಯತೆಯು ಗುರುತುಹತ್ತದೆ ಹೇಗೆ ಇದ್ದೀತು?



# ೪ನೇ ಅಧ್ಯಾಯ—ಸಿದ್ಧಿಗಳ ಪ್ರಕಟೀಕರಣ



**ಭುಜಂಗನ ಭವಿಷ್ಯ ಕಥನ**-ಯಾತಕ್ಕಾದರೂ ತಕ್ಕ ಕಾಲವು ಒದಗಿ ಬರಬೇಕಾಗುತ್ತದೆಂಬ ಮಾತು ಸುಳ್ಳಲ್ಲ ಅದರಂತೆ, ಬಾಲಭುಜಂಗನ ಪ್ರಭಾವವು ಹೊರಬೀಳಲಿಕ್ಕೂ ತಕ್ಕಕಾಲವು ಒದಗಿಬರಬೇಕಾ

ಗಿತ್ತು. ಬಾಲಭುಜಂಗನು ಏಳು ಎಂಟುವರ್ಷದವನಿರಬಹುದು; ಆಗ ತಮಣದೀಕ್ಷಿತರು ಆತನ ವಾರಸಾ ವಿಚಾರಮಾಡಿಸುವದಕ್ಕಾಗಿ ಆತನನ್ನು ಕರಕೊಂಡು ಲೋಕಾಪುರದ ಆಗಿನ ದೇಸಾಯರಾಗಿದ್ದ ಹೆಬ್ಬಾಳಪ್ಪ ಎಂಬ ವರ ವಾಡೆಗೆ ಹೋದರು. ಕೂಡಲೆ ವಾಡೆಯ ಒಳಅಂಗಳದಲ್ಲಿ ಹುಡುಗ ರೊಡನೆ ಬಾಲಭುಜಂಗನ ಗೋಲಿಯ ಆಟಕ್ಕೆ ಆರಂಭವಾಯಿತು. ಇತ್ತ ತಮ್ಮಣದೀಕ್ಷಿತರು ದೇಸಾಯರ ಬಳಿಗೆ ಹೋಗಿ ಸದರಿನಲ್ಲಿ ಕುಳಿತು ದೇಸಾಯರಿಗೆ—"ಯಜಮಾನರೇ, ನನ್ನ ಮಗನನ್ನು ನಿಮ್ಮ ಮಠಕ್ಕೆ ದತ್ತಕವಾಗಮಾಡಿದಿರಿ; ಆದರೆ ಆತನ ವಾರಸಾ, ದಪ್ತರಕ್ಕೆ ದಾಖಲವಾ ಗುವದು ಉಳಿದದೆ; ಆದ್ದರಿಂದ ವಾರಸಾವಿಚಾರಮಾಡಿ ಆತನ ವಾರಸಾ ದಪ್ತರದಲ್ಲಿ ದಾಖಲಮಾಡಬೇಕು." ಎಂದು ಹೇಳಿದರು. ಅದಕ್ಕೆ ದೇಸಾ ಯರು—"ಸ್ವಾಮಿಗಳೇ, ಮುಖ್ಯ ಸರಕಾರವಾದ ಮುಧೋಳಸಂಸ್ಥಾನದಲ್ಲಿ ವಾರಸಾದಾಖಲಮಾಡಿಸಿ, ಅದರ ದಾಖಲೆಯನ್ನು ತಂದು ನಮಗೆ ಕೊಡಿರಿ; ಅಂದರೆ ನಾವು ಭುಜಂಗಸ್ವಾಮಿಗಳ ವಾರಸಾದಾಖಲಮಾಡಿ ಕೊಳ್ಳುವೆವು." ಎಂದು ಹೇಳಿದರು. ಅದಕ್ಕೆ ತಮ್ಮಣದೀಕ್ಷಿತರು— "ಮುಧೋಳಸರಕಾರದಲ್ಲಿ ನಮ್ಮ ಗುರುತು ಪರಿಚಯಗಳಿಲ್ಲದ್ದರಿಂದ, ಅಲ್ಲಿ ನಮ್ಮ ದಾದು ಹತ್ತಲಿಕ್ಕಿಲ್ಲ; ಆದ್ದರಿಂದ ನೀವು ಇಲ್ಲಿಯೇ ಮೊದಲು ವಾರಸಾವಿಚಾರಮಾಡಿ ದಾಖಲಮಾಡಿದರೆ, ಅದರ ಉತಾರವನ್ನು ನಾವು ಸರಕಾರಕ್ಕೆ ಒಯ್ದು ತೋರಿಸಿ, ಅಲ್ಲಿ ವಾರಸಾದಾಖಲಮಾಡಿಸಲಿಕ್ಕೆ ಸುಲಭವಾಗುವದು." ಎಂದು ಹೇಳಿದರು; ಆದರೆ ದೇಸಾಯರು ಅದಕ್ಕೆ ಒಪ್ಪದೆ, ತಮ್ಮ ಹಟವನ್ನೇ ಹಿಡಿದರು. "ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬ ಮಾತು ಸುಳ್ಳಲ್ಲ.

ನಿಜವಾಗಿಯೆಂದರೆ, ಲೋಕಾಪುರದ ಹೆಬ್ಬಾಳಪ್ಪ ದೇಸಾಯರು ಕ್ಷತ್ರಿಯವರ್ಣದವರಿದ್ದು, ಧರ್ಮಿಷ್ಠರೆಂದು ಪ್ರಸಿದ್ಧರಾದವರು. ದೇವ ಬ್ರಾಹ್ಮಣರಲ್ಲಿ ಅವರ ವಿಶ್ವಾಸ ಬಹಳ; ಲೋಕಾಪುರಮಠದಲ್ಲಿ ಅವರ ಪೂರ್ಣಭಕ್ತಿ; ಊರ ಎಲ್ಲ ದೇವಸ್ಥಾನಗಳಲ್ಲಿ ಅವರು ನಂದಾದೀಪ ಗಳನ್ನು ಇಡಿಸಿದ್ದರು; ಅವರು ಹೆಬ್ಬಾಳ, ಜುನ್ನೂರು ಎಂಬ ಎರಡು

ಗ್ರಾಮಗಳಲ್ಲಿ ಮಾರುತೀ ಪ್ರೀತ್ಯರ್ಥ ಪ್ರತಿವರ್ಷ ಎರಡು ಬ್ರಾಹ್ಮಣ ಸಮಾರಾಧನೆಗಳನ್ನು ಮಾಡುತ್ತಿದ್ದರು; ಆ ಸಮಾರಾಧನೆಗೆ ಬ್ರಾಹ್ಮಣ-ಸುವಾಸಿನಿಯರನ್ನು ಬಂಡಿಯ ಕೊಟ್ಟು ಆದರದಿಂದ ಕರಿಸಿಕೊಳ್ಳುತ್ತಿದ್ದರು; ಊಟಕ್ಕೆ ಬಂದಿದ್ದ ಬ್ರಾಹ್ಮಣರ ದೋತರ ಹರಿದಿದ್ದರೆ ಅವರಿಗೆ ಹೊಸದೋತರ ಕೊಡಿಸುತ್ತಿದ್ದರು! ಇಂಥ ಶ್ರದ್ಧಾ-ಭಕ್ತಿಗಳುಳ್ಳ ದೇಸಾಯಿ ಹೆಬ್ಬಾಳಪ್ಪನವರು, ತಮ್ಮಣದೀಕ್ಷಿತರೊಡನೆ ಹಟದಿಂದ ವಾದಿಸುವದೆಂದರೆ, ಮೇಲೆ ಹೇಳಿರುವಂತೆ, "ವಿನಾಶಕಾಲಕ್ಕೆ ವಿಪರೀತಬುದ್ಧಿ"ಯುಂಟಾದಂತೆಯೇ ಸರಿ! ಹೀಗೆ ತಮ್ಮ ತಂದೆಯು ದೇಸಾಯರೊಡನೆ ವಾದಿಸುತ್ತಿರಲು, ಗೋಲಿಯಾಡುತ್ತಿದ್ದ ಭುಜಂಗನು ಆಟವನ್ನು ಬಿಟ್ಟು ಸದರಿನ ಬಳಿಗೆ ಬಂದು ತನ್ನ ತಂದೆಯನ್ನು ಕುರಿತು— "ಅಪ್ಪಾ, ಬಾ, ಮಠಕ್ಕೆ ಹೋಗೋಣ, ಯಾಕೆ ವಾದಿಸುತ್ತ ಕುಳಿತೆ? ಸ್ವಲ್ಪ ದಿನಗಳಲ್ಲಿಯೇ ಈತನ ಮಗನ, ಹಾಗು ನನ್ನ ವಾರಸಾವಿಚಾರವು ಕೂಡಿಯೇ ಮುಧೋಳದಲ್ಲಿ ಆಗುವದು" ಎಂದು ಹೇಳಿದನು. ಭುಜಂಗನು ಮಹಾ ಉಡಾಳನೆಂದು ಪ್ರಸಿದ್ಧನಾಗಿದ್ದರೂ, ಆತನ ಈಮಾತು ಹೆಬ್ಬಾಳಪ್ಪ ದೇಸಾಯರಿಗೆ ಎದೆಯಲ್ಲಿ ಬಾಣನಟ್ಟಂತೆ ಬಾಧಿಸಿತು! ಆದರೂ ಭುಜಂಗಸ್ವಾಮಿಗಳ ವಾರಸಾವಿಚಾರಮಾಡುವ ಬುದ್ಧಿಯು ಅವರಿಗೆ ಆಗಲಿಲ್ಲವು! ತಮ್ಮಣದೀಕ್ಷಿತರು ಮಗನನ್ನು ಕರಕೊಂಡು ಮಠಕ್ಕೆ ಹೋದರು. ಬಾಲಭುಜಂಗನಭವಿಷ್ಯದಂತೆ ಹೆಬ್ಬಾಳಪ್ಪ ದೇಸಾಯರು ಮುಂದೆ ಸ್ವಲ್ಪ ದಿನಗಳಲ್ಲಿ ತೀರಿಕೊಳ್ಳಲು, ಅವರ ಮಕ್ಕಳಾದ ಈಗಿನ ದೇಸಾಯಿ ವೆಂಕಟರಾಯರ ವಾರಸಾವಿಚಾರವೂ, ಬಾಲಭುಜಂಗಸ್ವಾಮಿಗಳ ವಾರಸಾವಿಚಾರವೂ ಒಂದು ವರ್ಷ ತುಂಬುವದರೊಳಗಾಗಿ ಮುಧೋಳಸಂಸ್ಥಾನದಲ್ಲಿ ಕೂಡಿಯೇ ಆದವಂತೆ? ಅಂದಬಳಿಕ ಬಾಲಭುಜಂಗನು ಉಡಾಳನೋ, ತ್ರಿಕಾಲಜ್ಞನೋ ಎಂಬದನ್ನು ವಾಚಕರೇ ವಿಚಾರಿಸತಕ್ಕದ್ದು!

**ಭುಜಂಗನ ಜಲಸೃಷ್ಟಿಯು**— ಮೇಲೆ ಹೇಳಿದಂತೆ ಭುಜಂಗನು ಭವಿಷ್ಯಕಥನ ಮಾಡಿದಬಳಿಕ, ಕೆಲವು ದಿವಸಗಳಮೇಲೆ ತಮ್ಮಣದೀಕ್ಷಿತರು ಸಂಚಾರಕ್ಕಾಗಿ ದೇಶದಮೇಲೆ ಹೊರಟರು. ದೇಶ-ಸಂಚಾರ ಮಾಡ್ತು

ವದು ಲೋಕಾಪುರಪೀಠದ ಕರ್ತವ್ಯವೇ ಆಗಿತ್ತೆಂದು ಬೇರೆ ಹೇಳುವ ಕಾರಣ ವಿಲ್ಲ. ಅವರು ಸಂಚಾರಮಾಡುತ್ತ ಮಾಡುತ್ತ ಲೋಕಾಪುರದಿಂದ ಆರೇಳು ಮೈಲುಗಳ ಮೇಲಿರುವ ಬಾದಾಮಿತಾಲೂಕಿನೊಳಗಿನ ಹಣಮನ ಏರಿ ಎಂಬ ಊರಿಗೆ ಹೋದರು ಹಣಮನ ಏರಿಯು ನಿರ್ಜಲ ಪ್ರದೇಶ! ಅಬ್ರಹ್ಮಣ್ಯಕೊಂಪಿ ಊರವರು ಎರಡುಮೈಲುಗಳ ಮೇಲಿಂದ ನೀರು ತರುತ್ತಿದ್ದರು! ಹೀಗಿರುವಾಗ ಬಾಲಭುಜಂಗನು ಬಹಿರ್ದೆಸೆಗೆ ಹೋಗ ಬೇಕೆಂದು ಹೇಳಲು, ಶೂದ್ರ ಶಿಷ್ಯನು ತಂಬಿಗೆ ತಕ್ಕೊಂಡು ಭುಜಂಗನನ್ನು ಕರಕೊಂಡು ಹಳ್ಳಕ್ಕೆ ಹೊರಟನು. ಆಗ ಆ ಶೂದ್ರಶಿಷ್ಯನು ಸ್ವಾಮಿಗ ಳಿಗೆ— "ಅಪ್ಪಾ, ಹಳ್ಳದಲ್ಲಿ ನೀರುಇಲ್ಲ, ಕೈಕಾಲು ತೊಳೆದುಕೊಳ್ಳಲಿಕ್ಕೆ ಹೇಗೆ ಮಾಡುತ್ತೀ?" ಎಂದು ಕೇಳಿದನು. ಅದಕ್ಕೆ ಭುಜಂಗನು— ಹಳ್ಳ ಕ್ಕಂತು ಹೋಗೋಣ, ನೀರಿನ ಮಾತುಹಿಂದುಗಡೆಗೆ" ಎಂದು ಹೇಳಿ ಬಹಿರ್ದೆಸೆಗೆ ಹೋಗುವಾಗ ಶಿಷ್ಯನಿಗೆ ಒಂದು ಕಲ್ಲಿನ ಪಡಿಯನ್ನು ತೋರಿಸಿ, ಆತನನ್ನು ಕುರಿತು— "ಎಲೋ, ಈ ಪಡಿಯ ಹತ್ತಿರ ನೀನು ಒರತಿಯನ್ನು ತೋಡುತ್ತ ಕುಳಿತುಕೊಳ್ಳು" ಎಂದು ಹೇಳಿ, ತಾನು ಬಹಿ ರ್ದೆಸೆಗೆ ಹೋದನು. ಇತ್ತ ಆ ಸೇವಕನು ಭುಜಂಗನ ಅಪ್ಪಣೆಯಂತೆ ಒರತಿಯನ್ನು ತೋಡತೊಡಗಲು, ಒರತಿಯಲ್ಲಿ ನೀರು ಬಿದ್ದವು! ಬಾಲ ಭುಜಂಗನು ಬಹಿರ್ದೆಸೆಗೆ ಹೋಗಿ ಬಂದು ಅದೇ ಒರತಿಯಲ್ಲಿ ಕೈಕಾಲು ತೊಳೆದುಕೊಂಡನು! ಈಗ ಆ ಹಣಮನೇರಿಯ ಊರೇ ಆಒರತಿಯಲ್ಲಿ ನೀರು ತುಂಬುತ್ತಿರುವದಂತೆ! ಆ ಊರ ನೀರಿನ ತಾಪವುದೂರವಾಗಿ ಹೋಯಿತು! ಅದೇ ಹಳ್ಳದ ದಂಡೆಯಲ್ಲಿರುವ ಖಜ್ಜಿಡೋಣಿ ಎಂಬ ಊರ ಹತ್ತಿರ ಸರಕಾರದವರು ಬಹಳ ಹಣವೆಚ್ಚಮಾಡಿ ಬಾವಿಯ ತೋಡಿಸಿದರೂ ನೀರು ಬೀಳಲಿಲ್ಲವಂತೆ; ಮತ್ತು ಹಣಮನೇರಿಯಲ್ಲಾದರೂ ಆ ಒರತಿಯ ಹೊರತು ಬೇರೆಕಡೆ ಹಳ್ಳದಲ್ಲಿ ಎಷ್ಟುತೋಡಿದರೂ ನೀರು ಬೀಳುವ ದಿಲ್ಲವಂತೆ!

**ದೃಷ್ಟಿಪ್ರದಾನ**—ಮಠದ ಶಿಷ್ಯನಾದ ನಾರಾಯಣಪ್ಪನೆಂಬ ಕುರುಬಜಾತಿಯವನ ಮಗಳು, "ರಾಜಿ" ಎಂಬ ಹೆಸರಿನ ಮುಸಲ್ಮಾನ

ಜಾತಿಯ ಸಣ್ಣ ಹುಡುಗೆಯು ಇದ್ದಳು ಆಕೆಯ ವಯಸ್ಸು ಎಂಟು ವರ್ಷದ್ದಿರಬಹುದು ಆಕೆಯ ರೂಪ ಸುಂದರ, ಮೈಬಣ್ಣ ಕೆಂಪು, ಕಂಠವು ಅತ್ಯಂತ ಮಧುರ ಆಕೆಯು ಒಂದು ದಿನ ಮಠದ ಅಂಗಳದಲ್ಲಿ ಕಸಗೂಡಿಸುತ್ತಿರುವಾಗ, ಕಣ್ಣುಗಳಲ್ಲಿ ಹಳ್ಳು ಸಿಡಿದ ನೆವದಿಂದ ಆಕೆಯ ಎರಡೂ ಕಣ್ಣುಗಳು ಹೋಗಿಬಿಟ್ಟವು! ಆಗ ಆ ಹುಡುಗೆಯ ತಾಯಿಯು ಕಣ್ಣಲ್ಲಿ ನೀರು ತಂದು ಭುಜಂಗಸ್ವಾಮಿಯನ್ನು ಕುರಿತು—"ಯಪ್ಪಾ, ಈಕೆಯ ಕಣ್ಣುಗಳು ಹಳ್ಳು ಸಿಡಿದದ್ದೇ ನೆವವಾಗಿ ಹೋಗಿ ಬಿಟ್ಟಿವೆ; ಆದರೆ ನನ್ನ ಸ್ವಾಮಿ, ಈಕೆಯ ಕಣ್ಣು ನೆಟ್ಟಗೆ ಮಾಡಿ ಈಕೆಯನ್ನು ನಿನ್ನ ಮಠಕ್ಕೆ ತಕ್ಕೊಂಡು ಬಿಡು" ಎಂದು ಬೇಡಿಕೊಂಡಳು. ಆ ಹೆಣ್ಣುಮಗಳ ಈ ಮಾತುಗಳನ್ನು ಕೇಳಿ ಬಾಲಭುಜಂಗನ ಹೃದಯವು ಕರಗಿತು! ಭುಜಂಗನು ಅತ್ಯಂತ ದಯಾಪರ, ಜಾತಿಭೇದಮಾತ್ರದಿಂದ ತನ್ನ ದಯಾಗುಣಕ್ಕೆ ಬಾಧೆ ತಂದುಕೊಳ್ಳಲಾರದವನು; ಆದ್ದರಿಂದ ಆತನು ಆ ಹುಡುಗೆಯ ತಾಯಿಗೆ—"ನೀನು ಏನೂ ಚಿಂತೆ ಮಾಡಬೇಡ. ಮುತ್ತಜ್ಜನು ದೊಡ್ಡವನಿದ್ದಾನೆ, ನಿನ್ನ ಮಗಳ ಕಣ್ಣುಗಳು ನೆಟ್ಟಗಾಗುವವು. ಅಳಬೇಡ" ಎಂದು ಹೇಳಿ. ಆ ಕರುಣಾಳುವಾದ ಭುಜಂಗನು, ತಾನು ಹನ್ನೆರಡು ವರ್ಷಗಳ ವಯಸ್ಸಿನವನಾಗಿರಲು, ಆ ಹುಡುಗೆಯನ್ನು ನಿತ್ಯ ಬೆಳಗಿನಲ್ಲಿ ಕೈಹಿಡಿದು ಕಾಲುವೆಗೆ ಕರಕೊಂಡು ಹೋಗಿ, ಅದರ ಮೈತೊಳಿಸಿ, ತಿರುಗಿ ಕೈಹಿಡಿದು ಪರಮಹಂಸರ ಸಮಾಧಿಗೆ ಹನ್ನೊಂದು ಪ್ರದಕ್ಷಿಣೆ ಹಾಕಿಸಿ, ತನ್ನ ಕೊರಳೊಳಗಿನ ಶಿಲಾಮಣಿಯನ್ನು ಆಕೆಯ ಎರಡೂ ಕಣ್ಣುಗಳ ಮೇಲೆ ಆಡಿಸುವನು. ಹೀಗೆ ಬಾಲ ಭುಜಂಗನು ಹನ್ನೆರಡು ದಿನ ಮಾಡಲು, ಆ ಹುಡುಗೆಯ ಎರಡೂ ಕಣ್ಣುಗಳು ಬಂದವು! ಅಂದಿನಿಂದ ರಾಜಿಯು ಮಠದಶಿಷ್ಯಳಾಗಿ "ರಾಜಬಿ" ಎಂಬ ಹೆಸರಿನಿಂದ ಉತ್ತಮ ಭಜನೆಮಾಡುವವಳಾಗಿ ಪ್ರಸಿದ್ಧಿಗೆ ಬಂದಳು!

**ಬಾಲಭುಜಂಗನ ನಿಸ್ಪೃಹವೃತ್ತಿಯು**—ಒಮ್ಮೆ ತಮ್ಮಣದೀಕ್ಷಿತರು ಬಾಲಭುಜಂಗನನ್ನು ಕರಕೊಂಡು ದೇಶಸಂಚರಿಸುತ್ತ ಬೆಳಗಾವಿ

ಜಿಲ್ಲೆಯೊಳಗಿನ ಕೌಜಲಗಿ ಎಂಬ ಗ್ರಾಮಕ್ಕೆ ಹೋದರು. ಅಲ್ಲಿಯ ಕ್ಷತ್ರಿಯಜಾತಿಯ ದೇಸಾಯರು ಅತ್ಯಂತ ಭಾವಿಕರು, ದೇವಬ್ರಾಹ್ಮಣರಲ್ಲಿ ಅತ್ಯಂತ ಶ್ರದ್ಧೆಯುಳ್ಳವರು ಇದ್ದರು ಲೋಕಾಪುರದ ಸ್ವಾಮಿಗಳು ಸಂಚಾರಕ್ಕೆ ಬಂದರೆಂದರೆ, ಅವರಿಗೆ ಸೀದಾ, ತಾಂಬೂಲ, ಒಂದು ರೂಪಾಯಿ ದಕ್ಷಿಣೆ ಕೊಡುವದು ಅವರ ಸಾಂಪ್ರದಾಯವಾಗಿತ್ತು ಅದರಂತೆ, ಸಂಚಾರಾರ್ಥವಾಗಿ ಬಂದಿದ್ದ ತಮ್ಮಣದೀಕ್ಷಿತರಿಗೆ ದೇಸಾಯರು ತಾವು ಕೊಡತಕ್ಕ ಮೂಮೂಲನ್ನು ಕಳಿಸಿಕೊಟ್ಟರು. ಆಗ ಬಾಲ ಭುಜಂಗನು ಸೀದಾ-ತಾಂಬೂಲಗಳನ್ನು ಸ್ವೀಕರಿಸಿ, ತಾಂಬೂಲದಲ್ಲಿಯ ಒಂದು ರೂಪಾಯಿಯನ್ನು ಸೀದಾ ತಂದವನ ಕೈಯಲ್ಲಿ ಕೊಟ್ಟು, "ದೇಸಾಯರಿಗೆ ಇದನ್ನು ತಿರುಗಿ ಕೊಡೆ"ಂದು ಆತನ ಮುಂದೆ ಹೇಳಿದನು. ಅದರಂತೆ ಆ ದೇಸಾಯಿಯ ಆಳು ದೇಸಾಯರ ಬಳಿಗೆ ಹೋಗಿ, "ಸ್ವಾಮಿಗಳು ಈ ರೂಪಾಯಿಯನ್ನು ತಮ್ಮ ಕೈಯಲ್ಲಿ ಕೊಡಹೇಳಿರುವರೆಂ"ದು ಹೇಳಿ, ರೂಪಾಯಿನ್ನು ದೇಸಾಯರ ಮುಂದೆ ಇಟ್ಟನು.

ಹೀಗೆ ಸ್ವಾಮಿಗಳು ರೂಪಾಯಿ ಕಳಿಸಿದ್ದನ್ನು ನೋಡಿ ದೇಸಾಯರಿಗೆ ದಿಗಿಲು ಬಿದ್ದಿತು ಸ್ವಾಮಿಗಳು ಸೀದಾ-ತಾಂಬೂಲಗಳನ್ನು ತಕ್ಕೊಂಡು ರೂಪಾಯಿಯಷ್ಟೇ ಯಾಕೆ ಕಳಿಸಿರಬಹುದೆಂದು ಅವರು ವಿಚಾರಮಾಡತೊಡಗಿದರು ಆಗ ಆ ಉದಾರಭಾವದ ಭಾವಿಕ ದೇಸಾಯರು ತಮ್ಮ ಬಳಿಯಲ್ಲಿದ್ದವರನ್ನು ಕುರಿತು—"ಸ್ವಾಮಿಗಳಿಗೆ ನಾನು ಒಂದು ರೂಪಾಯಿಕೊಟ್ಟದ್ದು ಸ್ವಲ್ಪವಾಯಿತೆಂಬ ಭಾವನೆಯುಂಟಾದಂತೆ ಕಾಣುತ್ತದೆ; ಆದ್ದರಿಂದ ಅವರು ಈಗ ಬೇಕಾದದ್ದು ಬೇಡಲಿ, ಕೊಟ್ಟು ಬಿಡುವೆನು" ಎಂದು ಹೇಳಿ, ಅದೇ ಮನುಷ್ಯನನ್ನು ಕುರಿತು—"ಎಲೋ, ನೀನು ಹೀಗೆಯೇ ಸ್ವಾಮಿಗಳ ಬಳಿಗೆಹೋಗಿ "ದೇಸಾಯರು ನೀವು ಬೇಡಿದ್ದನ್ನು ಕೊಡುವರೆಂದು" ಹೇಳಿ, ಸ್ವಾಮಿಗಳು ಏನುಬೇಡುತ್ತಾರೆ ಕೇಳಿಕೊಂಡುಬಾ ಹೋಗು, ನಾನು ನಿಶ್ಚಯವಾಗಿ ಅವರು ಬೇಡಿದ್ದನ್ನು ಕೊಡುವೆನು" ಎಂದು ಹೇಳಿ, ಆಳನ್ನು ಕಳಿಸುತ್ತಿರಲು, ಹತ್ತರಿದ್ದವರು ದೇಸಾಯರಿಗೆ—ದೇವರೂ, ಹೀಗೆ ಹೇಳಿ ಕಳಿಸುವದು ಯೋಗ್ಯವಾಗಿ

ತೋರುವದಿಲ್ಲ. ಯಾಕಂದರೆ ಸ್ವಾಮಿಗಳು ಇನ್ನೂ ಚಿಕ್ಕವರು ಬಾಲ ಭಾವದಿಂದ ನಿಮ್ಮ ದೇಸಗತ್ತನ್ನೇ ಬೇಡಿದರೆ ಹೇಗೆ ಮಾಡುವಿರಿ?" ಎಂದು ಕೇಳಿದರು ಆಗ ಉದಾರ ಹೃದಯದ ಶ್ರದ್ಧಾವಂತ ಧರ್ಮಿಷ್ಠ ದೇಸಾಯಿಯರು ಅವರಿಗೆ —"ಸ್ವಾಮಿಗಳು ದೇಸಗತ್ತು ಬೇಡಿದರೆ ಅದನ್ನು ಅವರಿಗೆ ಕೊಟ್ಟು, ನಾನು ಅವರ ಕಾರಭಾರಿಯಾಗುವೆನು, ಅದು ಯಾವ ದೊಡ್ಡ ಮಾತು?" ಎಂದು ಹೇಳಿ, ಅವರು ಆ ಮನುಷ್ಯನನ್ನು ಸ್ವಾಮಿಗಳ ಬಳಿಗೆ ಕಳಿಸಿಕೊಟ್ಟು ಬಿಟ್ಟರು! "ಉದಾರಸ್ಯ ತೃಣಂ ವಿತ್ತಂ" ಎಂಬ ಮಾತು ಸುಳ್ಳಲ್ಲ! ಕ್ಷತ್ರಿಯರಿಗೆ ಈ ಔದಾರ್ಯವು ಬಹಳವಾಗಿ ಒಪ್ಪುವದು!

ದೇಸಾಯರ ಈ ಮಾತು ಕೇಳಿ ಎಲ್ಲರಿಗೂ ಆಶ್ಚರ್ಯವಾಗಿ, ಅವರ ಉದಾರ ಗುಣಕ್ಕಾಗಿ ಎಲ್ಲರೂ ಸಂತೋಷಪಟ್ಟರು ಕ್ಷತ್ರಿಯವರ್ಣದ ಶೀಲವೇ ಅಷ್ಟು ಪ್ರಭಾವಶಾಲಿಯಾದದ್ದು! ಅತ್ತ ದೇಸಾಯರ ಆಳು ಕುತೂಹಲದಿಂದ ಸ್ವಾಮಿಗಳ ಬಳಿಗೆ ಹೋಗಿ ನಮಸ್ಕಾರ ಮಾಡಿ ಸ್ವಾಮಿಗಳನ್ನು ಕುರಿತು—"ಸ್ವಾಮಿ, ದೇಸಾಯರು ನೀವು ಬೇಡಿದ್ದನ್ನು ಕೊಡುವರಂತೆ, ಬೇಕಾದದ್ದು ಬೇಡಬೇಕು" ಎಂದು ಕೇಳಿಕೊಳ್ಳಲು, ಸ್ವಾಮಿಗಳ ಬಳಿಯಲ್ಲಿದ್ದವರಲ್ಲಿ ಕೆಲವೊಬ್ಬರು ಸ್ವಾಮಿಗಳಿಗೆ—"ನೀವು ಹತ್ತಿಕೊಳ್ಳಲಿಕ್ಕೆ ಒಂದು ಉತ್ತಮವಾದ ಕುದುರೆಯನ್ನು ಬೇಡಿರಿ" ಎಂದರು, ಇನ್ನೊಬ್ಬರು—"ಮಠಕ್ಕೊಂದು ಹೊಲವನ್ನು ಕೇಳಿರೆಂ"ದು ಹೇಳಿದರು, ಬೇರೊಬ್ಬರು—"ಆರಾಧನೆಯ ವೆಚ್ಚಕ್ಕಾಗಿ ಒಂದು ನೂರು ರೂಪಾಯಿಗಳನ್ನು ಕೇಳಿಕೊಳ್ಳಿರೆಂ"ದು ಹೇಳಿದರು ದೇಸಗತ್ತನ್ನೇ ಕೇಳಿಕೊಳ್ಳ ಹೇಳುವ ಯೋಗ್ಯತೆಯುವರು ಅಲ್ಲಿ ಯಾರೂ ಇಲ್ಲದಿದ್ದರೂ, ತಮ್ಮ ತಮ್ಮ ಮನಸ್ಸಿಗೆ ಬಂದ ವಸ್ತುವನ್ನು ಬೇಡಿಕೊಳ್ಳಿರೆಂದು ಸ್ವಾಮಿಗಳಿಗೆ ಹೇಳಲಿಕ್ಕೆ ಅವರು ಹಿಂದೆ ಮುಂದೆ ನೋಡಲಿಲ್ಲ! ಇದನ್ನೆಲ್ಲ ಆ ದೇಸಾಯರ ಆಳು ಕೇಳುತ್ತಿರಲು, ಬಾಲ ಭುಜಂಗನು ಮುಗುಳುನಗೆ ನಗುತ್ತ ಆ ಆಳಿನ ಮುಂದೆ—"ನಿಮ್ಮ ದೇಸಾಯರು ಒಂಟಿ ಮಾಡಿಸ್ಯಾರೆ ಜೋಡುಮಾಡೆಂದು ಹೇಳು" ಎಂದು ಹೇಳ

ದರು! ಅಂದರೆ, ಮೊದಲು ದೇಸಾಯರು ಒಂದು ರೂಪಾಯಿ ಕೊಟ್ಟಿರಲು, ಈಗ ಸ್ವಾಮಿಗಳು ದೇಸಾಯರಿಗೆ ಎರಡು ರೂಪಾಯಿ ಕೊಡೆಂದು ಕೇಳಿಕೊಂಡರು! "ನಿಸ್ಪೃಹಸ್ಯ ತೃಣಂ ಜಗತ್" ಎಂಬ ಉಕ್ತಿಯನ್ನು ನಮ್ಮ ಬಾಲಭುಜಂಗಸ್ವಾಮಿಯು ಪಾಠಮಾಡಿರದಿದ್ದರೂ, ಆತನ ವಿಶಾಲ ಹೃದಯವು ಆ ಗಂಭೀರವಾದ ವಿರಾಗೋಕ್ತಿಯ ಆಶ್ರಯಸ್ಥಾನವಾಗಿತ್ತೆಂದು ತಿಳಿಯತಕ್ಕದ್ದು! ಬ್ರಾಹ್ಮಣರಿಗೆ ಈ ನಿಸ್ಪೃಹೋಕ್ತಿಯು ಬಹಳವಾಗಿ ಒಪ್ಪುವದು!

ಸ್ವಾಮಿಗಳ ಈ ಅಲ್ಪ ಸಂತುಷ್ಟತೆಯ ಕೌತುಕದ ಬೇಡಿಕೆಯನ್ನು ಕೇಳಿ ಆ ದೇಸಾಯರ ಆಳಿಗೂ ಕೌತುಕವಾಯಿತು! ಆತನು ದೇಸಾಯರ ಬಳಿಗೆಹೋಗಿ ನಡೆದ ಸಂಗತಿಯನ್ನೆಲ್ಲ ಹೇಳಲು, ದೇಸಾಯರು ಗಾಂಭೀರ್ಯದಿಂದ ಹತ್ತಿರಿದ್ದವರನ್ನು ಕುರಿತು—"ನೋಡಿದಿರೇನು ಲೋಕಾಪುರಪೀಠದ ವೈರಾಗ್ಯಶಾಲಿತ್ವವನ್ನು! ಲೋಕಾಪುರಪೀಠವು ಲೋಕಾಪುರಪೀಠವೇ ಆದೀತಲ್ಲದೆ, ಬೇರೆ ಪೀಠವು ಹೇಗಾದೀತು? ಆ ಪೀಠವು ವೈರಾಗ್ಯದ ಬೀಡಾಗಿರುವದು! ಸ್ವಾಮಿಯು ಹುಡುಗನಾದರೇನು, ಆತನು ಯಾವ ಪೀಠಕ್ಕೆ ಕುಳಿತಿರುವನು? ಆತನು ಅನ್ಯರು ಕಲಿಸಿದಮಾತು ಕೇಳಿದನೆ? ಇಂತಹ ವೈರಾಗ್ಯಶಾಲಿಗಳಾದ ಬ್ರಾಹ್ಮಣರನ್ನು ಲಕ್ಷಿಸಿಯೇ ಮನುಮಹಾರಾಜನು ತನ್ನ ಸ್ಮೃತಿಗ್ರಂಥದಲ್ಲಿ—"ಸರ್ವಂ ಬ್ರಾಹ್ಮಣಸ್ಯೇದಂ" ಅಂದರೆ, "ಎಲ್ಲವೂ ಬ್ರಾಹ್ಮಣನದೇ" ಎಂದು ಹೇಳಿರುವನು." ಎಂದು ನುಡಿದು, ದೇಸಾಯರು ಕೂಡಲೆ ತಾಂಬೂಲದಲ್ಲಿ ಎರಡು ರೂಪಾಯಿಗಳನ್ನಿಟ್ಟು ಸ್ವಾಮಿಗಳಬಳಿಗೆ ಕಳಿಸಿದರು ಬಾಲಭುಜಂಗ ಸ್ವಾಮಿಗಳೂ ಸಂತೋಷದಿಂದ ಆ ಎರಡು ರೂಪಾಯಿಗಳನ್ನು ಸ್ವೀಕರಿಸಿದರು, ಆದರೆ ಸ್ವಾಮಿಗಳ ಪರಿವಾರದೊಳಗಿನ ಆಶೆಬುರುಕ ಬ್ರಾಹ್ಮಣರುಮಾತ್ರ—"ಸ್ವಾಮಿಗಳು ಎಂಥ ಮುತ್ತಿನಂತಹ ಪ್ರಸಂಗವನ್ನು ಕಳೆದುಕೊಂಡರು, ಕೆಲಸಕೆಡಿಸಿಬಿಟ್ಟರು" ಎಂದು ಪಶ್ಚಾತ್ತಾಪಪಟ್ಟರು! ಇದು ಬ್ರಾಹ್ಮಣವರ್ಣದ ಅಧಃಪತನದ ಪರಿಣಾಮವೆಂದು ದುಃಖದಿಂದ ಅನ್ನಬೇಕಾಗುತ್ತದೆ!

**ಬಾಲಭುಜಂಗನು ಮಳೆ ತರಿಸಿದ್ದು**—ಬಾಲಭುಜಂಗನು ಲೋಕಾಪುರದಲ್ಲಿರುತ್ತಿರುವಾಗ, ಒಮ್ಮೆ ಬಹುದಿವಸ ಮಳೆಹೋಗಿ ಪೈರುಗಳು ಒಣಗಹತ್ತಿ ಜನರು ಚಿಂತೆಗೊಳಗಾದರು ಬಾಲಭುಜಂಗನು ಉಡಾಳನಾಗಿದ್ದರೂ, ಆತನ ಮಹಿಮೆಗಳ ಒಂದೊಂದು ಕೃತಿಗಳು ಜನರ ಕಿವಿಗಳಿಗೆ ಬೀಳಹತ್ತಿದ್ದರಿಂದ, ಆತನಮೇಲಿನ ಜನರ ಭಕ್ತಿಯು ದಿನದಿನಕ್ಕೆ ಹೆಚ್ಚಹತ್ತಿತು. ಮಠದ ಸ್ವಾಮಿಗಳ ಕೀರ್ತಿಯಂತು ಮೊದಲಿನಿಂದಲೂ ಪ್ರಸಿದ್ಧವಾದದ್ದು, ಆದ್ದರಿಂದ ಲೋಕಾಪುರದ ಪ್ರಮುಖ ಜನರು ಮಠಕ್ಕೆ ಬಂದು ಬಾಲಭುಜಂಗನನ್ನು ಕುರಿತು—"ಸ್ವಾಮಿ, ಮಳೆ ಹೋಯಿತು, ಪೈರು ಒಣಗಹತ್ತಿದವು. ಇನ್ನು ಮಳೆಯಾಗದಿದ್ದರೆ ಪರಿಣಾಮವಿಲ್ಲ" ಎಂದು ಬೇಡಿಕೊಳ್ಳಲು, ಬಾಲಭುಜಂಗನು, ಜನರಿಗೆ ಅಭಯವಿತ್ತು ತಾನು ಅನುಷ್ಠಾನಕ್ಕೆ ಕುಳಿತುಕೊಂಡನು. ಈ ಅನುಷ್ಠಾನಮಾಡುವ ಪ್ರವೃತ್ತಿಯು ಆತನಿಗೆ ಯಾರೂ ಕಲಿಸಿದ್ದಲ್ಲ, ಸ್ವಯಂಸ್ಫೂರ್ತಿಯದು! ಆತನು ಸಣ್ಣವನಾದರೂ ಆತನ ಅನುಷ್ಠಾನದರೀತಿಯು ದೊಡ್ಡವರಿಗೂ ಸಾಧಿಸದಂತಹ ನಿಕಟಸ್ಥಿತಿಯದಾಗಿತ್ತು. ಆತನು ಬೆಳಗಿನಲ್ಲಿ ಅನುಷ್ಠಾನಕ್ಕೆ ಕುಳಿತುಕೊಳ್ಳಬೇಕು, ಸಾಯಂಕಾಲಕ್ಕೆ ಎದ್ದು ಉಪಾಹಾರ ತಕ್ಕೊಳ್ಳಬೇಕು! ಇಂತಹ ಹುಡುಗತನದಲ್ಲಿ ಏಕಾಸನದ ಹನ್ನೆರಡುತಾಸಿನ ಅನುಷ್ಠಾನವ ಸಾಧಿಸುವದೆಂದರೆ, ಪರಮಾಶ್ಚರ್ಯದ ಸಂಗತಿಯೇಸರಿ! ಹೀಗೆ ಬಾಲಭುಜಂಗನು ಹನ್ನೆರಡುದಿವಸ ಅನುಷ್ಠಾನ ಮಾಡಲು, ಹದಿಮೂರನೆಯ ದಿವಸ ಮಳೆಗೆ ಆರಂಭವಾಗಿ, ಮೂರು ದಿವಸ ಒಂದೇಸವನೆ ಮಳೆಯು ಸುರಿಯಿತು! ಆಗ ಜನರು ಆನಂದ ಮಗ್ನರಾದದ್ದು ಆಶ್ಚರ್ಯವಲ್ಲ. ಮಳೆಸುರಿಯುತ್ತಲಿದ್ದರೂ ಬಾಲಭುಜಂಗನು ಆಸನಭ್ರಷ್ಟನಾಗಲಿಲ್ಲವಂತೆ! ಆತನು ತನ್ನ ತಲೆಯಮೇಲೆ ಛತ್ರಿಯು ಹಿಡಿಯಗೊಡಲಿಲ್ಲವಂತೆ! ಹತ್ತುಹನ್ನೆರಡು ವರ್ಷಗಳ ವಯಸ್ಸಿನ ಹುಡುಗನು ಶೀತೋಷ್ಣಗಳ ಸಹಿಸುವ ನಿಕಟವುಳ್ಳವನಾಗುವದು ಪರಮಾಶ್ಚರ್ಯವಲ್ಲವೆ?

ಹೀಗೆ ಸಮೃದ್ಧ ಮಳೆಯಾದದ್ದರಿಂದ ಲೋಕಾಪುರದ ಜನರಿಗೆ ಪರ ಮಾನಂದವಾಯಿತೆಂದು ಮೇಲೆ ಹೇಳಿದೆ. ಬಾಲಭುಜಂಗನವಿಷಯದಲ್ಲಿ ಅವರ ಭಕ್ತಿ-ವಿಶ್ವಾಸಗಳು ಹೆಚ್ಚಿದವು. ಅವರು ಕೃತಜ್ಞತೆಯಿಂದ ಪ್ರಸ್ತಮಾಡಿಸುವದಕ್ಕಾಗಿ ಮಠಕ್ಕೆ ಸೀದಾಸಾಮುಗ್ರಿಗಳನ್ನೂ, ಬಾಲಭುಜಂ ಗನಿಗಾಗಿ ದೋತರಮುಂಡಾಸಗಳನ್ನೂ ತಕ್ಕೊಂಡು ಓಲಗ ಬಜಂತ್ರಿಬಾರಿ ಸುತ್ತ ಉತ್ಸವದಿಂದ ಮಠಕ್ಕೆ ಬಂದರು; ಆದರೆ ಭುಜಂಗನಿಗೆ ಅವುಗಳ ಲಕ್ಷವಿದ್ದಿಲ್ಲ. ಆತನು ಓಣಿಗೆಯ ಹುಡುಗರೊಡನೆ ಗೋಲಿಗಳನ್ನು ಆಡು ತ್ತಿದ್ದನಂತೆ! ಬಾಲಭುಜಂಗನ ತಪಸ್ಸನ್ನೋಡಿದರೆ, ಆತನು ಪ್ರೌಢರಲ್ಲಿ ಪ್ರೌಢನಾಗಿ ತೋರುತ್ತಿದ್ದನು; ಆದರೆ ಆತನ ಉಡಾಳತನವನ್ನೂ, ಆಟ ಗುಳಿತನವನ್ನೂ, ಕಿಡಿಗೇಡಿತನವನ್ನೂ ನೋಡಿದರೆ, ಶ್ರೀಕೃಷ್ಣನಂತೆ ಆತನು ಹುಡುಗರಲ್ಲಿ ಪುಂಡ ಹುಡುಗನಾಗಿ ತೋರುತ್ತಿದ್ದನು! ಆತನ ಈ ವಿಲಕ್ಷಣರೀತಿಯಿಂದ ಜನರಿಗೆ ಆತನನೆಲೆಯು ಹತ್ತದಂತಾಗಿ, ಭುಜಂ ಗನವಿಷಯದಲ್ಲಿ ಹೀಗೆಯೇ ಎಂದು ನಿಶ್ಚಯಿಸಲು, ಅವರು ಅಸಮರ್ಥ ರಾದರು! ಇದೇಸ್ಥಿತಿಯು ಶ್ರೀಕೃಷ್ಣನವಿಷಯದಲ್ಲಿ ಗೋಪಿಕಾಸ್ತ್ರೀಯರ ದಲ್ಲ, ಗೋಪರದಾಗಿತ್ತು! ಒಟ್ಟಿಗೆ, ಶ್ರೀಬಾಲಕೃಷ್ಣನಂತೆ ಬಾಲಭುಜಂ ಗನ ಮಹಾಪುಂಡತನವು ಮಾತ್ರ ಜನರಿಗೆ ಮನದಟ್ಟಾಗಿ ಗೊತ್ತಾಗಿತ್ತು!

---

## ೫ನೇ ಅಧ್ಯಾಯ--ಮತ್ತೆ ಕೆಲವು ಮಹಿಮೆಗಳು



ಉದರರೋಗನಿವಾರಣ—ಸವದತ್ತಿ ತಾಲೂಕಿನಲ್ಲಿಯ ಅಸುಂಡಿ ಎಂಬ ಗ್ರಾಮದಲ್ಲಿ ಲೋಕಾಪುರದ ಮಠವಿರುವದನ್ನು ಈ ಮೊದಲೇ ಹೇಳಿದೆ. ಆ ಗ್ರಾಮದಲ್ಲಿರುವ ಬಾಣೀಯವರ ಮನೆತನವು ಲೋಕಾಪುರದ

ಸ್ವಾಮಿಗಳ ಶಿಷ್ಯಮನೆತನವೆಂಬದಾದರೂ ವಾಚಕರ ಸ್ಮರಣದಲ್ಲಿರಬಹುದು. ಆ ಬಾಣೀಯವರ ಮನೆಯಲ್ಲಿ ಪರಮಹಂಸರ ಜಡೆಗಳಿದ್ದ ಸಂಗತಿಯಾದರೂ ವಾಚಕರ ಸ್ಮರಣದಲ್ಲಿರಬಹುದು. ಆ ಬಾಣೀಮನೆತನದ ಗುರಪ್ಪನೆಂಬವನಿಗೆ ಉದರರೋಗವಾಯಿತು. ಮೊದಲೇ ಲೋಕಾಪುರದ ಸ್ವಾಮಿಗಳ ಮೇಲೆ ಬಾಣೀಯವರ ಭಕ್ತಿಯು ಬಹಳ. ಅದರಲ್ಲಿ ಬಾಲಭುಜಂಗನ ಒಂದೊಂದು ಅಗಾಧಕೃತಿಗಳು ಅವರ ಕಿವಿಗಳಿಗೆ ಬೀಳತೊಡಗಿದ್ದವು; ಹೀಗಿರುವಾಗ ಬಾಲಭುಜಂಗನು ತನ್ನ ತಾಯಿ—ತಂದೆಗಳ ಸಂಗಡ ಅಸುಂಡಿಗೆ ಸಂಚಾರಾರ್ಥವಾಗಿ ಬಂದು, ಅಲ್ಲಿದ್ದ ತಮ್ಮ ಮಠದಲ್ಲಿ ಇಳಿದುಕೊಂಡನು. ಸ್ವಾಮಿಗಳು ಬಂದದ್ದನ್ನು ಕೇಳಿ ಗುರಪ್ಪನಿಗೆ ಬಹಳ ಸಮಾಧಾನವಾಯಿತು. ಆ ಭಾವಿಕನಿಗೆ ತನ್ನ ರೋಗ ನಿವಾರಣವಾಗಿ ಹೋಯಿತೆಂಬ ಭಾವವು ಉತ್ಪನ್ನವಾಯಿತು! ಆಗ ಗುರಪ್ಪನ ಮನೆಯಜನರು ಗುರಪ್ಪನನ್ನು ಹೊತ್ತುಕೊಂಡು ಬಂದು, ಆತನನ್ನು ಸ್ವಾಮಿಗಳ ಮುಂದೆ ಅಡ್ಡಹಾಕಿದರು! ಆಗ ಭಕ್ತಿಪರವಶನಾಗಿದ್ದ ಗುರಪ್ಪನ ಕಣ್ಣುಗಳೊಳಗಿಂದ ನೀರುಗಳು ಸುರಿಯುತ್ತಿರಲು, ಆತನು ಗದ್ಗದಸ್ವರದಿಂದ ಸ್ವಾಮಿಗಳನ್ನು ಕುರಿತು—"ಅಪ್ಪಾ, ಪವಾಡದ ರಾಯಾ, ನೀನು ಹೇಗೂ ಅನಾಯಾಸ ಹೊತ್ತಿಗೆ ಸರಿಯಾಗಿ ಬಂದಿರುತ್ತೀ; ಆದ್ದರಿಂದ ನನ್ನ ಬೇನೆಯನ್ನು ನೆಟ್ಟಗಾದರೂ ಮಾಡು, ಇಲ್ಲದಿದ್ದರೆ ನನಗೆ ಮಣ್ಣನ್ನಾದರೂ ಕೊಟ್ಟು ಹೋಗು." ಎಂದು ಬೇಡಿಕೊಂಡನು! ಆಗ ಕರುಣಾಳುಗಳಾದ ಭಕ್ತವತ್ಸಲ ಬಾಲಭುಜಂಗಸ್ವಾಮಿಗಳು ಗುರಪ್ಪನಿಗೆ—"ಗುರಪ್ಪಾ, ಬೆದರಬೇಡ, ಮುತ್ತಯ್ಯನು ಸಮರ್ಥನಿರುವನು." ಎಂದು ಹೇಳಿ, ಆತನಿಗೆ ಪರಮಹಂಸರ ಅಂಗಾರ ಕೊಟ್ಟು, ಈತನನ್ನು ಮನೆಗೆ ಕರಕೊಂಡು ಹೋಗಿರೆಂದು ಮನೆಯವರಿಗೆ ಹೇಳಿ, ತಾನು ಇಪ್ಪತ್ತೊಂದು ದಿನ ಅನುಷ್ಠಾನ ಮಾಡಿದನು! ಅದರಿಂದ ಗುರಪ್ಪನರೋಗ ನಿವಾರಣವಾಗಲು, ಗುರಪ್ಪನು ಪರಮಾನಂದಪಟ್ಟು ಸ್ವಾಮಿಗಳ ಸೇವೆಯನ್ನು ಮಾಡಿದ್ದರಲ್ಲಿ ಆಶ್ಚರ್ಯವಿಲ್ಲ. ಮುಂದೆ ಗುರಪ್ಪನು ಪ್ರತಿವರ್ಷ ಪರಮಹಂಸರ ಆರಾಧನೆಗೆ ಲೋಕಾಪುರಕ್ಕೆ ಹೋಗಿ, ಪರಮಹಂಸರ ಸೇವೆಯನ್ನು ಅತ್ಯಂತ ನಿಷ್ಠೆಯಿಂದ ಮಾಡತೊಡಗಿದನು!

**ಬಾಲಭುಜಂಗನ ಕೆಚ್ಚುಗಟ್ಟಿದ ಸತ್ವ**—ಒಮ್ಮೆ ತಮ್ಮಣದೀಕ್ಷಿತರು ಬಾಲಭುಜಂಗನನ್ನು ಕರಕೊಂಡು ಸಂಚಾರಾರ್ಥವಾಗಿ ಸಕುಟುಂಬ ಗೋಕಾಕಕ್ಕೆ ಬಂದರು. ಅಲ್ಲಿ ಪಟೇಗಾರರ ಕೆಲವು ಮನೆತನಗಳು ಲೋಕಾಪುರದ ಮಠದ ಶಿಷ್ಯ ಕೋಟಿಗೆ ಸೇರಿದವಾಗಿದ್ದವು. ಆ ಮನೆತನಗಳಲ್ಲಿ ಚಟ್ಟೋಸಾನ ಮನೆತನದವರ ಪರಮಾವಧಿಯಾದ ಭಕ್ತಿ–ವಿಶ್ವಾಸಗಳ ಉದಾಹರಣಗಳು ಹಿಂದೆ ರಾಮಚಂದ್ರ ಸ್ವಾಮಿಗಳ ಚರಿತ್ರದಲ್ಲಿ ಬಂದಿವೆ ಚಟ್ಟೋಸಾನ ಬಳಿಗೆ ಬಾಲಭುಜಂಗನು ಬಂದದ್ದು ಇದೇ ಮೊದಲು. ರಾಮಚಂದ್ರ ಸ್ವಾಮಿಗಳು ಚಟ್ಟೋಸಾನ ಬಳಿಗೆ ಬಂದರೆ, ಅವರ ಊಟ–ಉಡಿಗೆಗಳು ಕೂಡ ಚಟ್ಟೋಸಾನ ಮನೆಯಲ್ಲಿಯೇ ಆಗುತ್ತಿದ್ದವೆಂದು, ಹಿಂದೆ ಚಟ್ಟೋಸಾನ ಸತ್ವಪರೀಕ್ಷೆಯ ಪ್ರಸಂಗದಲ್ಲಿ ಹೇಳಿರುತ್ತದೆ; ಯಾಕಂದರೆ, ರಾಮಚಂದ್ರಸ್ವಾಮಿಗಳು ಮಹಾಮಹಿಮರಾಗಿದ್ದರೂ, ವರ್ಣಾಶ್ರಮಧರ್ಮಗಳನ್ನು ಅತಿಕ್ರಮಿಸಿದ ಅವಧೂತಮಾರ್ಗಿಗಳಾಗಿದ್ದರು. ಈಗ ಗುರುಗಳು ಮನೆಗೆ ಬಂದದ್ದರಿಂದ, ಚಟ್ಟೋಸಾನಿಗೆ ಪರಮಾನಂದವಾಯಿತು ಆತನು ತನ್ನ ಗುರುಗಳ ಆತಿಥ್ಯದ ಕಾರ್ಯಗಳನ್ನು ಆಸ್ಥೆಯಿಂದ ನಡಿಸಿ, ಎಲ್ಲ ವ್ಯವಸ್ಥೆಮಾಡಹೇಳಿ ತನ್ನ ಉದ್ಯೋಗಕ್ಕೆ ಹೋದನು. ಇತ್ತ ನಾಲ್ಕು ತಾಸು ಹೊತ್ತುಏರಿತು, ಆರು ತಾಸಿನ ಮನೆಗೆ ಬಂದರೂ “ನಿಮ್ಮ ಊಟದವ್ಯವಸ್ಥೆಯೇನೆಂದು” ತಮ್ಮಣದೀಕ್ಷಿತರನ್ನು ಯಾರೂ ಕೇಳಲಿಲ್ಲ! ಎಲ್ಲಿಯಾದರೂ ಬ್ರಾಹ್ಮಣರ ಮನೆಯಲ್ಲಿ ತಮ್ಮ ಊಟದ ವ್ಯವಸ್ಥೆ ಮಾಡಿಸಿರಬಹುದೆಂದು ತಿಳಿದು, ತಮ್ಮಣದೀಕ್ಷಿತರು ಸುಮ್ಮನೆ ಹಾದಿಯ ನೋಡುತ್ತ ಕುಳಿತರು.

ಚಟ್ಟೋಸಾನು ಮಧ್ಯಾಹ್ನಕ್ಕೆ ಮನೆಗೆಬರಲು, ತಮ್ಮಣದೀಕ್ಷಿತರು ಆತನನ್ನು ಕುರಿತು—“ಚಟ್ಟೋಸಾ, ನಮ್ಮೆಲ್ಲರ ಊಟದ ವ್ಯವಸ್ಥೆಯನ್ನು ಏನು ಮಾಡಿದೆ? ಮಧ್ಯಾಹ್ನದ ಆರುತಾಸು ಹೊತ್ತಾಯಿತಲ್ಲ” ಎಂದು ಕೇಳಲು, ಚಟ್ಟೋಸಾನು ದೀಕ್ಷಿತರನ್ನು ಕುರಿತು—“ಸ್ವಾಮಿ, ಒಳಗೆ ಅಡಿಗೆಯಾಗಿದೆ!” ಅನ್ನಲು, ರಾಮಚಂದ್ರಸ್ವಾಮಿಗಳ ಪ್ರತಾಪವು ತಮ್ಮಣದೀಕ್ಷಿತರ ಮನಸ್ಸಿನಲ್ಲಿ ಬಂದು, ಅವರು ಚಟ್ಟೋಸಾನಿಗೆ—

"ಚಟ್ಟೋಸಾ, ನೀನೂ ದೊಡ್ಡವನು, ನಿನ್ನ ಗುರುಗಳೂ ದೊಡ್ಡವರೆ! ನೀನಿರುವೆ, ನಿನ್ನ ಗುರುಗಳಿರುವರು! ನೀವಿಬ್ಬರೂ ಗುಂಡಿಯ ಬಿದ್ದು ಕೊಳ್ಳಿರಿ; ಆದರೆ ನಮ್ಮ ಊಟದ ವ್ಯವಸ್ಥೆಯನ್ನು ನಾವು ಮಾಡಿಕೊಳ್ಳು ವೆವು" ಎಂದು ಸಂತಾಪದಿಂದ ನುಡಿಯಲು, ಅಲ್ಲಿಯೇ ಕುಳಿತಿದ್ದ ಹತ್ತು ಹನ್ನೆರಡು ವರ್ಷಗಳ ವಯಸ್ಸಿನ ಬಾಲ ಭುಜಂಗನು ಚಟ್ಟೋಸಾ ನನ್ನು ಕುರಿತು ಸಿಟ್ಟಿನಿಂದ—"ಚಟ್ಟೋಸಾ, ನೀನೂ ಮೂರ್ಖನೇ, ನಿನ್ನ ಗುರುವೂ ಮೂರ್ಖನೇ! ವರ್ಣಾಶ್ರಮಧರ್ಮಗಳನ್ನು ಅತಿಕ್ರಮಿಸಿ ನಡೆಯುವ ನಿನ್ನ ಆ ಗುರುವು ಅದೆಂಥಾ ಗುರುವು? ನಿನ್ನ ಗುರುವು ಅಂಥವನಿದ್ದರೂ ನೀನು ಈ ಬ್ರಾಹ್ಮಣರ ಮುಂದೆ ನಿನ್ನ ಗುರುವಿನ ರಾಡಿ ಯನ್ನು ಯಾಕೆ ಇಟ್ಟೆ? ಅದರ ಸಂಬಂಧವು ಇವರಿಗೇನು? ಚಟ್ಟೋಸಾ, ಗುರುಶಿಷ್ಯರ ವ್ಯವಹಾರವು ಗಂಡಹೆಂಡಿರ ವ್ಯವಹಾರದಂತೆ ಗುಪ್ತವಾಗಿರ ಬೇಕು. ಲೋಕವಿರುದ್ಧಗಳಾದ ಆಚರಣಗಳನ್ನು ಯಾರೂ ಮಾಡಲೇ ಬಾರದು, ಮಾಡಿದರೆ ಶುದ್ಧ ತಪ್ಪು! ಲೋಕವಿರುದ್ಧಾಚರಣೆಯಿಂದ ನರಕಪ್ರಾಪ್ತಿಯಾಗುವದು ಒಂದು ಪಕ್ಷದಲ್ಲಿ ದೊಡ್ಡವರು ಹಾಗೆ ಮಾಡಿ ದರೂ ಅದನ್ನು ನೀನು ಮೂರ್ಖನಾಗಿ ಬೈಲಿಗಿಡಬಾರದು! ಚಟ್ಟೋಸಾ, ಈಗ ನೀನು ನನಗೆ ಹೇಳು—ನಾನು ಹೇಳಿದಂತೆ ನಡೆಯುವ ಧೈರ್ಯವು ನಿನಗೆ ಇರುವದೆಯೆ? ನಡೆಯುವ ಧೈರ್ಯವಿದ್ದರೆ ನಡೆಯುತ್ತೇನೆಂದು ಹೇಳಿ, ಅದರಂತೆ ಈಗ ನಡೆದು ತೋರಿಸು; ಅಂದರೆ, ಈ ಬ್ರಾಹ್ಮಣರು ತಮ್ಮ ನಿಯಮದಂತೆ ತಾವು ಅಡಿಗೆ ಮಾಡಿಕೊಂಡು ಗುಡಿ ಗುಂಡಾರಗ ಳಲ್ಲಿ ಉಣ್ಣಲಿ; ನೀನು ಮಾಡಿಸಿರುವ ಅಡಿಗೆಯನ್ನು ನಾನು ನಿನ್ನ ಮನೆ ಯೊಳಗೆ ಕುಳಿತೇ ಏಕೆ, ಬೀದಿಯಲ್ಲಿ ಕುಳಿತು ಉಣ್ಣುತ್ತೇನೆ" ಎಂದು ನುಡಿದನು. ಚಟ್ಟೋಸಾನ ಮುಖವನ್ನು ನಿಶ್ಚಯಬುದ್ಧಿಯಿಂದ ನೋಡ ತೊಡಗಿದನು!

ಚಟ್ಟೋಸಾನು ಬಾಲ ಭುಜಂಗನ ಈ ಕೆಚ್ಚುಗಟ್ಟಿದ ಸತ್ವವನ್ನು ನೋಡಿ, ಗದಗುಟ್ಟಿ ನಡುಗಿದನು. ಆತನ ಮುಖದಿಂದ ಮಾತುಗಳು ಹೊರಡದಾದವು. ಆಗ ಆತನು ಬಾಲ ಭುಜಂಗನ ಚರಣಗಳಿಗೆರಗಿ

ಕೈಜೋಡಿಸಿ ನಿಂತುಕೊಂಡು—“ಸದ್ಗುರುನಾಥಾ, ಈ ಪಾಮರನ ತಪ್ಪು ಕ್ಷಮಿಸಬೇಕು. ಇನ್ನು ಇಂಥತಪ್ಪನ್ನು ನಾನು ಸರ್ವಥಾ ಮಾಡುವದಿಲ್ಲ” ಎಂದು ಬೇಡಿಕೊಂಡು, ತಮ್ಮಣದೀಕ್ಷಿತರನ್ನು ತನ್ನ ತಪ್ಪು ಕ್ಷಮಿಸುವದಕ್ಕಾಗಿ ಪ್ರಾರ್ಥಿಸಿ, ತಕ್ಕ ಶುಚಿರ್ಭೂತ ಸ್ಥಳದಲ್ಲಿ ಅವರೆಲ್ಲರ ಅಡಿಗೆಯ ವ್ಯವಸ್ಥೆಯನ್ನು ಯಥಾಸ್ಥಿತವಾಗಿ ಮಾಡಿಸಿದನು! ಹನ್ನೆರಡು ವರ್ಷದ ವಯಸ್ಸಿನ ಬಾಲ ಭುಜಂಗನು ಆಡಿದ ಮಾತಿನಲ್ಲಿಯ ರಹಸ್ಯವು ವಿಚಾರಿಸತಕ್ಕದ್ದಾಗಿದೆ. ಬಾಲಭುಜಂಗನು ವರ್ಣಾಶ್ರಮಧರ್ಮಗಳನ್ನು ಪಾಲಿಸುವದಕ್ಕಾಗಿಯೇ ರಾಮಚಂದ್ರಸ್ವಾಮಿಗಳ ಅಂಶದಿಂದ ಹುಟ್ಟಿದ ವನು, ರಾಮಚಂದ್ರಸ್ವಾಮಿಗಳು ವರ್ಣಾಶ್ರಮಧರ್ಮಗಳನ್ನು ಲಕ್ಷಿಸದೆ, ಅವಧೂತ ಮಾರ್ಗದಿಂದ ನಡೆದವರು! ಇವರಿಬ್ಬರೂ ಸಮರ್ಥರೇ; ಇವರಿಬ್ಬರೂ ಮಹಿಮಾಶಾಲಿಗಳೇ; ಇವರಿಬ್ಬರೂ ಅಜಮೀರಸಾಹೇಬರ ವರಪ್ರದಾನದಂತೆ ಜನ್ಮತಃ ಸಿದ್ಧಿಗಳನ್ನೂ, ಜ್ಞಾನವನ್ನೂ ಪಡೆದವರೇ; ಆದರೆ ಬಾಲಭುಜಂಗನು ಸದಾಚಾರಪ್ರವರ್ತಕನಾಗಲಿಕ್ಕೆ ಹುಟ್ಟಿಬಂದದ್ದರಿಂದ, ಆತನು ಸಾಂಪ್ರದಾಯಪ್ರವರ್ತಕನಾಗಲು ತಕ್ಕವನಾದನು; ಆದರೆ ರಾಮಚಂದ್ರಸ್ವಾಮಿಗಳು ಅವಧೂತಮಾರ್ಗಿಗಳಾದದ್ದರಿಂದ, ಅವರು ಎಂಥ ಸಮರ್ಥರಾಗಿದ್ದರೂ ಸಾಂಪ್ರದಾಯಪ್ರವರ್ತಕರಾಗಲಿಲ್ಲವು. ಹನ್ನೆರಡು ವರ್ಷಗಳ ವಯಸ್ಸಿನ ಹುಡುಗನು ರಾಮಚಂದ್ರಸ್ವಾಮಿಗಳಂಥ ಸಮರ್ಥರ ನಡತೆಯನ್ನು ತಿರಸ್ಕರಿಸಿ, ಅವರನ್ನು ವ್ಯವಹಾರ ದೃಷ್ಟಿಯಿಂದ ಮೂರ್ಖರ ಕೋಟಿಯಲ್ಲಿ ಸೇರಿಸಿದ್ದನ್ನು ನೋಡಿದರೆ, ಸದಾಚರಣೆಯ ಪ್ರಭಾವವು ತಟ್ಟನೆ ಮನಸ್ಸಿನಲ್ಲಿ ಬರುವದು! ಸದಾಚರಣದ ಗೌರವವನ್ನು ಅಷ್ಟು ಇಷ್ಟೆಂದು ಹೇಳಲಾಗುವದಿಲ್ಲ. ಸದಾಚಾರಿಗಳು ಇಹದಲ್ಲಿ ಸುಖಿಗಳೂ, ಕೀರ್ತಿಶಾಲಿಗಳೂ ಆಗಿ ಪರಲೋಕಗಳ ಉಚ್ಚಗತಿಯನ್ನು ಹೊಂದುವರು. ತಮ್ಮ ಆಚರಣೆಗಳ ಫಲಭೋಗಿಗಳಾದವರು ತಮಗೆ ಹಿತವಾಗಬೇಕೆಂದು ಇಚ್ಛಿಸುತ್ತಿದ್ದರೆ, ಸದಾಚರಣೆಯಿಂದಲೇ ನಡೆಯತಕ್ಕದ್ದು. ಜ್ಞಾನಿಗಳು ತಮ್ಮ ಆಚರಣೆಯಿಂದ ಏನೂ ಗಳಿಸತಕ್ಕವರಲ್ಲದ್ದರಿಂದ, ಅವರು ತಮ್ಮ ಪ್ರಾರಬ್ಧಭೋಗಕ್ಕನುಸರಿಸಿ

ಸದಾಚಾರಿಗಳಾಗಿಯಾದರೂ ಇರಬಹುದು; ದುರಾಚಾರಿಗಳಾಗಿಯಾದರೂ ಇರಬಹುದು; ಸ್ವೇಚ್ಛಾಚಾರಿಗಳಾಗಿಯಾದರೂ ಇರಬಹುದು. ಅಂಥವರ ಆಚರಣೆಗಳು ಹೇಗಿದ್ದರೂ ಅವನ್ನು ನಾವು ಎತ್ತಿ ಎಣಿಸದೆ, ಅವರಲ್ಲಿಯ ಸದಾಚರಣೆಗಳನ್ನು ಮಾತ್ರ ಗ್ರಹಿಸಿ, ಅವುಗಳಂತೆ ನಡೆದು, ಅವರಲ್ಲಿಯ ದುರಾಚರಣೆಗಳನ್ನು ಬಿಟ್ಟು ಬಿಡತಕ್ಕದ್ದು.

**ದೀಪಜ್ಯೋತಿಯ ಸೃಷ್ಟಿಯು** — ಮೇಲೆ ವರ್ಣಿಸಿರುವಪ್ರಸಂಗದಿಂದ ಗುರುಭಕ್ತನಾದ ಚಟ್ಟೋಸಾನಿಗೆ, ತನ್ನ ಗುರುವಾದ ಬಾಲಭುಜಂಗನ ಘನವಾದ ಯೋಗ್ಯತೆಯು ಗೊತ್ತಾಗಿಹೋಯಿತು ; ಆದರೆ ಆ ಗುರುಭಕ್ತನು ತನ್ನ ಅಪಮಾನವಾಯಿತೆಂಬ ದುರಭಿಮಾನದಿಂದ ಬಾಲಭುಜಂಗನ ತೇಜೋವಿಶೇಷವನ್ನು ತಿರಸ್ಕರಿಸದೆ, ಆತನಲ್ಲಿ ಪರಮಭಕ್ತಿಯನ್ನು ತಾಳಿದನು! ನಿಜವಾದ ಗುರುಭಕ್ತರ ಲಕ್ಷಣವೇ ಅದು. ಅವರು ತಮ್ಮ ಗುರುಗಳ ಸಂಬಂಧದಿಂದ ಎಂತಹ ಪ್ರಸಂಗದಲ್ಲೇ ಆಗಲಿ, ದುರ್ಭಾವ ತಾಳಿ, ತಮ್ಮ ಭಕ್ತಿಯಲ್ಲಿ ಕೊರತೆಯುಂಟು ಮಾಡಿಕೊಳ್ಳುವದಿಲ್ಲ! ಚಟ್ಟೋಸಾನು ತನ್ನ ಅ ಸಮರ್ಥಗುರು ಬಾಲಭುಜಂಗನ ಸೇವೆಯನ್ನು ಪರಮಸಂಭ್ರಮದಿಂದ ಮಾಡಿದನು ; ಆದರೆ ಅಷ್ಟರಿಂದ ಆತನಿಗೆ ಸಮಾಧಾನವಾಗಲಿಲ್ಲ ಅದೇ ಊರಲ್ಲಿ ಕೊಟ್ಟಿದ್ದ ತನ್ನ ಮಗಳ ಕೈಯಿಂದಲೂ, ತನ್ನ ಅಳಿಯನ ಕೈಯಿಂದಲೂ ತನ್ನ ಗುರುವಿನ ಪಾದಪೂಜೆಯನ್ನು ಮಾಡಿಸಬೇಕೆಂದು ಆತನು ನಿಶ್ಚಯಿಸಿದನು. ಆಗ ಆತನು ತನ್ನ ಮಗಳಮನೆಗೆ ಹೋಗಿ, ತನ್ನ ಬೀಗನಿಗೆ, ಅಂದರೆ ತನ್ನ ಮಗಳ ಮಾವನಿಗೆ ತನ್ನ ಮನಸ್ಸಿನ ಸಂಕಲ್ಪವನ್ನು ತಿಳಿಸಿದನು. ಆಗ ಆ ಬೀಗನು ಚಟ್ಟೋಸಾನಿಗೆ— “ ಚಟ್ಟೋಸಾ, ನಾವು ಸ್ವಾಮಿಗಳ ಶಿಷ್ಯ ಮನೆತನದವರಲ್ಲ ; ಅದ್ದರಿಂದ ಪಾದಪೂಜೆಯಾತಕ್ಕೆ ? ಹಾಗೆಯೇ ನೀನು ಹೇಳಿದಂತೆ ಗುರುಗಳ ಸೇವೆ ಮಾಡುವೆನು ” ಎಂದು ಹೇಳಿದನು. ಅದಕ್ಕೆ ಚಟ್ಟೋಸಾನು ತನ್ನ ಆ ಬೀಗನಿಗೆ— “ ನಿನಗೆ ಸಂತೋಷವಿದ್ದಷ್ಟು ಗುರುಸೇವೆಯನ್ನು ಮಾಡು, ಅದರವಿಷಯದಲ್ಲಿ ನಾನು ನಿನಗೆ ಏನೂ ಹೇಳುವದಿಲ್ಲ ; ಆದರೆ ನನ್ನ ಮಗಳೂ, ಅಳಿಯನೂ ನಮ್ಮ ಗುರುವಿನ ಪಾದಪೂಜೆಯನ್ನು ಮಾಡ

ಬೇಕೆಂದು ನನ್ನ ಮನಸ್ಸಿನಲ್ಲಿ ಬಂದದ್ದರಿಂದ ನಿನಗೆ ತಿಳಿಸಿದೆನು ” ಎಂದು ಹೇಳಿದನು. ಅದಕ್ಕೆ ಆ ಬೀಗನೂ ಸಂತೋಷದಿಂದ ಒಪ್ಪಿಕೊಂಡನು

ಬಳಿಕ ಚಟ್ಬೋಸಾನ ಆ ಬೀಗನ ಮನೆಯಲ್ಲಿ ಆತನ ಸುಸ್ಥಿತಿಗೆ ತಕ್ಕಂತೆ ಬಾಲಭುಜಂಗನ ಪಾದಪೂಜೆಯ ಸಿದ್ಧತೆಯು ವಿಜೃಂಭಣೆಯಿಂದ ನಡೆಯಿತು. ಮುಂದೆ ಸ್ವಾಮಿಗಳನ್ನು ಪಾದಪೂಜೆಗಾಗಿ ಉತ್ಸವದಿಂದ ಕರ ಕೊಂಡು ಬಂದರು. ಆಗ ಆ ಪಾದಪೂಜೆಯ ಸಮಾರಂಭವನ್ನು ನೋಡುವ ದಕ್ಕಾಗಿ ಚಟ್ಬೋಸಾನ ಮಗಳ ಮನೆ ಹಿಡಿಸದೆ ಜನರು ಕುಳಿತುಕೊಂಡರು. ಚಟ್ಬೋಸಾನ ಮಗಳೂ, ಅಳಿಯನೂ ಗುರುಪಾದಪೂಜೆ ಮಾಡುವದಕ್ಕಾಗಿ ಬಂದು ಕುಳಿತುಕೊಂಡರು. ಮುಂದೆ ಪಾದಪೂಜೆಯು ನಡೆದಿರುವಾಗ, ಅಳಿಯನು ಊದಿನ ಕಡ್ಡಿಯನ್ನು ಹಚ್ಚುತ್ತಿರಲು, ದೀಪವು ಶಾಂತ ವಾಯಿತು! ಅದನ್ನು ನೋಡಿ ಎಲ್ಲರಿಗೂ ಬಹಳ ಅಸಮಾಧಾನವಾಯಿತು. ಚಟ್ಬೋಸಾನ ಬೀಗನಂತು, ಈ ಪಾದಪೂಜೆಯ ಗೊಡವಿಗೆ ಹೋಗದಿದ್ದರೆ ನೆಟ್ಟಗಾಗುತ್ತಿತ್ತೆಂದು ಭಾವಿಸಿದನು ಇತ್ತ ಚಟ್ಬೋಸಾನ ಮನಸ್ಸಿಗೂ ಬಹಳ ಅಸಮಾಧಾನವಾಗಿತ್ತು! ಅಷ್ಟರಲ್ಲಿ ಆ ಗುರುಭಕ್ತ ಚಟ್ಬೋಸಾನ ಮನಸ್ಸಿನಲ್ಲಿ, ತನ್ನ ಗುರುಪೀಠದ, ವಿಶೇಷವಾಗಿ ಈಗಿನ ಬಾಲಭುಜಂಗ ಗುರುವರನ ಮಹಾ ಮಹಿಮೆಯು ಮನಸ್ಸಿನಲ್ಲಿ ಬರಲು, ಆತನು ಎದ್ದು ನಿಂತು ಬಾಲಭುಜಂಗ ಸ್ವಾಮಿಯನ್ನು ಕುರಿತು— “ ಸ್ವಾಮಿೂ, ಶಾಂತ ವಾಗಿದ್ದದೀಪವು ತಾನೇ ಹತ್ತಬೇಕು, ಇಲ್ಲವೆ ನನ್ನ ಸಮಾಧಿಯು ಇಲ್ಲಿಯೇ ಆಗಬೇಕು ” ಎಂದು ನುಡಿಯಲು, ನೆರೆದ ಜನರು ಆಶ್ಚರ್ಯದಿಂದ, ಒಮ್ಮೆ ಚಟ್ಬೋಸಾನ ಕಡೆಗೆ, ಒಮ್ಮೆ ಸ್ವಾಮಿಗಳ ಕಡೆಗೆ ನೋಡಹತ್ತಿ ದರು!

ಚಟ್ಬೋಸಾನ ಈ ನಿರ್ಧಾರದ ಮಾತನ್ನು ಕೇಳಿ ಬಾಲಭುಜಂಗನು ಕಣ್ಣುಮುಚ್ಚಿಕೊಂಡು ಸುಮ್ಮನೆ ಕುಳಿತನು. ಕೂಡಿದ ಜನ ಸಮೂಹವು ಸ್ತಬ್ಧವಾಯಿತು. ಇನ್ನು ಮುಂದೆ ಏನು ಆಗುವದೆಂಬ ವಿಚಾರದಲ್ಲಿ, ಎಲ್ಲರೂ ಮಿಸುಕದೆ ಮೌನವಾಗಿ ಕುಳಿತು ಕೊಂಡರು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ಮಹಾತ್ಮನಾದ ಬಾಲಭುಜಂಗನು ತೀರ್ಥದ ಸವಟಿನಲ್ಲಿ

ನೀರು ತಕೊಂಡು ಚಟ್ಟೋಸಾನನ್ನು ಕುರಿತು— “ ಚಟ್ಟೋಸಾ, ದೀಪವು ಹತ್ತಿತು ನೋಡು ” ಎಂದು ನುಡಿದು, ಸವಟನಲ್ಲಿಯ ನೀರನ್ನು ಸಮೆಯಲ್ಲಿ ಹಾಕಲು, ಪಕ್ಕನೆ ದೀಪವು ಹತ್ತಿತು! ಅದನ್ನು ನೋಡಿ ಜನರು ಆಶ್ಚರ್ಯಮಗ್ನರಾಗಿ ಮುಂದುಗಾಣದೆ ಸ್ವಾಮಿಗಳನ್ನು ನೋಡುತ್ತ ಕುಳಿತುಕೊಂಡರು! ಆಗ ಬಾಲಭುಜಂಗನು ಚಟ್ಟೋಸಾನನ್ನು ಕುರಿತು— “ ಚಟ್ಟೋಸಾ, ಈ ಮನೆಗೆ ದೀಪವಿಷ್ಟಿಲ್ಲ, ನೀನು ಉತ್ಸಾಹದಿಂದ ದೀಪ ಹಚ್ಚಿಸಿದೆ; ಆದರೆ ಈ ಮನೆತನವು ಹೊಟ್ಟೆಯ ಮಗನಿಂದ ನಡೆಯದೆ, ದತ್ತಕ ಮಗನಿಂದ ನಡೆಯುವದು ” ಎಂದು ಹೇಳಿದನು! ಆಗ ಚಟ್ಟೋಸಾನು ಗಾಂಭೀರ್ಯದಿಂದ ಬಾಲಭುಜಂಗನನ್ನು ಕುರಿತು— “ ಗುರುನಾಥಾ, ನನ್ನ ಮಗಳ ಮನೆಯು ಮುಸೀದೆಯಾಗಲೊಲ್ಲದೇಕೆ, ಅದರ ಚಿಂತೆ ನನಗಿಲ್ಲ; ಆದರೆ ನೀನು ನನ್ನ ಮಾತುನಡಿಸಿ, ನನಗೆ ನಿನ್ನ ಗುರುತ್ವದ ಪ್ರಭಾವವನ್ನು ತೋರಿಸಿದ್ದೇ ಸಾಕಾಗಿರುವದು! ” ಎಂದು ಹೇಳಿದನು! ನಿಸ್ಪೃಹಿಗಳ ನೆಲೆಯು ಯಾರಿಗೆ ಹತ್ತಬೇಕು?

**ಬಾಲಭುಜಂಗನ ದೈವೀದೇಹಜಾಡ್ಯ**—ಹೀಗೆ ಬಾಲಭುಜಂಗನು ದೀಪಜ್ಯೋತಿಯ ಸೃಷ್ಟಿಯನ್ನು ಉಂಟುಮಾಡಿದಬಳಿಕ, ಆತನು ದೇಹಾಯಾಸದಿಂದ ಕಣ್ಣುಮುಚ್ಚಿಕೊಂಡು ಮಲಗಿದವನು, ಎರಡುದಿನಗಳಾದರೂ ಮೇಲಕ್ಕೇಳಲಿಲ್ಲವಂತೆ! ಸ್ನಾನವಿಲ್ಲ, ಊಟವಿಲ್ಲ; ಎಬ್ಬಿಸಿದರೆ ಮಾತಿಲ್ಲ! ಅದನ್ನು ನೋಡಿ ತಮ್ಮಣದೀಕ್ಷಿತರು ಚಿಂತೆಗೊಳಗಾಗಿ, ಈ ಸುದ್ದಿಯನ್ನು ಚಟ್ಟೋಸಾನಿಗೆ ಹೇಳಿದರು. ಅದಕ್ಕೆ ಚಟ್ಟೋಸಾನು— “ ದೀಕ್ಷಿತರೇ, ದೀಪಹಚ್ಚಿದವನು ನಿಮ್ಮ ಮಗನೆಂದು ತಿಳಿದಿರುವಿರೇನು? ದೀಪಹಚ್ಚುವ ಯೋಗ್ಯತೆಯು ನಿಮ್ಮ ಮಗನದಲ್ಲ; ದೀಪಹಚ್ಚಿದವರು ಪರಮಹಂಸರು! ಅವರ ಆವೇಶದಿಂದಲೇ ಬಾಲಭುಜಂಗಸ್ವಾಮಿಗಳಿಗೆ ದೀಪಹಚ್ಚುವ ಯೋಗ್ಯತೆಯು ಬಂದಿತು. ನಾಳೆ ಒಂದುದಿನ ಅವರು ಹಾಗೆ ಮಲಗುವದೇಸರಿ, ನಾಡದು ಅವರು ತಾವೇ ಏಳುವರು; ನೀವು ಚಿಂತೆಮಾಡಬೇಡಿರಿ. ” ಎಂದು ಹೇಳಿದನು. ಆದರಂತೆ ಬಾಲಭುಜಂಗನು ಮರುದಿವಸ ತಾನೇ ಎದ್ದನು!

ಮೇಲಿನ ಪ್ರಸಂಗದೊಳಗಿನ ಒಂದು ಮಹತ್ವದ ತತ್ವವನ್ನು ಕುರಿತು ವಿಚಾರಮಾಡುವದು ಅವಶ್ಯವಾಗಿರುತ್ತದೆ. ಮನುಷ್ಯನಿಗೆ ಭೂತಾವೇಶವಾಗುವದನ್ನು, ಅಂದರೆ ದೆವ್ವಬಡಿಯುವದನ್ನು ಎಲ್ಲರೂ ಕೇಳಿರುವದುಂಟು. ಅದರಂತೆ ಮನುಷ್ಯರಿಗೆ ಅವರವರ ಯೋಗ್ಯತೆಯಂತೆ, ಅವರವರ ಸಂಬಂಧಕ್ಕನುಸರಿಸಿ, ಭೂತಾವೇಶದಂತೆ ದೇವಾವೇಶ, ಅಸುರಾವೇಶ, ಸತ್ಪುರುಷಾವೇಶ ಇವು ಆಗುವದುಂಟು. ಭೀಮಸೇನನಿಗೆ ಮೂರು ಮುಕ್ಕಾಲುಗಳಿಗೆ ರುದ್ರಾವೇಶವಾಗುತ್ತಿತ್ತೆಂದು, ಪುರಾಣಾಂತರದಲ್ಲಿ ಹೇಳಿರುವದಷ್ಟೆ? ಅದು ಭೀಮಸೇನನಲ್ಲಾಗುತ್ತಿದ್ದ ದೇವಾವೇಶದ ಉದಾಹರಣವಾಗಿರುತ್ತದೆ! ಅದರಂತೆ, ಇಲ್ಲಿ ಚಟ್ಟೋಸಾನು, ಶಾಂತವಾಗಿದ್ದ ದೀಪವು ತಾನೇ ಹತ್ತಬೇಕೆಂದು ಪ್ರತಿಜ್ಞೆಮಾಡಲು, ಲೋಕಾಪುರ ಪೀಠದ ಮೂಲ ಪುರುಷರಾದ ಪರಮಹಂಸರ ಆವೇಶವು, ತಮ್ಮ ಅಂಶಭೂತನಾದ ಬಾಲಭುಜಂಗನಲ್ಲಿ, ತಮ್ಮ ಪೀಠದ ಗೌರವರಕ್ಷಣಕ್ಕಾಗಿ ಆಯಿತು. ಹೀಗೆ ಪರಮಹಂಸರು ಆಗಾಗ ಪೀಠದ ಗೌರವವನ್ನು ಕಾಯುತ್ತ ಬರುತ್ತಿರುವದರಿಂದಲೇ, ಲೋಕಾಪುರ ಪೀಠವು ಪ್ರಭಾವಶಾಲಿಯೆಂದು ಈಗಲೂ ಪ್ರಸಿದ್ಧವಾಗಿರುತ್ತದೆ! ಮಹಮ್ಮದ ಪೈಗಂಬರರಲ್ಲಿ ಹೀಗೆ ಆಗಾಗ್ಗೆ ದೇವಾವೇಶವಾದಾಗ, ಆ ಪೈಗಂಬರರು ಪರವಶರಾಗಿ ನುಡಿದವಾಕ್ಯಗಳು ಒಟ್ಟುಗೂಡಿಯೇ ಕುರಾಣವೆಂಬ ಹೆಸರಿನ ಪವಿತ್ರಗ್ರಂಥವಾಗಿರುವದಂತೆ! ಪೈಗಂಬರರಿಗೆ ಹಾಗೆ ದೇವಾವೇಶವಾದಾಗೆಲ್ಲ ಅವರ ಮೈನೋವಾಗಿ ಅವರ ಪ್ರಕೃತಿಯು ಜಡವಾಗುತ್ತಿತ್ತೆಂತಲೂ, ಅವರು ಬಾಲಭುಜಂಗನಂತೆಯೇ ಎಚ್ಚರಗೆಟ್ಟು ಮಲಗುತ್ತಿದ್ದರೆಂತಲೂ ಕೇಳಿಕೆಯಲ್ಲಿರುವದು! ಇತ್ತಿತ್ತಲಾಗಿ ಇದೇಸ್ಥಿತಿಯು ಶಿವಾಜಿಮಹಾರಾಜರಿಗೆ ಶ್ರೀಭವಾನಿಯ ಆವೇಶವಾದಾಗ ಆಗುತ್ತಿತ್ತೆಂಬದು ಆತನ ಚರಿತ್ರದಿಂದ ಗೊತ್ತಾಗುತ್ತದೆ. ಭೂತಗಳೂ, ದೇವತೆಗಳೂ, ಸತ್ಪುರುಷರ ಕೃತಾರ್ಥ ಆತ್ಮಗಳೂ ಸೂಕ್ಷ್ಮಶರೀರಗಳುಳ್ಳವು, ಅಂದರೆ ವಾಯುರೂಪ ಶರೀರಗಳುಳ್ಳವು ಆಗಿರುವದರಿಂದ, ಸ್ಥೂಲಗಳಾದ ನಮ್ಮಂಥವರ ಪಾರ್ಥಿವಶರೀರಗಳನ್ನು ಭೇದಿಸುವವು; ಇದಕ್ಕೇ ಆವೇಶವೆನ್ನುವರು! ಆವೇಶದ ಸ್ಥಾನಗಳು ಅಪವಿತ್ರವಾಗಿದ್ದರೆ,

ಕ್ಕ ಕಾರಣಉಂಟಾದಕೂಡಲೆ ಭೂತಾವೇಶವಾಗುತ್ತದೆ; ಅದರಂತೆ ವೇಶದಸ್ಥಾನಗಳು ಪವಿತ್ರಗಳಾಗಿದ್ದರೆ, ಕಾರಣವಶಾತ್ ಅಲ್ಲಿ ದೇವತಾ ವೇಶವಾಗಲಿ, ಸತ್ಪುರುಷಾವೇಶವಾಗಲಿ ಆಗುವವು!

---

## ೭ನೇಅಧ್ಯಾಯ–ಇಂದು ಉಡಾಳ, ನಾಳೆಯೋಗಿ!



ಹೀಗೆ ಬಾಲಭುಜಂಗನು ಎಂಟುವರ್ಷದವನಿದ್ದಾಗಿನಿಂದ ಹದಿನಾಲ್ಕುವರ್ಷದವನಾಗುವವರೆಗೆ ಉಡಾಳತನವನ್ನೂ, ಮಹಿಮೆಗಳನ್ನೂ ತೋರಿಸುತ್ತ—“ಈತನೇನು ಉಡಾಳನೋ, ಆಟಗುಳಿಯೋ, ತಪಸ್ವಿಯೋ, ಮೋಸಗಾರನೋ, ಮಹಿಮಾಶಾಲಿಯೋ” ಎಂಬ ಸಂಶಯವನ್ನು ಜನರಲ್ಲಿ ಉಂಟುಮಾಡುತ್ತ, ತಂದೆಯಸಂಗಡ ದೇಶಸಂಚಾರ ಮಾಡುತ್ತಿರಲು, ಶಕೆ ೧೮೧೦ನೇ ಕಾರ್ತಿಕ ಶುದ್ಧ ದ್ವಾದಶಿಯು ಪ್ರಾಪ್ತವಾಯಿತು. ಅಂದು ಗೋಧೂಲಿಯ ಕಾಲದಲ್ಲಿ ತುಲಸಿಯ ಲಗ್ನಮಾಡುವ ಪದ್ಧತಿಯು ಹಿಂದುಗಳಲ್ಲಿ ಇರುವದಷ್ಟೆ? ಅದರಂತೆ ಲೋಕಾಪುರದ ದೇಸಾಯರ ಮನೆಯಲ್ಲಿ ತುಲಸಿಯ ಲಗ್ನವಾಗಬೇಕಾಗಿತ್ತು; ಮತ್ತು ಆ ತುಲಸಿಯ ಲಗ್ನದ ಕಾಲದಲ್ಲಿ ಲೋಕಾಪುರದ ಸ್ವಾಮಿಗಳು ತಮ್ಮ ನಿಶಾನಿಯನ್ನು ತಕ್ಕೊಂಡು ಬರಬೇಕಾಗುತ್ತಿತ್ತು; ಅವರು ಬಂದಹೊರತು ದೇಸಾಯರಲ್ಲಿ ತುಲಸಿಯಲಗ್ನವೇ ಆಗುತ್ತಿದ್ದಿಲ್ಲ! ದೇಸಾಯರ ಮನೆಯ ತುಲಸಿಯಲಗ್ನವಾದಹೊರತು ಊರ ಬೇರೆಯಾವಜನರ, ವಿಶೇಷವಾಗಿ ಬ್ರಾಹ್ಮಣರ ಮನೆಯಲ್ಲಿ ತುಲಸಿಯಲಗ್ನವಾಗುತ್ತಿದ್ದಿಲ್ಲ; ಯಾಕಂದರೆ, ಊರೊಳಗಿನ ಎಲ್ಲ ಬ್ರಾಹ್ಮಣರೂ, ಉಳಿದ

ಎಲ್ಲ ಜಾತಿಯ ಪ್ರತಿಷ್ಠಿತಜನರೂ ತಮ್ಮ ಮನೆಯ ತುಲಸಿಯಲಗ್ನದ ಸಮಾರಂಭಕ್ಕೆ ಬರಬೇಕೆಂಬ ಪ್ರೇಮದಿಂದ, ದೇಸಾಯರು ಹೀಗೆ ಪದ್ಧತಿಯನ್ನು ಮೊದಲಿನಿಂದಲೂ ಹಾಕಿದ್ದರು. ದೇಸಾಯರು ಊರ ಯಜಮಾನರಾದದ್ದರಿಂದ, ಅವರ ಯಾಜಮಾನ್ಯಕ್ಕೆ ಈ ಪದ್ಧತಿಯು ಭೂಷಣವೂ ಆಗಿರುವದು. ಈ ಪದ್ಧತಿಯ ಮೂಲಕ ದೇಸಾಯರ ಮನೆಯಲ್ಲಿ ತುಲಸಿಯಲಗ್ನವು ಆದಷ್ಟುಬೇಗನೆ ಆಗಬೇಕಾಗುತ್ತಿತ್ತು. ಪದ್ಧತಿಯಂತೆ ಮಠದವರಿಗೂ, ಎಲ್ಲ ಬ್ರಾಹ್ಮಣರಿಗೂ, ಊರೊಳಗಿನ ಎಲ್ಲ ಪ್ರಮುಖಜನರಿಗೂ ತುಲಸಿಯಲಗ್ನಕ್ಕೆ ಬರುವದಕ್ಕಾಗಿ ದೇಸಾಯರು ನಿಮಂತ್ರಣಕಳಿಸಲು, ಮಠದವರಹೊರತು ಎಲ್ಲರೂ ತುಲಸಿಯಲಗ್ನಕ್ಕೆ ಬೇಗನೆ ಬಂದರು, ಆದರೆ ಬಾಲಭುಜಂಗನು ದನಕಾಯುವ ಹುಡುಗರಸಂಗಡ ಎತ್ತೋಹೋಗಿಬಿಟ್ಟದ್ದರಿಂದ, ಮಠದವರಿಗೆ ನಿಶಾನೆತಕ್ಕೊಂಡು ಬೇಗನೆ ಹೋಗಲಿಕ್ಕೆ ಅನುಕೂಲವಾಗಲಿಲ್ಲವು. ಲಗ್ನಕ್ಕೆ ಬಂದವರೆಲ್ಲರೂ "ಇನ್ನೂ ಸ್ವಾಮಿಗಳು ಬರಲಿಲ್ಲವಲ್ಲ" ಎಂದು ಚಡಪಡಿಸುತ್ತ, ಆತುರದಿಂದ ಸ್ವಾಮಿಗಳ ಹಾದಿಯನೋಡಹತ್ತಿದರು. ಇತ್ತ ತಮ್ಮಣದೀಕ್ಷಿತರೂ "ಹೊತ್ತಾಯಿತಲ್ಲ, ಎಂಥ ಅಡ್ನಾಡಿಹುಡುಗನು" ಎಂದು ಅಸಮಾಧಾನದಿಂದ ಭುಜಂಗನ ಹಾದಿಯ ನೋಡಹತ್ತಿದರು.

ಹೀಗೆ ದೀಕ್ಷಿತರು ಮಗನ ಹಾದಿಯನ್ನು ಆತುರದಿಂದ ನೋಡಿ ನೋಡಿ ಬೇಸತ್ತು, ಕಡೆಗೆ ತಾವೇ ಮಗನನ್ನು ಹುಡುಕುವದಕ್ಕಾಗಿ ಹೋದರು; ಮತ್ತು ಮಠದ ಪುರಾತನ ಶಿಷ್ಯನಾದ ಅಪ್ಪಣ್ಣನೆಂಬವನೂ ಬಾಲಭುಜಂಗನನ್ನು ಹುಡುಕುವದಕ್ಕಾಗಿ ಬೇರೊಂದುಕಡೆಗ ಹೋದನು. ಹೀಗೆ ಇಬ್ಬರೂ ಹುಡುಕುತ್ತಿರುವಾಗ, ಅಪ್ಪಣ್ಣನು ಬಾಲಭುಜಂಗನನ್ನು ಹುಡುಕಿಕೊಂಡು ಬಂದನು. ಆಗ ತಮ್ಮಣದೀಕ್ಷಿತರು ಸಿಟ್ಟಿನಭರದಲ್ಲಿ ಮಗನಿಗೆ ಬಾಯಿಗೆಬಂದಹಾಗೆ ಅಂದರು! ಆದರೆ ಹೀಗೆ ಅನಿಸಿಕೊಳ್ಳುವದು ಬಾಲಭುಜಂಗನ ನಿತ್ಯದ ಪರಿಪಾಠವಾಗಿ ಹೋದದ್ದರಿಂದ, ಆತನಿಗೆ ತಂದೆ ಸಿಟ್ಟುಮಾಡಿದ್ದು ಮನಸ್ಸಿಗೆ ಹತ್ತಲೇ ಇಲ್ಲವು. ಭುಜಂಗನು ದೇಸಾಯರ ಮನೆಗೆ ಹೋಗುವದಕ್ಕಾಗಿ ಉಡಿಗೆತೊಡಿಗೆಗಳನ್ನು ಧರಿಸಿ

ದನು ಶಿಷ್ಯ ಅಪ್ಪಣ್ಣನು ನಿಶಾನೆಯನ್ನು ತಕ್ಕೊಂಡು ಹೊರಡಲು, ದೀಕ್ಷಿತರೂ, ಬಾಲಭುಜಂಗನೂ, ಉಳಿದ ಶಿಷ್ಯರೂ ದೇಸಾಯರ ತುಲಸಿಯ ಲಗ್ನಕ್ಕೆ ಹೊರಟರು

ಇತ್ತ ದೇಸಾಯರ ಮನೆಯಲ್ಲಿ ತುಲಸಿಯ ಲಗ್ನದ ಎಲ್ಲ ಸಿದ್ಧತೆಯಾಗಿ, ಸ್ವಾಮಿಗಳ ಹಾದಿಯನ್ನೇ ಎಲ್ಲರೂ ನೋಡುತ್ತಿರಲು, ಬಾಲ ಭುಜಂಗನು ತನ್ನ ಪರಿವಾರದೊಡನೆ ಬಂದು ತನ್ನ ಆಸನದಮೇಲೆ ಕುಳಿತುಕೊಂಡನು ಆಗ ಜನರ ಮಾತುಗಳು ನಿಂತು ಎಲ್ಲ ಕಡೆಯಲ್ಲಿ ಸ್ತಬ್ಧತೆಯುಂಟಾಯಿತು ಬಾಲ ಭುಜಂಗನು ಉಡಾಳನೇ ಇರಲಿ, ಮಹಿಮಾಶಾಲಿಯೇ ಇರಲಿ ಆತನ ಮುಖದ ತೇಜಸ್ಸಿನ ಪ್ರಭಾವವು ಜನರ ಮೇಲೆ ಆಗದೆ ಹೋಗುತ್ತಿದ್ದಿಲ್ಲ. ಆಗ ಜನರ ಮನಸ್ಸಿಗೆ ತಾಪವಾಗಿದ್ದರೂ, ಬಾಯಿಬಿಟ್ಟು ಬಾಲ ಭುಜಂಗನನ್ನು ತಿರಸ್ಕರಿಸುವ ಧೈರ್ಯವು ಯಾರಿಗೂ ಆಗಲಿಲ್ಲ ಇದೊಂದು ಲೋಕಾಪುರಹಿರದ ಸ್ವಾಮಿಗಳ ವಿಷಯದ ವಾಡಿಕೆಯ ರೀತಿಯೇ ಆಗಿತ್ತೆಂದು ಹೇಳಬಹುದು ಎಂತಹ ನಿಂದಕರ ನಾಲಿಗೆಯಾದರೂ, ಶಾಪಭಯದ ಮೂಲಕ ಲೋಕಾಪುರದ ಸ್ವಾಮಿಗಳ ಮುಂದೆ ಅಲ್ಲಾಡುವದು ಅಪರೂಪವು! ಇರಲಿ.

ಹೀಗೆ ಎಲ್ಲರೂ ಮಾತಾಡದೆ ಸುಮ್ಮನೆ ಕುಳಿತಿದ್ದರೂ, ಆ ಮೌನ ಸ್ಥಿತಿಯಲ್ಲಿಯೂ ಅಸಂತುಷ್ಟತೆಯ ಲಕ್ಷಣಗಳು ಮಾತ್ರ ತೋರದೆ ಇರಲಿಲ್ಲ! ಅಸಂತುಷ್ಟತೆಯ ಭಾವವು ಎಲ್ಲರ ಮುಖಗಳಲ್ಲಿಯೂ ತೋರುತ್ತಿತ್ತು ' ಇನ್ನು ತುಲಸಿಯ ಲಗ್ನಕ್ಕೆ ಆರಂಭವಾಗತಕ್ಕದ್ದು, ಅಷ್ಟರಲ್ಲಿ ಯಾರೋ ಒಬ್ಬರು ವೃಂದಾವನದೊಳಗಿನ ದೊಡ್ಡ ತುಲಸಿಯ ಗಿಡವನ್ನು ನೋಡಿ ಸಹಜವಾಗಿ—"ಈ ತುಲಸಿಯ ಗಿಡವು ಎಷ್ಟು ದೊಡ್ಡದಿದೆಯಲ್ಲ" ಎಂದು ನುಡಿಯಲು, ಮತ್ತೊಬ್ಬರು—"ದೇಸಾಯರು ದೊಡ್ಡವರಾದದ್ದರಿಂದ, ಅವರ ತುಲಸಿಯ ಗಿಡವೂ ದೊಡ್ಡದಿರುವದು ಸ್ವಾಭಾವಿಕವೇ" ಎಂದು ಅರ್ಥವಾದ ಮಾಡಿದರು. ಆಗ ಬಾಲಭುಜಂಗಸ್ವಾಮಿಗಳು—"ತುಲಸಿಯ ಗಿಡಗಳೇನು, ಬೇವಿನ ಮರದಷ್ಟು ದೊಡ್ಡವಿರುವವು" ಎಂದು ಅಂದರು! ಆಗ ಕಲ್ಲೊಳ್ಳಿಯ ಗೋವಿಂದಪ್ಪ ಎಂಬವರಿಗೆ ಬಾಲಭುಜಂಗ

ಸ್ವಾಮಿಗಳ ಈ ಮಾತು ಸಹನವಾಗಲಿಲ್ಲ. ಸ್ವಾಮಿಗಳು ತಡಮಾಡಿದ್ದ ರಿಂದ ಅವರ ಮನಸ್ಸು ಮೊದಲೇ ಕ್ಷೋಭಿಸಿರಲು, ಸ್ವಾಮಿಗಳ ಈ ಅಸಂಗತ ಮಾತೇ ಅವರನ್ನು ತಿರಸ್ಕರಿಸಲಿಕ್ಕೆ ಗೋವಿಂದಪ್ಪನವರಿಗೆ ಸಾಕಾ ಯಿತು! ಆಗ ಅವರು ಸ್ವಾಮಿಗಳನ್ನು ಕುರಿತು—"ನಿಮ್ಮಂಥ ಉಡಾಳ ಸ್ವಾಮಿಗಳಿದ್ದರೆ, ತುಲಸಿಯ ಗಿಡಗಳು ಬೇವಿನ ಮರದಷ್ಟು ದೊಡ್ಡವಾ ಗುವದೇ ಸರಿ!" ಎಂದು ತಟ್ಟನೆ ಅಂದುಬಿಟ್ಟರು! ಅಷ್ಟಕ್ಕೇ ಬಾಲಭುಜಂಗನ ಮನಸ್ಸು ನೊಂದು, ಆತನ ಕಣ್ಣೀರ ಹನಿಗಳು ಪಟಪಟನೆ ಉದುರಲು, ಆತನು ತನ್ನ ಶಿಷ್ಯನಾದ ಅಪ್ಪಣ್ಣನನ್ನು ಕುರಿತು—"ಅಪ್ಪಣ್ಣಾ! ನಡೆ! ಮಠಕ್ಕೆ ಹೋಗೋಣ" ಎಂದು ನುಡಿದು, ಮೇಲಕ್ಕೆದ್ದು ಬಿಟ್ಟನು ಕೂಡಲೆ ಅಪ್ಪಣ್ಣನು ನಿಶಾನೆ ತಕ್ಕೊಂಡು ಹೊರಡಲು, ಬಾಲಭುಜಂಗನೂ ಆತನನ್ನು ಹಿಂಬಾಲಿಸಿ, ಮಠಕ್ಕೆ ಹೋಗಿಬಿಟ್ಟನು. ಆಗ ಆತನನ್ನು ನಿಲ್ಲಿಸುವ ಧೈರ್ಯವು ಯಾರಿಗೂ ಆಗಲಿಲ್ಲ!

ತಕ್ಕಕಾಲು ಒದಗಿದ ಹೊರತು ಯಾವ ಕೆಲಸವೂ ಆಗುವದಿಲ್ಲವೆಂಬ ಮಾತು ಸುಳ್ಳಲ್ಲ. ಮೊಗ್ಗೆಗಳು ಅರಳುವ ಕಾಲದಲ್ಲಿಯೇ ಅರಳಿ ಹೂವಾ ಗುವವು; ಕಾಯಿಗಳು ಹಣ್ಣಾಗುವ ಕಾಲದಲ್ಲಿಯೇ ಮಾಗಿ ಹಣ್ಣಾಗು ವವು ಅದರಂತೆ ಬಾಲಭುಜಂಗನು ಸತ್ಕರ್ಮ-ಸದಾಚಾರಗಳ ಪ್ರತಿಷ್ಠಾ ಪನೆಗಾಗಿ ಅವತರಿಸಿದ್ದರೂ, ಕಾಲ ಒದಗಿದ ಹೊರತು ಆತನು ಆ ಕಾರ್ಯ ದಲ್ಲಿ ಪ್ರವೃತ್ತವಾಗುವಹಾಗಿದ್ದಿಲ್ಲ ಹದಿನಾಲ್ಕು ವರ್ಷದವನಾಗುವವರೆಗೆ ಆತನ ಆಯುಷ್ಯವು ಪ್ರಾಮುಖ್ಯವಾಗಿ ಉಡಾಳತನದಲ್ಲಿಯೇ ಹೋಯಿತು! ಈಗ ಪರಿಪಕ್ವಕಾಲವು ಒದಗಿಬರಲು, ಆತನಲ್ಲಿಯ ಉಡಾಳತನವು ಮಾಯ ವಾಗಿ, ಆತನಲ್ಲಿ ತಪಸ್ವಿತೆಯು ಪ್ರಕಟವಾಯಿತು! ಈ ವರೆಗೆ ಆತನ ಉಡಾಳತನಕ್ಕಾಗಿ ಆತನ ತಂದೆ ತಮ್ಮಣದೀಕ್ಷಿತರು ಎಷ್ಟು ಸಿಟ್ಟು ಮಾಡಿ ದರೂ, ಎಷ್ಟು ತಿರಸ್ಕರಿಸಿದರೂ ಅದು ಆತನ ಮನಸ್ಸಿಗೆ ಹತ್ತುತ್ತಲೇ ಇದ್ದಿಲ್ಲ; ಮತ್ತು ಹೊರಗಿನವರು ಎಷ್ಟು ತಿರಸ್ಕರಿಸಿದರೂ ಆತನು ಅದನ್ನು ಲಕ್ಷಿಸುತ್ತಲೇ ಇದ್ದಿಲ್ಲ; ಆದರೆ ಇಂದು ಶ್ರೀ ತುಲಸಿಯ ಲಗ್ನಕಾಲದಲ್ಲಿ ಕಲ್ಲೊಳ್ಳಿಯ ಗೋವಿಂದಪ್ಪನ ತಿರಸ್ಕಾರದ ನುಡಿಯಿಂದ ಬಾಲಭುಜಂಗನ

ಕಣ್ಣೀರುಗಳು ಉದುರಿದವು; ಅಥವಾ ಆ ಕಣ್ಣೀರ ನೆವದಿಂದ, ಆತನ ಸ್ವೇಚ್ಛಾಪ್ರವೃತ್ತಿಯು ಜಲರೂಪಹೊಂದಿ ಹೊರಬಿದ್ದು ಹೋದಂತಾಯಿತು! ಯಾಕಂದರೆ, ಆತನ ಮಹಾ ತಪಶ್ಚರ್ಯಕ್ಕೆ ಇಂದಿನಿಂದಲೇ ಆರಂಭವಾದಂತಾಯಿತು! ಆತನು ಕುಳಿತ ಸ್ಥಳಬಿಟ್ಟು ತಟ್ಟನೆ ಮಠಕ್ಕೆ ಹೋಗಿಬಿಟ್ಟದ್ದರಿಂದ, ಜನರು ಸ್ತಬ್ಧರಾದರು ಗೋವಿಂದಪ್ಪನು ಅನ್ನಬಾರದೆ ಅಂದು ಹುಚ್ಚನಾದನು! ಆಗ ಬೇರೆ ಬೇರೆ ಜನರ ಮನಸ್ಸಿನಲ್ಲಿ ಬೇರೆ ಬೇರೆ ಭಾವಗಳು ಉತ್ಪನ್ನವಾದವು; ಹೀಗೆ ಗೋವಿಂದಪ್ಪನು ಆಡಬಾರದಾಗಿತ್ತೆಂತಲೂ, ಆತನು ಆಡಿದರೂ ಭುಜಂಗನು ತಟ್ಟನೆ ಎದ್ದು ಹೋಗಬಾರದಾಗಿತ್ತೆಂತಲೂ ತಮ್ಮಣ್ಣದೀಕ್ಷಿತರು ಮನಸ್ಸಿನಲ್ಲಿ ಅಂದುಕೊಂಡರು; ಬಾಲಭುಜಂಗನ ವಿಷಯದ ತಿರಸ್ಕಾರವುಳ್ಳವರಿಗೆ—"ಗೋವಿಂದಪ್ಪನು ನೆಟ್ಟಗೆ ಹೇಳಿದನು" ಎಂದು ಸಮಾಧಾನವಾಯಿತು ಬಾಲಭುಜಂಗನ ನಿಜವಾದ ಯೋಗ್ಯತೆಯರಿತವರಿಗೂ, ಬಾಲಭುಜಂಗನ ಶಿಷ್ಯರಿಗೂ ಬಾಲಭುಜಂಗನ ಕಣ್ಣೀರುಗಳುದುರಿದ್ದು ಕ್ಷೇಮಕರವಾಗಿ ತೋರಲಿಲ್ಲ ಅವರು ತಮ್ಮೊಳಗೆ—"ಹೀಗೆ ಗೋವಿಂದಪ್ಪನು ಸ್ವಾಮಿಗಳ ಮನಸ್ಸಿಗೆ ಹತ್ತುವಂತೆ ಮಾತಾಡಬಾರದಾಗಿತ್ತು ಯಾರ ಸ್ಥಿತಿಯು ಹೇಗಿರುತ್ತದೆಂಬದು ತಿಳಿಯುವದಿಲ್ಲ; ದೊಡ್ಡವರ ಅಪಮಾನಮಾಡಿದ ಅಪರಾಧವು ಬಾಧಿಸದೆ ಬಿಡಲಾರದು" ಎಂದು ಮಾತಾಡಿಕೊಳ್ಳಹತ್ತಿದರು; ದೇಸಾಯರಿಗೆ ಒಳಗೆ ಅಸಮಾಧಾನವಾಗಿದ್ದರೂ, ಇದು ಸಮಯವಲ್ಲವೆಂದು ಗಾಂಭೀರ್ಯದಿಂದ ಯಾರಿಗೂ ಏನೂ ಮಾತಾಡದೆ ಅವರು ಸುಮ್ಮನೆ ಇದ್ದುಬಿಟ್ಟರು!

ಹೀಗೆ ಬೇರೆ ಬೇರೆ ಜನರ ಮನಸ್ಸಿನಲ್ಲಿ ಬೇರೆ ಬೇರೆ ವಿಚಾರಗಳು ಉತ್ಪನ್ನವಾಗಿರಲು, ಬಾಲಭುಜಂಗನು ಅಸಮಾಧಾನದಿಂದ ಪರಮಹಂಸರ ಸಮಾಧಿಯ ಬಳಿಗೆ ಹೋಗಿ, ಧರಿಸಿದ್ದ ಉಡಿಗೆತೊಡಿಗೆಗಳಿಂದ ಸಹಿತವಾಗಿಯೇ ಆ ಸಮಾಧಿಗೆ ಕಿವಿಗೊಟ್ಟು ಸಮಾಧಿಯ ಕಟ್ಟೆಯಮೇಲೆ ಬಲಗಡೆಗೆ ಕುಳಿತುಕೊಂಡುಬಿಟ್ಟನು! ಇತ್ತ ದೇಸಾಯರ ಮನೆಯಲ್ಲಿ, ಆಗುವ ಹಾಗೆ ತುಲಸಿಯ ಲಗ್ನವಾಯಿತು, ತಮ್ಮಣ್ಣದೀಕ್ಷಿತರು ಪದ್ಧತಿಯಂತೆ ದೇಸಾಯರಿಂದ ಸತ್ಕೃತರಾಗಿ ಮನೆಗೆ ಬಂದರು; ಆದರೆ ಬಾಲಭುಜಂಗನ

ವಿಷಯದ ಅವರ ಸಿಟ್ಟು ಇನ್ನೂ ಇಳಿದಿದ್ದಿಲ್ಲ. ಅವರು ಸಂಧ್ಯಾವಂದನಾದಿಗಳನ್ನು ಮಾಡಿದರು; ಊಟಕ್ಕೆ ಕುಳಿತುಕೊಳ್ಳುವವರಿಗಾಗಿ ಎಲೆ ಹಾಕಿದರು; ಆದರೆ ಭುಜಂಗನು ಅಲ್ಲಿ ಎಲ್ಲಿಯೂ ಕಾಣಲಿಲ್ಲ; ಆಗ ಭುಜಂಗನ ತಾಯಿಯವರು ಭುಜಂಗನನ್ನು ಅತ್ತಿತ್ತ ಹುಡುಕಿ, ಅಲ್ಲ ಎಲ್ಲಿಯೂ ಕಾಣದೆ, ಪರಮಹಂಸರ ಸಮಾಧಿಯ ಬಳಿಗೆ ಹೋದರು. ಅಲ್ಲಿ ಭುಜಂಗನು ಸಮಾಧಿಯ ವೃಂದಾವನಕ್ಕೆ ತಲೆಕೊಟ್ಟು ಕುಳಿತಿದ್ದನು. ಆಗ ತಾಯಿಯವರು ತಮ್ಮ ಮಗ ಭುಜಂಗನನ್ನು ಕುರಿತು—"ತಮ್ಮಾ, ಭುಜಂಗಾ, ಇಲ್ಲಿ ಹೀಗೆ ಏಕೆ ಕುಳಿತುಕೊಂಡೆ? ಏಳು, ಊಟಕ್ಕೆ ಎಲೆ ಹಾಕಿದೆ" ಅನ್ನಲು, ಬಾಲಭುಜಂಗನು—" ನನ್ನನ್ನು ಯಾರೂ ಮಾತಾಡಿಸಬೇಡಿರಿ, ನನ್ನ ಬಳಿಗೆ ಯಾರೂ ಬರಬೇಡಿರಿ" ಎಂದು ತಿರಸ್ಕರಿಸಿ ನುಡಿದನು! ಆಗ ತಾಯಿಯವರು ನಿರುಪಾಯರಾಗಿ ಮಠದೊಳಗೆ ಹೋಗಿ— "ಭುಜಂಗನು ಊಟಕ್ಕೆ ಬರುವದಿಲ್ಲವಂತೆ, ಸಮಾಧಿಯ ಬಳಿಯಲ್ಲಿ ಕುಳಿತಿದ್ದಾನೆ" ಎಂದು ಹೇಳಲು, ಮೊದಲೇ ಸಿಟ್ಟಾಗಿದ್ದ ತಮ್ಮಣದೀಕ್ಷಿತರು ತಿರಸ್ಕಾರದಿಂದ—"ಬಾರದಿದ್ದರೆ ಬಿಡಲಿ, ಅವನ ಖೋಡಿ ಗುಣವು ಏನು ಮಾಡಿದರೂ ಹೋಗುವದಿಲ್ಲ; ಹೊಟ್ಟೆ ಕೆರೆದರೆ ತಾನೇ ಬರುವನು" ಎಂದು ನುಡಿದರು! ಅವರ ಮಾತು ಎಲ್ಲರ ಅನುಭವದ್ದೇ ಆದದ್ದರಿಂದ, ಎಲ್ಲರೂ ಭುಜಂಗನು ಊಟಕ್ಕೆ ಬಾರದ್ದಕ್ಕಾಗಿ ಮಹತ್ವಕೊಡದೆ, ತಾವು ಊಟಕ್ಕೆ ಕುಳಿತುಕೊಂಡರು. ಉಪಾಹಾರಮಾಡುವವರು ಉಪಾಹಾರ ಮಾಡಿದರು; ಆದರೆ ಭುಜಂಗನ ಯೋಗಕ್ಷೇಮವನ್ನು ತಿರುಗಿ ಯಾರೂ ವಿಚಾರಿಸಲಿಲ್ಲ.

ಬಾಲಭುಜಂಗನು ಈವರೆಗೆ ಕೆಲವು ದೈವೀಲೀಲೆಗಳನ್ನು ಪ್ರಕಟಿಸಿದ್ದರೂ, ಆತನ ವಿಷಯವಾಗಿ ಮನೆಯವರೂ, ಹೊರಗಿನವರೂ ಇಷ್ಟು ಉದಾಸೀನಭಾವ ತಾಳಿರುವದು ಆಶ್ಚರ್ಯಕರವಾಗಿ ತೋರುವದು; ಆದರೆ ವ್ಯಾವಹಾರಿಕ ಮೋಹದ ಪ್ರಭಾವವನ್ನೂ, ಅತಿ ಪರಿಚಯದ ಉದಾಸೀನತೆಯನ್ನೂ ಮನಸ್ಸಿನಲ್ಲಿ ತಂದರೆ, ಹಾಗು ಹಿಂದಕ್ಕೆ ಆಗಿಹೋಗಿರುವ ಶ್ರೀಕೃಷ್ಣಸ್ವಾಮಿಗಳ ಚರಿತ್ರಗಳನ್ನು ಲಕ್ಷಿಸಿದರೆ, ಜನರು ಬಾಲಭುಜಂಗನ

ಯೋಗ್ಯತೆಯನ್ನು ದುರ್ಲಕ್ಷಿಸಿದ್ದರಲ್ಲಿ ಅಪೂರ್ವತೆಯೇನೂ ಇಲ್ಲವು. ಅದ ರಲ್ಲಿಯೂ, ಬಡವರ ಹಾಗು ಆಡಂಬರವಿಲ್ಲದವರ ಗುಣಗಳು ಪ್ರಸಿದ್ಧಿಗೆ ಬರುವದು ಕಷ್ಟವು. ಆದರಂತೆ ಬಾಲಭುಜಂಗನು, ಬಡವನಾದವನೂ, ಆಡಂಬರವಿಲ್ಲದವನೂ ಇದ್ದನಲ್ಲದೆ, ಜನರ ತಿರಸ್ಕಾರಕ್ಕೆ ಆಸ್ಪದವಾದ ಹಲವು ದುರ್ವರ್ತನಗಳು ಆತನಲ್ಲಿ ಇದ್ದವು! ಆತನು ಯಾವಾಗಲೂ ಸಾಲೆತಪ್ಪಿಸಿ, ಪಾಟಿಗಂಟುಗಳನ್ನು ಹಳ್ಳದ ಪೂಲಿನಲ್ಲಿ ಬಚ್ಚಿಇಟ್ಟು, ಉಡಾಳರೊಡನೆ ಆಟವಾಡಿ, ಹುಡುಗರು ಸಾಲೆಯಿಂದ ಮನೆಗೆ ಬರುವಾಗ ತಾನೂ ತನ್ನ ಪಾಟಿಗಂಟುಗಳನ್ನು ತಕ್ಕೊಂಡು ಅವರ ಸಂಗಡ ಮನೆಗೆ ಬರುವನು , ಆತನು ಪಾರಿವಾಳಗಳ ಆಟದಲ್ಲಿ ಮಗ್ನನಾಗಿರುವದಲ್ಲದೆ, ಅವುಗಳ ವ್ಯಾಪಾರವನ್ನೂ ಮಾಡುವನು; ವಿದ್ಯೆಕಲಿಯದೆ, ಯಾವಾಗಲೂ ಚಂಡು–ಗೋಲಿ–ಗಜಗಗಳ ಆಟಗಳಲ್ಲಿ ಹೊತ್ತುಗಳೆಯುವನು ; ಅವರಿವರೆಂಬ ತಾರತಮ್ಯವಿಲ್ಲದೆ, ಸಿಕ್ಕ ಹುಡುಗರ ಗೆಳೆತನ ಮಾಡುವನು ; ಸ್ನಾನ–ಸಂಧ್ಯೆಗಳ ಪರಿವೆಯಿಲ್ಲದೆ ಉಡಾಳನಾಗಿ ಮನಸ್ಸಿಗೆ ಬಂದಂತೆ ತಿರುಗುವನು! ಇಂತಹ ಆತನ ದುರ್ವರ್ತನಗಳ ಹೊದಿಕೆಯಲ್ಲಿ ಆತನ ದೈವೀಶಕ್ತಿಯ ಮಹಿಮೆಗಳು ಕಾಣದೆ, "ಭುಜಂಗನು ಉಡಾಳನು, ಅನಾಚಾರಿಯು, ಠಕ್ಕನು" ಎಂದು ತಿಳಿದುಕೊಳ್ಳುವ ಮೋಹವು ಜನರನ್ನು ಮುಸುಕುತ್ತಿದ್ದರೆ ಆಶ್ಚರ್ಯವೇನು? ಭಗವಾನ್ ಶ್ರೀ ಕೃಷ್ಣನು ಮನುಷ್ಯನಾಗಿ ಅವತರಿಸಿ, ಆಗಾಗ ಪ್ರಕಟಿಸಿದ ಪೂತನಾವಧ, ಗೋವರ್ಧನೋದ್ಧಾರ ಮುಂತಾದ ಹಲವು ದೈವೀಕೃತ್ಯಗಳನ್ನು ದುರ್ಲಕ್ಷಿಸಿ, ಅಥವಾ ಅವುಗಳ ವಿಷಯದಲ್ಲ ಇಲ್ಲದ ಕುಕಲ್ಪನೆಗಳನ್ನು ಕಲ್ಪಿಸಿ, ದುಷ್ಟರೂ, ಅಜ್ಞಾನಿಗಳೂ ಆ ಭಗವಂತನನ್ನು "ಗೋಪಿಕಾಜಾರ, ನವನೀತಚೋರ ಕುಟಿಲ ತಂತ್ರಗಾರ, ಅಸತ್ಯವಾದಿ, ಮೋಸಗಾರ" ಎಂದು ತಿಳಿದು ಆತನನ್ನು ನಿಂದಿಸುತ್ತಿರಲಿಲ್ಲವೆ? ಹೀಗೆ ಯಾವಾಗಾದರೂ ದೈವೀಅಂಶಭೂತರ ಸಂಬಂಧದಿಂದ ಮೋಹಗ್ರಸ್ತರಾಗುವದು, ಅಜ್ಞಾನಿಗಳ, ಹಾಗು ದುಷ್ಟರ ವಾಡಿಕೆಯು ನಿಯಮವೇ ಆಗಿರುವದು!



## ೧ ನೇ ವರ್ಷದ ತಪಶ್ಚರ್ಯೆ

# ೭ನೇ ಅಧ್ಯಾಯ-ಗೂಢವೇನಿರಬಹುದು!

ಮೇಲೆ ಹೇಳಿದಂತೆ ಬಾಲಭುಜಂಗನು ರಾತ್ರಿಯನ್ನೆಲ್ಲ ಪರಮಹಂಸರ ವೃಂದಾವನಕ್ಕೆ ತಲೆಗೊಟ್ಟು ಕಳೆಯುತ್ತಿರಲು, ಮರುದಿವಸ ಬೆಳಗಾಯಿತು. ಜನರು ಪರಮಹಂಸರ ಸಮಾಧಿಯ ದರ್ಶನಕ್ಕಾಗಿ ಬರಲು, ಬಾಲಭುಜಂಗನು ಹಳ್ಳದ ಕಾವಲಿಯಲ್ಲಿ ಸ್ನಾನಮಾಡಿ ಒದ್ದೆಯಮುಸುಕು ಹಾಕಿಕೊಂಡು ಪರಮಹಂಸರ ಸಮಾಧಿಯ ಕಟ್ಟೆಯ ಮೇಲೆ ಸಮಾಧಿಯ ಬಲಗಡೆಯಲ್ಲಿ ಕುಳಿತಿದ್ದನು! ಇದು ನೋಡುವವರಿಗೆ ಸೋಜಿಗದ ಸಂಗತಿಯಾಗಿ ತೋರಿದರೂ, ಭುಜಂಗನು ವಿಕ್ಷಿಪ್ತಸ್ವಭಾವದವನೆಂದು ತಿಳಿದು, ಆತನು ತಪಸ್ಸಿಗೆ ಕುಳಿತದ್ದರ ಕಡೆಗೆ ಯಾರೂ ವಿಶೇಷ ಲಕ್ಷ್ಯಗೊಡಲಿಲ್ಲ! ಊಟದ ಹೊತ್ತಿಗೆ ಭುಜಂಗನ ತಾಯಿಯವರು ಭುಜಂಗನನ್ನು ಊಟಕ್ಕೆ ಕರೆಯುವದಕ್ಕಾಗಿ ಆತನ ಬಳಿಗೆ ಬಂದು ಊಟಕ್ಕೆ ಕರೆದರು; ಆದರೆ ಭುಜಂಗನು ಮಾತೂ ಆಡಲಿಲ್ಲ, ಮುಸುಕನ್ನೂ ತೆಗೆಯಲಿಲ್ಲ! ಉಳಿದವರಾರೂ ಅಷ್ಟು ಲಕ್ಷ್ಯಕೊಡಲಿಲ್ಲ; ಯಾಕಂದರೆ, ಭುಜಂಗನು ಅವ್ಯವಸ್ಥಿತ ಹುಡುಗನೆಂಬದು ಆತನ ಹಲವು ಅವ್ಯವಸ್ಥಿತಾಚರಣೆಗಳಿಂದ ಸಿದ್ಧಾಂತವಾಗಿ ಹೋದಂತಾಗಿತ್ತು. ಹೀಗೆ ಸಂಜೆಯವರೆಗೂ ಭುಜಂಗನು ತನ್ನ ಗುರೂಪದಿಷ್ಟಮಂತ್ರವನ್ನು ಜಪಿಸುತ್ತ, ಮುಸುಕಿನಲ್ಲಿ ಕುಳಿತುಕೊಂಡಿದ್ದು, ಸಂಜೆಯಾದ ಕೂಡಲೆ ಮುಸುಕು ತೆಗೆದನು. ಅಂದು ಭುಜಂಗನ ಗೆಳೆಯರೇ ಭುಜಂಗನ ಪಾರಿವಾಳದ ಹಿಂಡಿಗೆ ಕಾಳು ನೀರು ಹಾಕಿ ಅವುಗಳ ಯೋಗಕ್ಷೇಮವನ್ನು ಸಾಗಿಸಿದ್ದರು. ಅವರು ಮುಸುಕು ತೆಗೆದು ಕುಳಿತಿದ್ದ ಬಾಲಭುಜಂಗನ ಬಳಿಗೆ ಪ್ರೇಮದಿಂದ ಬಂದು, ದೂರ ಕುಳಿತುಕೊಂಡರು. ಆಗ ಭುಜಂಗನು ಎಂದಿನಂತೆ ಅವರೊಡನೆ ಸಂತೋಷದಿಂದ

ಮಾತುಕಥೆಗಳಾಡುತ್ತ, ನಗುತ್ತ ಕೆಲೆಯುತ್ತ ಮಧ್ಯರಾತ್ರಿಯ ವರೆಗೆ ಕಾಲಹರಣ ಮಾಡಿದನು. ಆ ದಿನರಾತ್ರಿ ಭುಜಂಗನ ತಾಯಿ-ತಂದೆಗಳೂ, ಮಠದವರೂ ಎಷ್ಟು ಆಗ್ರಹ ಮಾಡಿದರೂ ಬಾಲಭುಜಂಗನು ಊಟಮಾಡಲಿಲ್ಲ; ಹಾಲನ್ನಾದರೂ ತೆಗೆದುಕೋ ಎಂದು ಹೇಳಲು, ಅದಕ್ಕೂ ಒಪ್ಪಲಿಲ್ಲ! ಆಗ ಅವರು, ಏನಾದರೂ ಆಹಾರವನ್ನು ತಕ್ಕೊಳ್ಳಲೇಬೇಕೆಂದು ಭುಜಂಗನಿಗೆ ಒತ್ತಾಯಮಾಡಲು, ಆತನು—"ಮುತ್ತಯ್ಯನ ಅಪ್ಪಣೆಯಾದರೆ ತಕ್ಕೊಳ್ಳುವೆನು" ಎಂದು ಖಂಡಿತವಾಗಿ ಹೇಳಿದನು.

**ತಪಸ್ಸಿಗೆ ಕುಳಿತಿದ್ದ ಸ್ಥಳಕಾಲಗಳ ವರ್ಣನ**—ಹೀಗೆ ಬಾಲಭುಜಂಗನು ತಪಶ್ಚರ್ಯಕ್ಕಾಗಿ ಕುಳಿತ ಕಾಲವು, ಶಕೆ ೧೮೧೦ನೇ ಸರ್ವಧಾರಿ ಸಂವತ್ಸರದ ಕಾರ್ತಿಕ ಶುದ್ಧ ೧೨ ಗುರುವಾರದ, ಅಂದರೆ ಕ್ರಿಸ್ತಿ ಶಕದ ೧೮೮೮ನೇ ಇಸವಿಯ ನವಂಬರ ತಿಂಗಳ ೧೫ನೇ ತಾರೀಖಿನ ಉಷಃಕಾಲವಾಗಿತ್ತು! ಬಾಲಭುಜಂಗಯೋಗಿಯು ತಪಶ್ಚರ್ಯಕ್ಕೆ ಕುಳಿತಿದ್ದ ಸ್ಥಳವು, ಹುಂಡಬಯಲಾಗಿದ್ದು, ಅದರ ಉತ್ತರ ದಿಕ್ಕಿನ ಮೇರೆಯಲ್ಲಿ ಒಂದು ಎತ್ತರವಾದ ಗೋಡೆಯೂ, ಅದರ ಮಧ್ಯದಲ್ಲಿ ಮಹಾದ್ವಾರವೂ ಇದ್ದು, ಉಳಿದಮೂರು ದಿಕ್ಕುಗಳ ಸೀಮೆಗಳಲ್ಲಿ ದುಂಡುಗಳ್ಳಿಯ ಬೇಲಿಗಳು ಇದ್ದವು. ಪಶ್ಚಿಮದಿಕ್ಕಿನ ಕಳ್ಳಿಯ ಸಾಲಿಗೆ ಹೊಂದಿ, ಕೇವಲ ಗ್ರಾಮ್ಯ ಕಟ್ಟಡದ ಕೋಣೆಯಂಥ ಸಣ್ಣ ಮಠವಿದ್ದು, ಉಳಿದ ಬೈಲು ಪ್ರದೇಶದೊಳಗೆ ಮಧ್ಯದಲ್ಲಿ ಮೂಲ ಪರಮಹಂಸರ ಗಚ್ಚಿನ ಅಷ್ಟ ಪೈಲಿನ ದೊಡ್ಡ ವೃಂದಾವನವಿರುವದು. ಈ ಪರಮಹಂಸರ ವೃಂದಾವನದ ಎದುರಿಗೆದೂರದಲ್ಲಿ ೧ನೇ ಭುಜಂಗಸ್ವಾಮಿಗಳ ವೃಂದಾವನವಿದ್ದು, ಪರಮಹಂಸರ ವೃಂದಾವನದ ಬಲಗಡೆಯಲ್ಲಿ ಎರಡು ವೃಂದಾವನಗಳೂ, ಎಡಗಡೆಯಲ್ಲಿ ಎರಡು ವೃಂದಾವನಗಳೂ ಇರುವವಲ್ಲದೆ, ಎಡಗಡೆಯಲ್ಲಿ ಅಜಮೀರ ಸಾಹೇಬರ ಒಂದು ಕೃತ್ರಿಮ ಗೋರಿಯು ಇರುವದು. ಒಟ್ಟಿಗೆ, ಉಸಕು ಹರವಿದ್ದ ಆ ಹುಂಡಬೈಲು ಸ್ಥಳದಲ್ಲಿ ಆರು ವೃಂದಾವನಗಳೂ, ಒಂದು ಕೃತ್ರಿಮ ಗೋರಿಯೂ ಇದ್ದು, ಅವುಗಳಲ್ಲಿ ಸನ್ಯಾಸಾಶ್ರಮ ಗ್ರಹಣ ಮಾಡಿದ್ದ ಪರಮಹಂಸರ, ಹಾಗು ೧ನೇ ಭುಜಂಗಸ್ವಾಮಿಗಳ ಎರಡು

ವೃಂದಾವನಗಳು ಮಾತ್ರ ನಿಜವಾದ ವೃಂದಾವನಗಳಿರುವವು. ಉಳಿದ ವೆಲ್ಲ ಅವರವರ ಸ್ಮಾರಕ ಕೃತ್ರಿಮ ವೃಂದಾವನಗಳಾಗಿರುತ್ತವೆ. ಒಟ್ಟಿಗೆ, ಮೂರ್ತಿಮಂತ ನಿಸ್ಪೃಹತೆಯ ದರ್ಶಕವಾದ ಇಂಥ ಮಹಿಮಾಶಾಲಿ ಮಠ ವನ್ನು ಬೇರೆ ಕಡೆಯಲ್ಲಿ ನೋಡುವದು ಶಕ್ಯವಿಲ್ಲವೆಂತಲೇ ಹೇಳಬಹುದು. ಇಂತಹ ಮಠದಲ್ಲಿ ವಾಸಿಸುತ್ತ ಬಂದಿದ್ದ ಮಹಿಮಾಶಾಲಿಗಳಾದ ಮಹಾ ತ್ಮರ ಮಹಾಮಹಿಮೆಯನ್ನು ಮನಸ್ಸಿನಲ್ಲಿ ತಂದರೆ, "ಜಗತ್ತು ಮಲ ಭಾಂಡದಂತೆ ತ್ಯಾಜ್ಯವಾದದ್ದು." ಎಂಬ ಶ್ರೀ ಶಂಕರಭಗವತ್ಪಾದಾಚಾ ರ್ಯರ ವೈರಾಗ್ಯೋಕ್ತಿಗೆ, ಬಾಲಭುಜಂಗಸ್ವಾಮಿಗಳ ಕಾಲದವರೆಗಿನ ಏಳು ತಲೆಗಳ ಲೋಕಾಪುರದ ಮಠವು ಉದಾಹರಣವಾದದ್ದೆಂಬದು ನಿರ್ವಿವಾದವಾದದ್ದು.

ಮೇಲಿನ ವರ್ಣನವನ್ನು ಓದಿದರೆ, ಬಾಲಭುಜಂಗನು ಪರಮಹಂ ಸರ ವೃಂದಾವನದ ಬಲಗಡೆಯ ಕಿರಿಯಗಲ ಕಟ್ಟೆಯ ಮೇಲೆ ತಪಶ್ಚ ರ್ಯಕ್ಕೆ ಕುಳಿತಾಗ, ಆತನ ಮೇಲೆ ಗಾಳಿ–ಚಳಿ–ಮಳೆ–ಬಿಸಿಲುಗಳಿಂದ ರಕ್ಷಿಸುವ ಆಚ್ಛಾದನವೇನು ಇದ್ದಿಲ್ಲವೆಂಬದು ವಾಚಕರಿಗೆ ಗೊತ್ತಾಗಿರ ಬಹುದು! ಪೂರ್ವದಿಕ್ಕಿನ ಕಳ್ಳಿಯ ಬೇಲಿಯ ಹೊರಗಡೆಯಲ್ಲಿ ಉತ್ತರವಾ ಹಿನಿಯಾದ ಒಂದು ಹಳ್ಳವಿದ್ದು, ಆ ಹಳ್ಳದ ಮೇಲ್ಗಡೆಯಲ್ಲಿ ಒಡ್ಡು ಹಾಕಿ ನೀರು ಸಂಗ್ರಹಿಸಿ, ಆ ಹಳ್ಳದ ಪಶ್ಚಿಮ ದಿಕ್ಕಿನ ದಂಡೆಗೆ ಹೊಂದಿ ಒಂದು ಕಾಲಿವೆಯನ್ನು ತಂದಿರುವರು. ಆ ಕಾಲಿವೆಯಲ್ಲಿ ಹನ್ನೆರಡೂ ತಿಂಗಳು ಒಂಮವರೆ ಫೂಟಿಗಿಂತ ಕಡಿಮೆ ಆಳವಿಲ್ಲದಷ್ಟು ನೀರು ಸಾವಕಾಶವಾಗಿ ಹರಿಯುತ್ತಿರುತ್ತದೆ ಒಟ್ಟಿಗೆ, ಶ್ರೀಲೋಕಾಪುರ ಸ್ವಾಮಿಗಳ ಮಠಕ್ಕೆ ನೀರಿನ ಅನುಕೂಲತೆಯು ವಿಪುಲವಾಗಿರುತ್ತದೆಂದು ತಿಳಿಯತಕ್ಕದ್ದು ಇಂತಹ ಸ್ಥಳದಲ್ಲಿ ವರ್ಷಾ ಒಂದೊಂದು ದಿವಸವನ್ನು ಹೆಚ್ಚಿಸುತ್ತ, ಐದನೆಯ ವರ್ಷ ಏಕಾಸನದಿಂದ ಐದು ದಿವಸ ಅಹೋರಾತ್ರ ಮುಸುಕಿನಲ್ಲಿ ಕುಳಿತು, ತಪಶ್ಚರ್ಯ ಮಾಡಿದ ಭುಜಂಗಸ್ವಾಮಿಗಳ ತಪಸ್ಸಿನ ವರ್ಣ ನವನ್ನು ಇನ್ನು ಮುಂದೆ ಕ್ರಮವಾಗಿ ಮಾಡುವೆವು.

ಹಿಂದೆ ಹೇಳಿದಂತೆ ಬಾಲಭುಜಂಗ ಯೋಗಿಯು ತಪಶ್ಚರ್ಯದ ಒಂದನೆಯ ದಿವಸದ ರಾತ್ರಿ, ತನ್ನ ಗೆಳೆಯರಾದ ಗೋವಳರೊಡನೆ ಮಧ್ಯರಾತ್ರಿಯವರೆಗೆ ವಿನೋದದಿಂದ ಕಾಲಹರಣಮಾಡಿದನಂತರ, ಆತನ ಗೆಳೆಯರು ತಮ್ಮ ತಮ್ಮ ಮನೆಗಳಿಗೆ ಹೋದರು. ಬಳಿಕ ಬಾಲಭುಜಂಗನು ತಾನು ಕುಳಿತ ಸ್ಥಳದಲ್ಲಿಯೇ ವಿಶ್ರಾಂತಿಯನ್ನು ಹೊಂದಿದನು. ಅಷ್ಟರಲ್ಲಿ ಬೆಳಗಾಗಲು, ಕಾಲಿನೆಯಲ್ಲಿ ಸ್ನಾನಮಾಡಿ ಪರಮಹಂಸರ ಆ ಬೈಲವೃಂದಾವನದ ಕಟ್ಟೆಯ ಮೇಲೆ ಮಠದವರು ಒಣಗಿಸಿ ನಿರಿಗೆ ಹಾಕಿ ಇಟ್ಟದ್ದ ತನ್ನ ಶಾಟಿಯನ್ನು ಉಟ್ಟುಕೊಂಡು, ಹೊರುವ ಶಾಟಿಯ ಮುಸಕು ಹಾಕಿಕೊಂಡು ತಪಶ್ಚರ್ಯಕ್ಕೆ ಕುಳಿತುಕೊಂಡನು! ಹೀಗೆ ಎರಡನೆಯ ದಿವಸ ಅನುಷ್ಠಾನಕ್ಕೆ ಕುಳಿತುಕೊಳ್ಳುವ ಮೊದಲು, ಮಠದವರ ಮುಂದೆ ಹೇಳಿದ್ದಂತೆ, ಆ ಮಠದವರು ಅಂದೇ ಬಾಲಭುಜಂಗನ ಪಾರಿವಾಳಗಳನ್ನು ಹಾರಬಿಡಲು, ಅವು ಎತ್ತೋ ಹೋಗಿ ಬಿಟ್ಟವು; ತಿರುಗಿ ಅವು ಮಠಕ್ಕೆ ಬರಲಿಲ್ಲ! ಮತ್ತು ಬಾಲಭುಜಂಗನು ಹೇಳಿ ಇಟ್ಟದ್ದಂತೆ, ಆತನು ಹುಗಿದು ಇಟ್ಟದ್ದ ಪಾರಿವಾಳದ ಮಾರಾಟದ ಹತ್ತು ಹನ್ನೆರಡು ರೂಪಾಯಿಗಳ ರೊಕ್ಕವನ್ನು ಆತನ ತಂದೆಯವರಾದ ತಮ್ಮಣದೀಕ್ಷಿತರು ತಕ್ಕೊಂಡರು. ಒಂದೇ ದಿನದ ತಪಶ್ಚರ್ಯದಿಂದ ಹೀಗೆ ಬಾಲಭುಜಂಗನ ವೃತ್ತಿಪರಿವರ್ತನವಾದದ್ದಕ್ಕಾಗಿ, ಆತನ ತಾಯಿ-ತಂದೆಗಳಿಗೂ, ಉಳಿದ ಆಪ್ತೇಷ್ಟರಿಗೂ ಪರಮಾಶ್ಚರ್ಯವಾದದ್ದಲ್ಲದೆ, ಆತನ ಕಠಿಣತರ ದೇಹದಂಡನವನ್ನೂ, ನಿರಶನವ್ರತವನ್ನೂ ನೋಡಿ ಅವರು ಕನಿಕರಪಡಹತ್ತಿದರು!

ಹೀಗೆ ಪಕ್ಕನೆ ತನ್ನ ತಪಸ್ತೇಜಸ್ಸನ್ನು ಪ್ರಕಟಮಾಡಿದ ಬಾಲಭುಜಂಗನ ವಿಷಯದಲ್ಲಿ ಜನರ ಭಕ್ತಿಯು ಹೆಚ್ಚಾಗಹತ್ತಿತು. ಸಿಕ್ಕದ್ದು ತಿಂದು ಸಿಕ್ಕಲ್ಲಿ ತಿರುಗುತ್ತ, ಸಿಕ್ಕ ಹಾಗೆ ನಡೆಯುತ್ತ ಬೆಳೆದಿದ್ದ ಬಾಲಭುಜಂಗನು, ಒಂದೇದಿನದಲ್ಲಿ ಇಪ್ಪತ್ತುನಾಲ್ಕು ತಾಸು ಆಸನ ಜಯಮಾಡಿ, ತೀರ ನಿರಶನವ್ರತದಿಂದ ಇರತೊಡಗಿದ್ದೆಂದರೆ, ಕಲಿಯುಗದಲ್ಲಿ ವಾಡಿಕೆಯಾಗಿ ಕೇಳದೆಯಿದ್ದದ್ದೊಂದು ಅಪೂರ್ವ ಉದಾಹರಣವೆಂದು ಹೇಳಬಹುದು. ಉಡಾಳ ಭುಜಂಗನು ಸತ್ಕರ್ಮನಿರತನಾದ ಕೂಡಲೆ, ಮಠದ

ವರು ಆತನ ವಿಷಯದಲ್ಲಿ ಆದರಭಾವತಾಳಿ, ಆತನು ಕಾಲಿವೆಯೊಳಗೆ ಸ್ನಾನಮಾಡಿ ಬರುವದರೊಳಗೆ, ಮೇಲೆ ಹೇಳಿದಂತೆ ಆತನ ಶಾಟಿಗಳನ್ನು ಒಣಗಿಸಿ, ನಿರಿಗೆಹಾಕಿ ವೃಂದಾವನದ ಕಟ್ಟೆಯಮೇಲೆ ಇಡಹತ್ತಿದರು! ಕಬ್ಬಿಣವು ಪರಸುಗಲ್ಲಿನ ಸ್ಪರ್ಶವಾದ ಕೂಡಲೆ ಬಂಗಾರವಾಗುವಂತೆ, ಕಲ್ಲೊಳ್ಳಿಯ ಗೋವಿಂದಪ್ಪನವರ ಕಠಿಣೋಕ್ತಿಯ ಆಘಾತದ ನೆವದಿಂದ ಪಶ್ಚಾತ್ತಾಪದಗ್ಧವಾದ ಬಾಲಭುಜಂಗನ ಪರಿಶುದ್ಧಹೃದಯಲ್ಲಿ, ಪರಮ ಹಂಸರ ಕೃಪಾದೃಷ್ಟಿಯ ಸೇಚನವಾಗಲು, ಈ ಅಧ್ಯಾಯದ ಶಿರೋಲೇಖ ದಲ್ಲಿ ಹೇಳಿದಂತೆ, ಇಂದು ಉಡಾಳನಾಗಿದ್ದ ಸ್ವಚ್ಛಂದವೃತ್ತಿಯ ಬಾಲ ಭುಜಂಗನು, ನಾಳೆ ಪರಿಶುದ್ಧಹೃದಯದ ತಪಸ್ವಿಯಾದನು! ಹದಿನಾಲ್ಕು ವರ್ಷಗಳ ಉಡಾಳ ಬಾಲಭುಜಂಗನು, ಒಂದೇದಿನದ ತಪಶ್ಚರ್ಯದಿಂದ, ಬಹುಕಾಲ ತಪಶ್ಚರ್ಯಮಾಡಿದ್ದ ಪ್ರೌಢವಯಸ್ಸಿನ ಋಷಿಗಳ ತಾಪಟವೃತ್ತಿಯನ್ನಲ್ಲ, ಶಾಂತವೃತ್ತಿಯನ್ನು ಪಡೆಯುವದೆಂದರೆ, ಬಾಲಭುಜಂಗನು ತನ್ನ ಮೂಲಪುರುಷರಾದ ಪರಮಹಂಸರ ವೃತ್ತಿಮಯನಾದನೆಂದು, ಅಥವಾ ಆ ಮಹಾತ್ಮನ ಕೃಪಾದೃಷ್ಟಿಪಾತದಿಂದ ಮೂರ್ತಿಮಂತ ಪರಮ ಹಂಸರೇ ಆದನೆಂದು ಹೇಳಬೇಕಾಗುವದು! ಇಂತಹಘನವಾದ ಯೋಗ್ಯತೆಯು ಭಗವಾನ್ ವೇದವ್ಯಾಸರ ಪುತ್ರರಾದ ಶ್ರೀಶುಕಯೋಗಿಗಳಲ್ಲಿ, ಅಥವಾ ದೇವರ್ಷಿನಾರದರಿಂದ ಅನುಗ್ರಹೀತನಾದ ಬಾಲ ಧ್ರುವರಾಜ ಪುತ್ರನಲ್ಲಿ ಇದ್ದದ್ದನ್ನು ನಾವು ಪುರಾಣಾಂತರದಲ್ಲಿ ಓದುತ್ತಿರುವೆವು; ಆದರೆ ಆ ಓದಿದ್ದರ ಪ್ರತ್ಯಕ್ಷ ಉದಾಹರಣವಾಗಿ, ಬಾಲಯೋಗಿಭುಜಂಗ ನನ್ನು ಕಣ್ಣುಮುಟ್ಟ ಕಂಡವರು, ಪರಮ ಭಾಗ್ಯಶಾಲಿಗಳೆಂತಲೇ ಹೇಳಬೇಕಾಗುವದು!

**ತಪಸ್ಸಿನ ರೀತಿಯು**—ಹೀಗೆ ಬಾಲಯೋಗಿ ಭುಜಂಗನ ತಪಸ್ಸು ಒಂದೊಂದು ದಿನವಾಗಿ ಹೆಚ್ಚುತ್ತಹೋದಂತೆ, ಆತನ ದೇಹವು ಕೃಶವಾಗುತ್ತ, ಮುಖಕಾಂತಿಯು ಹೆಚ್ಚುತ್ತಹೋದವು. ಮುಸುಕಿನಲ್ಲಿ ಬಾಲಭುಜಂಗಯೋಗಿಯು ಮಾಡತಕ್ಕ ಕಾರ್ಯಗಳೆಂದರೆ, ಮೊದಲು ಸಪ್ತಾಹಕ್ರಮದಂತೆ ಗುರುಚರಿತ್ರದ ಅಧ್ಯಾಯಗಳ ಪಾರಾಯಣ, ಆ ಮೇಲೆ ಉಳಿದ

ಕಾಲದಲ್ಲೆಲ್ಲ ಗುರೂಪದಿಷ್ಟ ಮಂತ್ರದ ಜಪ! ಹೀಗೆ ಬಾಲಭುಜಂಗನು ಆಚಮನೋದಕದ ಹೊರತು ಬಾಯಲ್ಲಿ ಏನೂ ಹಾಕಿಕೊಳ್ಳದೆ, ಏಳುದಿನ ತಪಶ್ಚರ್ಯವಮಾಡಲು, ಗುರುಚರಿತ್ರದ ಒಂದನೆಯ ಸಪ್ತಾಹವು ಮುಗಿಯಿತು. ಈ ಏಳು ದಿವಸಗಳಲ್ಲಿ ಬಾಲಭುಜಂಗಯೋಗಿಯ ತಾಯಿ-ತಂದೆಗಳು ಆಗಾಗ್ಗೆ ತಮ್ಮ ಆ ಮುದ್ದು ಮಗನನ್ನು ಕುರಿತು ವಾತ್ಸಲ್ಯದಿಂದ—" ಕಂದಾ, ಹೀಗೆ ನೀನು ಕಠಿಣತರವಾದ ನಿರಶನವ್ರತದಿಂದ ಉಗ್ರತಪಸ್ಸನ್ನು ಮಾಡಬಹುದೆ? ನಮ್ಮಂಥ ಮುದುಕರೂ ಅನ್ನಗತಪ್ರಾಣರಾಗಿರುವಾಗ, ಹದಿನಾಲ್ಕುವರ್ಷದ ಚಿಕ್ಕ ಮಗುವಾದ ನಿನ್ನ ಈ ತಪಸ್ಸಿನರೀತಿಯನ್ನು ನೋಡಿ, ನಮಗೆ ಎಷ್ಟು ಕಷ್ಟವಾಗುತ್ತಿರಬಹುದೆಂಬದನ್ನು ನೀನೇ ವಿಚಾರಮಾಡು. ನಿನ್ನ ತಪಸ್ಸಿಗೆ ನಾವು ವಿಘ್ನಮಾಡುವದಿಲ್ಲ; ಆದರೆ ಅಲ್ಪಾಹಾರದಿಂದ ನೀನು ತಪಶ್ಚರ್ಯ ಮಾಡಿದರೆ, ನಮಗೆ ಸಮಾಧಾನವಾಗುವದೆಂದು ಹೇಳುವೆವು " ಅನ್ನಲು, ಅವರು ಹೀಗೆ ಅಂದಾಗೆಲ್ಲ, ಬಾಲಭುಜಂಗನು ಅವರಿಗೆ—" ಅಪ್ಪಾ, ನನಗೆ ಸ್ವಾತಂತ್ರ್ಯವೇನಿದೆ? ಮುತ್ತಯ್ಯನು ಹೇಳಿದಂತೆ ನಾನು ಕೇಳುವವನು! " ಎಂದು ಹೇಳುತ್ತ ಬರುತ್ತಿದ್ದನು!

**ಬಾಲಭುಜಂಗನ ಲೀಲೆಯ ಸ್ವರೂಪ**—ಬಾಲಭುಜಂಗಯೋಗಿಯ ಈ ಕಠಿಣತರ ತಪಶ್ಚರ್ಯದ ಕೀರ್ತಿಯು ದಿನದಿನಕ್ಕೆ ಹೆಚ್ಚುತ್ತ ಹೋದಂತೆ, ಆತನ ಆಪ್ತೇಷ್ಟರು, ಚಿಕಿತ್ಸಕರು, ದೋಷದೃಷ್ಟಿಯವರು, ಕಾಮನಾಪರರು, ಪರೀಕ್ಷಕರು ರಾತ್ರಿ ಆತನು ಮುಸುಕುತೆಗೆದಾಗ ಆತನ ಬಳಿಗೆ ಬಂದು ಮಾತಾಡುತ್ತ ಕುಳಿತುಕೊಳ್ಳಲು, ಬಾಲಭುಜಂಗನ ಬಾಲಮಿತ್ರರಾದ ದನಕಾಯುವ ಹುಡುಗರಿಗೆ ತಮ್ಮ ಬಾಲಮಿತ್ರನಬಳಿಗೆ ಬರಲಿಕ್ಕೆ ಆಸ್ಪದದೊರೆಯದಂತಾಗುತ್ತ ಹೋದದ್ದರಿಂದ, ಅವರ ಗದ್ದಲವು ಕಡಿಮೆಯಾಗುತ್ತ, ಜನರಗದ್ದಲವು ಹೆಚ್ಚುತ್ತ ಹೋಯಿತು. ಬಾಲಭುಜಂಗನ ಬಾಲಲೀಲೆಯು, ಶ್ರೀಕೃಷ್ಣನ ಬಾಲಲೀಲೆಯನ್ನು ಹೋಲುತ್ತಿರುವದನ್ನು ಮನಸ್ಸಿನಲ್ಲಿ ತರುವವರಿಗೆ ಕೌತುಕವಾಗದೆ ಇರದು! ಶ್ರೀಕೃಷ್ಣನ ಬಾಲಲೀಲೆಯೂ ಆತನ ಭಕ್ತರಲ್ಲದವರಿಗೆ ಮೋಹಾಸ್ಪದ; ಬಾಲ

ಭುಜಂಗಯೋಗಿಯ ಬಾಲಲೀಲೆಯೂ ಭಾವನಾರಹಿತರಿಗೆ ಮೋಹಾಸ್ಪದ! ಶ್ರೀಕೃಷ್ಣನ ಬಾಲಮಿತ್ರರೂ ದನಗಾಹಿಗಳು; ಬಾಲಭುಜಂಗಯೋಗಿಯ ಬಾಲಮಿತ್ರರೂ ದನಗಾಹಿಗಳು! ಶ್ರೀಕೃಷ್ಣನ ಪುಂಡತನವೂ ಪ್ರಸಿದ್ಧ, ಬಾಲಭುಜಂಗನ ಪುಂಡತನವೂಪ್ರಸಿದ್ಧ! ಶ್ರೀಕೃಷ್ಣನು, ದುಷ್ಟಶಾಸನ–ಶಿಷ್ಟ ಪಾಲನ–ಧರ್ಮಸ್ಥಾಪನಗಳ ವ್ಯವಹಾರಗಳಲ್ಲಿತತ್ಪರನಾಗಲು, ಆತನು ತನ್ನ ಪ್ರೇಮಲ ಬಾಲಮಿತ್ರರಿಗೆ ಎರವಾದಂತೆ, ಬಾಲಭುಜಂಗಯೋಗಿಯೂ ಲೋಕಾನುಗ್ರಹಕಾರಕ ತಪೋವ್ಯವಹಾರಾಸಕ್ತನಾಗಲು, ತನ್ನ ಪ್ರೇಮಲ ಬಾಲಮಿತ್ರರಿಗೆ ಎರವಾದನು!

## ೧ನೆಯ ವರ್ಷದ ಕೌತುಕದ ಪ್ರಸಂಗಗಳು.

**ಭುಜಂಗನ ಅಜ್ಜಂದಿರ ಭವಿಷ್ಯ**—ಬರಬರುತ್ತ ಬಾಲಭುಜಂಗಯೋಗಿಯ ಕೀರ್ತಿಪ್ರಭೆಯು ದೂರದೂರ ಬೆಳಗುತ್ತಹೋದಂತೆ, ಜನಸಮ್ಮರ್ದವು ಹೆಚ್ಚಾಗತೊಡಗಿತು. ಬಾಲಭುಜಂಗನ ತಂದೆಯ ಹೆಸರು ತಮ್ಮಣದೀಕ್ಷಿತರೆಂಬದು ವಾಚಕರಿಗೆ ಗೊತ್ತಿರುವದು. ಆ ತಮ್ಮಣದೀಕ್ಷಿತರ ತಂದೆಯ ಹೆಸರು ರಾಮದೀಕ್ಷಿತ ಎಂಬದನ್ನಾದರೂ ನಾವು ಹಿಂದೆ ಹೇಳಿರುವೆವು. ಹೀಗೆ ನಮ್ಮ ಬಾಲಯೋಗಿ ಭುಜಂಗರ ಅಜ್ಜಂದಿರಾದ ರಾಮದೀಕ್ಷಿತರು, ತಮ್ಮ ಮೊಮ್ಮಗನಾದ ಭುಜಂಗನ ಕಠಿಣ ತಪಸ್ಸಿನ ಸುದ್ದಿಯನ್ನು ಕೇಳಿ ಕೌತುಕಪಟ್ಟು, ತಮ್ಮ ಚಿನ್ನಗುಂಡಿಯ ಗ್ರಾಮದಿಂದ ಹೊರಟು, ತಮ್ಮ ಆ ಮೊಮ್ಮಗನನ್ನು ನೋಡುವದಕ್ಕಾಗಿ ಲೋಕಾಪುರಕ್ಕೆ ಬಂದರು. ಅವರು ತಮ್ಮ ಮೊಮ್ಮಗನ ಇರವನ್ನು ನೋಡಿ ತಮ್ಮ ಮನಸ್ಸಿನೊಳಗೆ—“ಇದು ಭುಜಂಗನ ಕಾರ್ಯವಲ್ಲ, ಮುತ್ತ್ಯನವರಾದ ಪರಮಹಂಸರ ಪ್ರೇರಣೆಯ ಪ್ರಭಾವವು” ಎಂದು ಅಂದುಕೊಂಡು, ಮುಸುಗುತೆಗೆದಾಗ ತಮ್ಮ ಮೊಮ್ಮಗ ಬಾಲಭುಜಂಗನನ್ನು ಕುರಿತು—“ಏನಪ್ಪಾ, ಇಂತಹ ತಪಶ್ಚರ್ಯಮಾಡತೊಡಗಿದೆಯಾ? ಇಂಥ ನೀನು ಊಟಮಾಡಿದ್ದನ್ನು ನಾವಿನ್ನೇನು ನೋಡುವೆವು!” ಎಂದು ಅಂದರು! ಇವರ ಈ ಭವಿಷ್ಯದಂತೆ, ಬಾಲಭುಜಂಗಯೋಗಿಯ

ಹನ್ನೆರಡುವರ್ಷ ಎಂಟುತಿಂಗಳ ತಪಶ್ಚರ್ಯವು ಉತ್ತರೋತ್ತರ ಅಭಿವೃದ್ಧಿವಾಗುತ್ತ ಹೋಗಲು, ಆತನು ಊಟಮಾಡಿದ್ದನ್ನು ಒಬ್ಬರಾದರೂ ದೀಕ್ಷಿತರೇಏಕೆ, ಬೇರೆಯವರಾರೂ ನೋಡಲಿಲ್ಲ; ಯಾಕಂದರೆ, ಹನ್ನೆರಡು ವರ್ಷ ಎಂಟುತಿಂಗಳು ಉಪೋಷಣಮಾಡಿದ ಬಾಲಯೋಗಿ ಭುಜಂಗನು, ಪಾರಣಿಮಾಡದೆಯೇ ದೇಹವಿಟ್ಟನೆಂಬ ಸಂಗತಿಯು ಮುಂದೆ ಗೊತ್ತಾಗಬಹುದು.

**ತಪಸ್ತೇಜದ ದುಃಸಹತೆ**—ಬಾಲಭುಜಂಗಯೋಗಿಯ ತಪಸ್ವಿನ ಕೀರ್ತಿಯು ದೂರದೂರದಲ್ಲಿ ಪಸರಿಸಿ ಹೋಗುತ್ತಿರಲು, ಅದು ಆ ಊರ ದೇಸಾಯಿ ಹೆಬ್ಬಾಳಪ್ಪನವರ ಹೆಂಡಿರಾದ ನಾಬವ್ವನವರ ಕಿವಿಗೆ ಮುಟ್ಟಿದ್ದು ಆಶ್ಚರ್ಯವಲ್ಲ. ಆ ದೇಸಾಯಿಣಿಯವರು ಕೌತುಕಪಟ್ಟು, ತಮ್ಮ ಮಗನಾದ ಪ್ರಕೃತದ ದೇಸಾಯಿ ವೆಂಕಟರಾಯರನ್ನು ಕರಕೊಂಡು, ತಪಸ್ಸಿಗೆ ಕುಳಿತ ಮೂರನೆಯ ದಿವಸ ಮಠಕ್ಕೆ ಬಂದರು ಆಗ ಬಾಲಯೋಗಿಭುಜಂಗನು ಮುಸುಕುಹಾಕಿಕೊಂಡು ಕುಳಿತಿದ್ದನು. ವೆಂಕಟರಾಯನೂ, ಬಾಲಭುಜಂಗಯೋಗಿಯೂ ಕೂಡಿ ಆಡಿದವರು. ಉಡಾಳ ಭುಜಂಗನ ಈ ಇರವನ್ನು ನೋಡಿ ಆ ತಾಯಿಮಕ್ಕಳಿಗೆ, ವಿಶೇಷವಾಗಿ ನಾಬವ್ವನವರಿಗೆ ಕೌತುಕವಾಯಿತು, ಆದರೂ “ ನಮಗೆ ಈ ಉಡಾಳನ ಭಯವೇನು ? ” ಎಂಬ ವಿಚಾರದಿಂದ, ಅವರು ಬಾಲಯೋಗಿ ಭುಜಂಗನನ್ನು ಕುರಿತು—“ ಭುಜಂಗಾ, ಹೀಗೇಕೆ ಕುಳಿತುಕೊಂಡೆ, ಮುಸುಗು ತೆಗೆ; ” ಎಂದು ಹೇಳಿದರು ಹೀಗೆ ಅವರು ತಮ್ಮ ದೇಸಾಯಿಣಿತನದ ಒಗರಿನಿಂದ ಹೇಳಿದ್ದೇನು ಆಶ್ಚರ್ಯವಲ್ಲ; ಭುಜಂಗನು ಸರ್ವಸಾಮಾನ್ಯ ಹುಡುಗನಾಗಿದ್ದರೆ, ಅವರ ಒಗರು ನಡೆಯುಲೂ ಬಹುದಾಗಿತ್ತು; ಆದರೆ ಅಲೌಕಿಕಶಕ್ತಿಯ ಬಾಲಭುಜಂಗಯೋಗಿಯು ಆ ದೇಸಾಯಿಣಿಯವರ ಪ್ರಶ್ನಕ್ಕೆ ಉತ್ತರವನ್ನು ಕೊಡಲಿಲ್ಲ, ಮುಸುಕನ್ನೂ ತೆಗೆಯಲಿಲ್ಲ ! ಇದರಿಂದ ನಾಬವ್ವನವರಿಗೆ ಅಪಮಾನವಾದಂತಾಗಿ, ಅವರು ತಮ್ಮ ಮಗನಾದ ವೆಂಕಟರಾಯನನ್ನು ಕುರಿತು—“ ಹೋಗು, ವೆಂಕಟರಾಯಾ, ನಿಮ್ಮ ಭುಜಂಗನ ಮುಸುಕನ್ನು ತೆಗೆ. ” ಎಂದು ಹೇಳಲು, ವೆಂಕಟರಾ

ಯನು ಕೃಷ್ಣಸರ್ಪವನ್ನು ಕೆಣಕುವಂತೆ, ಬಾಲಭಾವದಿಂದ ಭುಜಂಗನ ಮುಸುಕನ್ನು ಹಿಡಿದು ಜಗ್ಗಿದನು!

ಹೀಗೆ ಅಜ್ಞಾನದಿಂದ ವೆಂಕಟರಾಯನು ಬಾಲಭುಜಂಗಯೋಗಿಯ ಮುಸುಕನ್ನು ಬಲಾತ್ಕಾರದಿಂದ ತೆಗೆಯಲು, ಪ್ರತ್ಯಕ್ಷ ಭುಜಂಗಸ್ವರೂಪನೇ ಆಗಿದ್ದ ಬಾಲಭುಜಂಗನು ಒಮ್ಮೆ ಭೇದಕ ದೃಷ್ಟಿಯಿಂದ ಸಾಬವ್ವನವರ ಕಡೆಗೆ ನೋಡಿದನು! ಆಗ ಆತನ ಕಣ್ಣುಗಳು ಕೆಂಡದಂತಾಗಿದ್ದವು! ಆಗ ಬಾಲಭುಜಂಗಯೋಗಿಯು ಸಾಬವ್ವನವರನ್ನು ಕುರಿತು— "ಈಗ ಮುಟ್ಟಿದ್ದೇ ಮುಟ್ಟಿದ್ದು, ಇನ್ನು ಇಂಥ ಕೆಲಸಮಾಡಲಾಗದು." ಎಂದು ಹೇಳಿ, ಎರಡನೆಯ ಮಾತಾಡದೆ ತಟ್ಟನೆ ಎದ್ದು, ಕಾವಲಿಗೆ ಹೋಗಿ ಪುನಃ ಸ್ನಾನಮಾಡಿ, ಒದ್ದೆಯನ್ನೇ ಉಟ್ಟುಕೊಂಡು, ಒದ್ದೆಯ ಮುಸುಕುಹಾಕಿಕೊಂಡು ಮೊದಲಿನಂತೆ ತನ್ನ ಸ್ಥಳದಲ್ಲಿ ಕುಳಿತುಬಿಟ್ಟನು! ಅದನ್ನು ನೋಡಿ ಸಾಬವ್ವನವರ ಎದೆಯಲ್ಲಿ ತಣ್ಣೀರುಸುರವಿದಂತಾಗಿ, ಅವರು ತಮ್ಮೊಳಗೆ—"ನಾವು ಬದುಕಿದೆವು" ಎಂದು ಅಂದುಕೊಂಡು ಸುಮ್ಮನೆ ಮಗನೊಡನೆ ತಮ್ಮ ವಾಡೆಗೆ ಹೊರಟುಹೋದರು! ಬಾಲಭುಜಂಗನು ಮಾಡಿದ ಹನ್ನೆರಡುವರ್ಷ ಎಂಟುತಿಂಗಳ ತಪಶ್ಚರ್ಯದಲ್ಲಿ, ಆತನನ್ನು ಅನ್ಯರು ಮುಟ್ಟಿದ್ದೆಂದರೆ ಮೂರೇಸಾರೆ! ಅದರಲ್ಲಿ ಈಗ ಸಾಬವ್ವನವರು ಮುಟ್ಟಿದ್ದು ಒಂದನೆಯಸಾರೆ; ಮುಂದೆ ಬ್ಯಾಡಿಗೆಯ ಹರಿದಾಸ ಬಾಳಂಭಟ್ಟರೆಂಬವರು, ಸ್ವಾಮಿಗಳ ಪರವಾನಿಗೆಯಿಲ್ಲದೆ ಸಾಹಸದಿಂದ ಪಾದಪೂಜೆಮಾಡುವದಕ್ಕಾಗಿ ಅವರನ್ನು ಮುಟ್ಟಿದ್ದು ಎರಡನೆಯಸಾರೆ; ಮುಂದೆ ಅಂತ್ಯಕಾಲದಲ್ಲಿ ಬಾಲಭುಜಂಗಯೋಗಿಯ ಒಪ್ಪಿಗೆಯಿಂದ ಅವರ ಮಲತಾಯಿ ಯಮುನವ್ವನವರು ಆತನನ್ನು ಮುಟ್ಟಿದ್ದು ಮೂರನೆಯ ಸಾರೆ! ಹೀಗೆ ಮೂರುಸಾರೆಯ ಹೊರತು ನಾಲ್ಕನೆಯಸಾರೆ ಬಾಲಭುಜಂಗಯೋಗಿಯನ್ನು ಮನುಷ್ಯಮಾತ್ರರು ಸ್ಪರ್ಶಮಾಡಲಿಲ್ಲ! ಹೀಗೆ ದೈಹಿಕ ಪಾವಿತ್ರ್ಯವನ್ನು ಕಾಯ್ದುಕೊಂಡ ತಪಸ್ವಿಗಳು, ಈ ಕಲಿಯುಗದಲ್ಲಿ ಎಷ್ಟು ಜನರು ದೊರೆಯಬಹುದು?

**ಪವಿತ್ರಾತ್ಮಗಳ ನಿರ್ಲಿಪ್ತತೆ**—ಲೋಕಾಪುರಪೀಠದ ಹಿಂದಿನ ಆರುಜನಸ್ವಾಮಿಗಳ ಚರಿತ್ರಗಳನ್ನು ಓದಿದವರಿಗೆ, ಈ ಬಾಲಭುಜಂಗ ಯೋಗಿಯ ಪರಿಶುದ್ಧತೆಯು ಅಪೂರ್ವವಾಗಿಯೂ, ಆಶ್ಚರ್ಯಕಾರಕವಾಗಿಯೂ ತೋರುವದರಲ್ಲಿ ಸಂಶಯವಿಲ್ಲ. ಈ ಬಾಲಯೋಗಿಯ ಹಿಂದಿನ ರಾಮಚಂದ್ರಸ್ವಾಮಿಗಳ ವಿಧಿನಿಷೇಧರಹಿತವಾದ ಅಪವಿತ್ರಸ್ವೇಚ್ಛಾಚಾರವೆತ್ತ? ಈ ಬಾಲಭುಜಂಗಯೋಗಿಯ ನಿಯಮಬದ್ಧವಾದ ಪವಿತ್ರಸದಾಚಾರವೆತ್ತ? ಆದರೆ ಇಬ್ಬರೂ ಜ್ಞಾನಿಗಳೇ; ಇಬ್ಬರೂ ಮಹಾಮಹಿಮರೇ; ಇಬ್ಬರೂ ಶಾಪಾನುಗ್ರಹಶಕ್ತಿಯುಳ್ಳವರೇ; ಇಬ್ಬರೂ ಗುರುಕೃಪೆಗೆ ಪಾತ್ರರಾದವರೇ! ಅಂದಬಳಿಕ ಈ ಪ್ರಸಂಗದಲ್ಲಿ ಭಗವದ್ಗೀತೆಯಲ್ಲಿಯ—"ಅಪಿಚೇತ್ಸುದುರಾಚಾರೋ | ಭಜತೇಮಾಮನನ್ಯಭಾಕ್ || ಸಾಧುರೇವ ಸಮಂತವ್ಯಃ | ಸಮ್ಯಗ್ವ್ಯವಸಿತೋಪಿಸಃ" || ಎಂಬ ಭಗವದುಕ್ತಿಯ ಮರ್ಮವನ್ನು ಮನಸ್ಸಿನಲ್ಲಿ ತಂದುಕೊಂಡರೆ, ಅನನ್ಯಭಾವದಿಂದ ಸದ್ಗುರುವಿಗೆ, ಅಥವಾ ದೇವರಿಗೆ ಶರಣುಹೋದವರು, ಪವಿತ್ರತಪಸ್ವಿಗಳಂತೆ ಸದಾಚಾರಿಗಳೇ ಇರಲಿ, ಬಾಲೋನ್ಮತ್ತ ಪಿಶಾಚಗಳಂತೆ ಅಪವಿತ್ರರಾದ ಸ್ವೇಚ್ಛಾಚಾರಿಗಳೇ ಇರಲಿ, ಅವರಿಬ್ಬರ ಸದಾಚಾರ-ದುರಾಚಾರಗಳೆರಡರ ಸಂಬಂಧಗಳೂ ಅವರ ಪರಿಶುದ್ಧಾತ್ಮಗಳಿಗೆ ಆಗದೆ, ಕೇವಲ ಪ್ರಾರಬ್ಧ ಭೋಗಪರರಾಗಿದ್ದ ಅವರಿಬ್ಬರೂ ಸಮಾನಸ್ಕಂಧರಾಗುವರೆಂಬ ಮಾತು ಮನಸ್ಸಿನಲ್ಲಿ ಬರುವದಲ್ಲವೆ? ಒಟ್ಟಿಗೆ, ಕರ್ಮಾತೀತರಾದ ಮಹಾಪುರುಷರ ಸಂಗವು ಕೃಷ್ಣಸರ್ಪದ ಸಂಗದಂತೆ ಕಠಿಣತರವೆಂಬ ಮಾತೇ ನಿಶ್ಚಯವು! ಅವರ ನೆಲೆಯು ಸಂಸಾರದ ಹುಳಗಳಿಗೆ ಸರ್ವಥಾ ಹತ್ತದು! ಇದಕ್ಕೆ ದೇಸಾಯಿಣಿ ಸಾಬವ್ವನವರ ಮನಸ್ಸಿನ ಸ್ಥಿತಿಯೇ ಸಾಕ್ಷಿಯಾಗಿರುವದು!

**ಯತಿಗಳ ಆಕಸ್ಮಿಕ ದರ್ಶನ**—ಹೀಗೆ ಬಾಲಭುಜಂಗಯೋಗಿಯು ಆಚಮನೋದಕದ ಹೊರತು ಏನೂ ಆಹಾರ ಗ್ರಹಣಮಾಡದೆ, ಅಖಂಡ ಏಳು ದಿವಸ ತಪಶ್ಚರ್ಯಮಾಡಲು, ಎಂಟನೆಯ ದಿವಸ ಆತನು ಕಾವಲಿಗೆ ಸ್ನಾನಕ್ಕೆ ಹೋದಾಗ, ಅಕಸ್ಮಾತ್ ಒಬ್ಬ ಯತಿಗಳು ಅಲ್ಲಿಗೆ ಬಂದು ಬಾಲಭುಜಂಗನನ್ನು ಕುರಿತು—"ತಮ್ಮಾ, ಹೀಗೆ ನಿರಶನ ವ್ರತ

ದಿಂದ ತಪಶ್ಚರ್ಯ ಮಾಡುವದು, ಅನ್ನಗತಪ್ರಾಣದ ಈ ಕಲಿಯುಗ ದಲ್ಲಿ ಯೋಗ್ಯವಲ್ಲವು; ಆದ್ದರಿಂದ ನೀನು ಸ್ವಲ್ಪ ಹಾಲು ಹಣ್ಣು ತಕ್ಕೊಂಡು ತಪಶ್ಚರ್ಯ ಮಾಡತಕ್ಕದ್ದು" ಎಂದು ಹೇಳಿ ಹೊರಟುಹೋದರು! ಹೀಗೆ ಅಕಸ್ಮಾತ್ತಾಗಿ ಬಂದು ಹೇಳಿದ ಯತಿಗಳನ್ನು ಈಮೊದಲೆ ಯಾರೂ ನೋಡಿದ್ದಿಲ್ಲ, ತಿರುಗಿ ಯಾರೂ ಎಲ್ಲಿಯೂ ನೋಡಲಿಲ್ಲ! ಬಾಲಭುಜಂಗನು ಆ ಯತಿರೂಪದಿಂದ ಪರಮಹಂಸರೇ ತನ್ನನ್ನು ಆಜ್ಞಾಪಿಸಿದರೆಂದು ತಿಳಿದು, ಎಂಟನೆಯ ದಿವಸದಿಂದ ಸ್ವಲ್ಪ ಹಾಲು ಹಣ್ಣು ತಕ್ಕೊಳ್ಳಹತ್ತಿದನು! ಈಮೊದಲೆ ಆತನ ತಾಯಿ-ತಂದೆಗಳು, ಹಾಗು ಬೇರೆಯವರು ಎಷ್ಟು ಸಾರೆ ಹೇಳಿದ್ದರೂ ಆಚಮನೋದಕದ ಹೊರತು ಬಾಯಲ್ಲಿ ನೀರುಹಾಕಿಕೊಳ್ಳದ ಬಾಲಭುಜಂಗಯೋಗಿಯು, ಯತಿಗಳ ಮಾತಿನಿಂದ ಸ್ವಲ್ಪ ಹಾಲು ಹಣ್ಣು ತಕ್ಕೊಳ್ಳಹತ್ತಿದ್ದನ್ನು ನೋಡಿದರೆ, ಪರಮಹಂಸರೇ ಯತಿರೂಪದಿಂದ ಬಂದು ಹೇಳಿದರೆಂದು ತಿಳಿಯಬೇಕಾಗುತ್ತದೆ! ದೊಡ್ಡವರ ಚರಿತ್ರದಲ್ಲಿಯ ಒಂದೊಂದು ಸಂಗತಿಗಳು ಕೌತುಕವನ್ನುಂಟುಮಾಡುವಂತಹವಿರುವವೆಂಬದರಲ್ಲಿ ಸಂಶಯವಿಲ್ಲವು.

ಹೀಗೆ ಬಾಲಭುಜಂಗಯೋಗಿಯು ಒಂದನೆಯ ವರ್ಷ ಹಗಲು ಹನ್ನೆರಡು ತಾಸು ಮುಸುಕಿನಲ್ಲಿದ್ದು, ಶ್ರೀಗುರುಚರಿತ್ರದ ಸಪ್ತಾಹ, ಹಾಗು ಗುರೂಪದಿಷ್ಟ ಮಂತ್ರದ ಜಪ ಇವುಗಳನ್ನು ಮಾಡುತ್ತ, ರಾತ್ರಿ ಹನ್ನೆರಡು ತಾಸು ಮುಸುಕುತೆಗೆದು ಎಚ್ಚತ್ತಿದ್ದು ಜನರೊಡನೆ ಮಾತಾಡುತ್ತ—"ಯಾನಿಶಾ ಸರ್ವ ಭೂತಾನಾಂ ತಸ್ಯಾಂ ಜಾಗರ್ತಿಸಂಯಮಿ। ಯಸ್ಯಾಂ ಜಾಗ್ರತಿ ಭೂತಾನಿ ಸಾನಿಶಾಪಶ್ಯ ತೋಮುನೇಃ ॥" ಎಂಬ ಭಗವದುಕ್ತಿಯಂತೆ, ಹಗಲು ರಾತ್ರಿಯಾಗಿ, ರಾತ್ರಿಯು ಹಗಲಾಗಿ ಬೈಲಲ್ಲಿ ತಪಸ್ಸನ್ನು ಆಚರಿಸುತ್ತಿರಲು, ಬಡಮಠದ ಮಂದಿ ಬಾಲಭುಜಂಗ ಯೋಗಿಗೆ ಬಿಸಿಲು-ಮಳೆ-ಗಾಳಿ-ಚಳಿಗಳ ಬಾಧೆ ತಟ್ಟಬಾರದೆಂದು, ಮೊದಲು ಆತನ ತಲೆಯಮೇಲೆ ಗುಡಾರ ಹೊಡೆದರು, ಆದರೆ ಆ ಗುಡಾರವು ಕೊಳೆಯತೊಡಗಲು, ಆಮೇಲೆ ಹತ್ತಿಯಕಟ್ಟಿಗೆಯ ಗುಡಿಸಲು ಮಾಡಿದರು; ಆದರೆ ಹೀಗೆ ಮಾಡಿರೆಂದು ಬಾಲಭುಜಂಗಯೋಗಿಯು

ಯಾರಿಗೂ ಹೇಳದೆ, "ಶೀತೋಷ್ಣ ಸುಖದುಃಖೇಷು ಸಮಃ ಸಂಗ ವಿವ ರ್ಜಿತಃ" ಎಂಬ ಭಗವದ್ಗೀತೆಯ ಉಕ್ತಿಯಂತೆ, ಶೀತೋಷ್ಣ–ಸುಖ ದುಃಖಾದಿ ದ್ವಂದ್ವಗಳನ್ನು ಸಮನಾಗಿ ಭಾವಿಸಿ, ಸಂಗ ವಿವರ್ಜಿತನಾಗಿ ತಾನು ಮಾಡುವಹಾಗೆ ಬಾಲಭುಜಂಗನು ತಪಶ್ಚರ್ಯ ಮಾಡುತ್ತಲಿದ್ದನು! ಹೀಗೆ ವರ್ಷಕ್ಕೊಂದು ದಿವಸದಂತೆ ಹೆಚ್ಚಿಸುತ್ತ, ಐದನೆಯ ವರ್ಷ ಅಖಂಡ ಐದು ಹಗಲು ಏಕಾಸನದಲ್ಲಿ ಮುಸುಕಿನೊಳಗೆ ನಿರಶನವ್ರತ ದಿಂದ ಕುಳಿತು, ಐದನೆಯ ದಿವಸ ರಾತ್ರಿ ಮುಸುಕುತೆಗೆದು, ಬೆಳತನಕ ಮಾತುಕಥೆಗಳಲ್ಲಿ ಕಾಲಕಳೆದು, ಬೆಳಗಾಗಲು ಮತ್ತೆ ಕಾವಲಿಯಲ್ಲಿ ಸ್ನಾನ ಮಾಡಿ ಮತ್ತೆ ಮುಸುಕುಹಾಕುವದು ಬಾಲಭುಜಂಗನ ತಪಶ್ಚರ್ಯದ ಸಹಜವಾದ ಪದ್ಧತಿಯಾಗಿತ್ತು! ಇಂತಹ ಅಭಿವೃದ್ಧ ಸ್ಥಿತಿಯು ಕಠಿಣ ತಪ ಶ್ಚರ್ಯದಲ್ಲಿ, ಸಂತತವಾದ ಬೆಳಗಿನ ಕಾವಲಿಯ ತಣ್ಣೀರ ಸ್ನಾನ, ಸಂತತ ವಾದ ನಿದ್ರಾಲೋಪ, ಪರಮಹಂಸರ ಆಜ್ಞೆಯೆಂದು ಹಾಲು–ಹಣ್ಣಿನ ಅಲ್ಪಾಹಾರಗ್ರಹಣ ಈ ಕ್ರಮವು ಒಂದೇ ಸವನೆ ನಡೆದಿದ್ದರೂ, ನಿರ್ಯಾ ಣಕಾಲದ ಅಲ್ಪವ್ಯಾಧಿಯ ಹೊರತು ಬೇರೆ ಯಾವ ವ್ಯಾಧಿಗೂ ಆಸ್ಪದವಾ ಗದೆ, ಯಾವ ವಿಘ್ನದ ಬಾಧೆಗೂ ಸೊಪ್ಪುಹಾಕದೆ ಬಾಲಭುಜಂಗಯೋ ಗಿಯು ಸಂತತವಾಗಿ ಹನ್ನೆರಡು ವರ್ಷ ಎಂಟು ತಿಂಗಳು ತಪಶ್ಚರ್ಯ ಮಾಡಿದ್ದನ್ನು ನೋಡಿದವರು ಈಗಲೂ ಎಷ್ಟೋ ಜನರು ಇರುವರು! ಅಂದಬಳಿಕ ಪರಮಹಂಸಾದಿಕರಾದ ಲೋಕಾಪುರ ಪೀಠಸ್ಥ ಸ್ವಾಮಿಗಳು, ಅಥವಾ ಬೇರೆ ಆಧುನಿಕ ಮಹಾ ತಪಸ್ವಿಗಳು, ಅಥವಾ ಪುರಾಣಾಂತರದ ಋಷಿಗಳು ಮಾಡಿರುವ ತಪಶ್ಚರ್ಯವು ಕೇವಲ ಕಾಲ್ಪನಿಕವೆಂದು ತಿಳಿಯು ವದು ದುರಹಂಕಾರದ ಲಕ್ಷಣವಲ್ಲದೆ ಮತ್ತೇನು ?

---

### ೨ನೆಯ ವರ್ಷದ ತಪಶ್ಚರ್ಯವು.

## ೮ನೇ ಅಧ್ಯಾಯ—ತಪಸ್ಸಿನ ಕ್ರಮವು



ಹೀಗೆ ಬಾಲಭುಜಂಗಯೋಗಿಯು ಒಂದು ವರ್ಷದ ತಪಶ್ಚರ್ಯದ ಒಂದನೆಯ ಮೆಟ್ಟಲವನ್ನು ಹತ್ತಿಹೋಗಿ, ಎರಡನೆಯ ಮೆಟ್ಟಲವನ್ನು ಹತ್ತಲನುವಾದನು ಆತನು ಮೊದಲನೆಯವರ್ಷ ಬೆಳಗಿನಿಂದ ಸಾಯಂಕಾಲದವರೆಗೆ ಮುಸುಕಿನಲ್ಲಿ ಏಕಾಸನದಿಂದ ಅನುಷ್ಠಾನಮಾಡಿ, ರಾತ್ರಿ ಎಚ್ಚತ್ತಿದ್ದು ಮತ್ತೆ ಬೆಳಗಾದಬಳಿಕ ಕಾವಲಿಯಲ್ಲಿ ಸ್ನಾನಮಾಡಿ ಪುನಃ ಮುಸುಕುಹಾಕಿಕೊಂಡು ಅನುಷ್ಠಾನಕ್ಕೆ ಕುಳಿತುಕೊಳ್ಳುತ್ತಿದ್ದನಷ್ಟೆ? ಈಗ ಎರಡನೆಯವರ್ಷದ ಆರಂಭದ ದಿವಸ ಒಂದುದಿನ ಅಖಂಡ ಹಗಲು ರಾತ್ರಿ, ಎರಡನೆಯದಿನ ಹಗಲು ಹನ್ನೆರಡುತಾಸು, ಹೀಗೆ ಮೂರೊಪ್ಪತ್ತು ಏಕಾಸನದಲ್ಲಿ ಮುಸುಕುಹಾಕಿಕೊಂಡು ಅನುಷ್ಠಾನಮಾಡಿ, ಎರಡನೆಯ್ಲ್ವ ದಿವಸ ಸಾಯಂಕಾಲಕ್ಕೆ ಮುಸುಕುತೆಗೆದು ರಾತ್ರಿಯಲ್ಲಿ ಬೆಳತನಕ ಎಚ್ಚತ್ತಿದ್ದು, ಮೊದಲಿನ ಒಂದನೆಯವರ್ಷದ ಕ್ರಮದಂತೆ, ನೆವಮಾತ್ರ ಸ್ವಲ ಹಾಲು ಹಣ್ಣುತಕ್ಕೊಂಡು, ಕೂಡಿದ ಜನರೊಡನೆ ವಿನೋದದ ಮಾತು ಕಥೆಗಳನ್ನಾಡುತ್ತ ಬೆಳಗಾದಬಳಿಕ ಕಾವಲಿಯಲ್ಲಿ ಸ್ನಾನಮಾಡಿ, ನಿರಿಗೆ ಹಾಕಿ ಇಟ್ಟದ್ದ ತನ್ನ ಒಣಗಿದ ಸೇಟಿಯನ್ನು ಉಟ್ಟುಕೊಂಡು, ಒಣಸೇಟಿಯಮುಸುಕುಹಾಕಿಕೊಂಡು ಪುನಃ ಅನುಷ್ಠಾನಕ್ಕೆ ಕುಳಿತುಕೊಳ್ಳುತ್ತಿದ್ದನು ! ಮೊದಲನೆಯವರ್ಷ ಒಂದು ಹಗಲು ಮಾತ್ರ ಮುಸುಕಿನಲ್ಲಿರಲು, ಸಪ್ತಾಹಕ್ರಮದಂತೆ ಗುರುಚರಿತ್ರದ ಸಪ್ತಾಹಮಾಡುವಾಗ ಏಳುದಿವಸಗಳಲ್ಲಿ ಸಪ್ತಾಹವು ಮುಗಿಯುತ್ತಿದ್ದದ್ದರಿಂದ, ಎಂಟನೆಯದಿವಸ ಮಠದಲ್ಲಿ ಬ್ರಾಹ್ಮಣ ಸಂತರ್ಪಣಮಾಡಲಿಕ್ಕೆ ಸುಲಭವಾಗಿ ಗೊತ್ತಾಗುತ್ತಿತ್ತು ;

ಆದರೆ ಮುಂದೆ ಬಾಲಭುಜಂಗಯೋಗಿಯು ಒಂದು ದಿವಸಕ್ಕಿಂತ ಹೆಚ್ಚು ದಿವಸ, ಅಂದರೆ ಪ್ರತಿಒಂದುವರ್ಷಕ್ಕೆ ಒಂದೊಂದು ದಿನದಂತೆ ಐದನೆಯ ವರ್ಷದವರೆಗೆ ತಪಶ್ಚರ್ಯದ ದಿನಗಳನ್ನು ಒಂದೊಂದಾಗಿ ಹೆಚ್ಚಿಸುತ್ತ, ಐದನೆಯವರ್ಷ ನಾಲ್ಕು ಹಗಲು ಅಖಂಡವಾಗಿ ಏಕಾಸನದಿಂದ ನಿರಶನವಾಗಿ ಮುಸುಕಿನಲ್ಲಿ ಕುಳಿತು, ಐದನೆಯದಿವಸರಾತ್ರಿ ಮುಸುಕುತೆಗೆದು ಬೆಳತನಕ ಎಚ್ಚತ್ತು, ಬೆಳಗಾದಬಳಿಕ ಮತ್ತೆ ಮುಸುಕುಹಾಕುತ್ತಿದ್ದ ರಿಂದ, ಗುರುಚರಿತ್ರ ಸಪ್ತಾಹ ಮುಗಿಯುವ ದಿವಸವು ಇಂತಹದೇ ಎಂಬದು, ಬಾಲಭುಜಂಗಯೋಗಿಗಳ ಹೊರತು ಉಳಿದವರಿಗೆ ಸುಲಭವಾಗಿ ಗೊತ್ತಾಗುವ ಸಂಭವವಿದ್ದಿಲ್ಲ ; ಆದ್ದರಿಂದ ಬಾಲಭುಜಂಗಯೋಗಿಗಳು, ತಾವು ಮುಸುಕುತೆಗೆದ ಮರುದಿವಸ ಸಪ್ತಾಹ ಮುಗಿಯುತ್ತಿದ್ದರೆ, ಮುಸುಕುತೆಗೆದಾಗ, "ನಾಳೆ ಸಪ್ತಾಹ ಮುಗಿಯುವದು" ಎಂದು ಹೇಳುತ್ತಿದ್ದರು. ಮುಸುಕುತೆಗೆಯುವದರೊಳಗೇ ಸಪ್ತಾಹ ಮುಗಿಯುತ್ತಿದ್ದರೆ, ಚೀಟಿಯಬರೆದು ಮುಸುಕಿನ ಹೊರಗೆ ಚಲ್ಲಿ—"ಇಂದು ಸಪ್ತಾಹವು ಮುಗಿಯುವದೆಂದು" ತಿಳಿಸುತ್ತಿದ್ದರು. ಸಪ್ತಾಹದ ಅಧ್ಯಾಯಗಳ ಪಾರಾಯಣವು ಮುಗಿದಬಳಿಕ, ಉಳಿದವೇಳೆಯಲ್ಲಿ ಸತತವಾಗಿ ಗುರೂಪದಿಷ್ಟ ಮಂತ್ರದ ಜಪಮಾಡುತ್ತಿದ್ದದ್ದರಿಂದ, ಅವರ ನಾಲಿಗೆಗೆ ಸತತವಾಗಿ ಒಂದು ಪ್ರಕಾರದ ಆಘಾತವಾಗುತ್ತಿರಲು, ಮಾತಾಡುವಾಗ ಅವರ ನಾಲಿಗೆಯು ಒಮ್ಮೊಮ್ಮೆ ತಟಿಯುತ್ತಲಿತ್ತಂತೆ !

## ೨ನೆಯ ವರ್ಷದ ಕೌತುಕದ ಸಂಗತಿಗಳು.

**ಆಸನದ ಧೃಡತೆ**—ಬಾಲಭುಜಂಗಯೋಗಿಗಳ ಹನ್ನೆರಡುವರ್ಷ ಎಂಟುತಿಂಗಳ ತಪಶ್ಚರ್ಯದಲ್ಲಿ, ಅವರು ಸ್ನಾನಕ್ಕೆ ಹೋಗುವಾಗಿನ ಹೊರತು ಉಳಿದ ಕಾಲದಲ್ಲಿ ಎಂದೂ ಆಸನಬಿಟ್ಟು ಏಳದೆ ತಪಶ್ಚರ್ಯ ಮಾಡಿದ್ದು ಅದ್ಭುತಸಂಗತಿಯೇಸರಿ. ಅವರಿಗೆ ಆಸನಭ್ರಷ್ಟವಾಗುವ ಪ್ರಸಂಗಗಳು ಕೆಲವು ಬಂದವು; ಆದರೆ ಅವರು ದೇಹದ ಪರಿವೆಯಿಲ್ಲದೆ ದೃಢಾಸನರಾಗಿ ತಪಶ್ಚರ್ಯಮಾಡಿದರು ! ಅಂಥ ಪ್ರಸಂಗಗಳಲ್ಲಿ ಎರಡು

ನೆಯವರ್ಷ ಒದಗಿದ ಒಂದು ಪ್ರಸಂಗವನ್ನು ಇಲ್ಲಿ ಬರೆಯುವೆವು. ಹಿಂದಕ್ಕೆ ಒಂದನೆಯವರ್ಷದ ತಪಶ್ಚರ್ಯನಡೆದಾಗ, ಬಾಲಭುಜಂಗ ಯೋಗಿಗಳಿಗೆ ಬಿಸಿಲು-ಮಳೆ-ಗಾಳಿ-ಚಳಿಗಳ ರಕ್ಷಣಕ್ಕಾಗಿ ಹತ್ತಿಯಕಟ್ಟಿಗೆಯ ಚಪ್ಪರಹಾಕಿದ್ದರೆಂದು ಹೇಳಿದೆಯಷ್ಟೆ? ಒಂದುದಿನ ಬಾಲಭುಜಂಗ ಯೋಗಿಗಳು ಆ ಚಪ್ಪರದಲ್ಲಿ ಅನುಷ್ಠಾನಮಾಡುತ್ತ ಕುಳಿತಿದ್ದರು. ಹೊರಗೆ ತಮ್ಮಣದೀಕ್ಷಿತರೂ, ಲೋಕಾಪುರದ ಟೊಣಪಿ ತಮಣಾಚಾರ್ಯರೂ ಮಾತಾಡುತ್ತ ಕುಳಿತಿದ್ದರು. ಅಷ್ಟರಲ್ಲಿ ಆ ಚಪ್ಪರದ ತಲೆಜಂತಿಯು ಒಮ್ಮೊಂದೊಮ್ಮೆ ಚಟ್ಟನೆಸಿಡಿದ ಸಪ್ಪಳವು ಕೇಳಿಸಿತು! ಕೂಡಲೆ ತಮಣಾಚಾರ್ಯರು—"ಘಾತವಾಯಿತು" ಎಂದು ನುಡಿದು, ಚಟ್ಟನೆ ಎದ್ದು ಹೋದವರೇ ಜಂತಿಗೆ ಹೆಗಲುಕೊಟ್ಟು ನಿಂತುಕೊಂಡರು! ಆದರೆ ಬಾಲಭುಜಂಗಯೋಗಿಗಳು ತಮ್ಮ ಆಸನಬಿಟ್ಟು ಕದಲದೆ ತಮ್ಮ ಅನುಷ್ಠಾನವನ್ನು ನಿರ್ವಿಕಾರವಾದ ಮನಸ್ಸಿನಿಂದ ನಡಿಸಿದ್ದರು! ಅಷ್ಟರಲ್ಲಿ ತಮ್ಮಣದೀಕ್ಷಿತರು ಕಂಬಕೊಟ್ಟು ಚಪ್ಪರವನ್ನು ನಿಲ್ಲಿಸಿದರು! ದೇಹದ ಅಭಿಲಾಷೆಯುಳ್ಳ ದಾಂಭಿಕ ತಪಸ್ವಿಗಳಿಂದ ಇಂತಹ ಪ್ರಸಂಗದಲ್ಲಿ ಆಸನದ ದೃಢತೆಯನ್ನು ಕಾಯ್ದುಕೊಳ್ಳುವದು ಸರ್ವಥಾ ಆಗಲಾರದು.

**ಭವಿಷ್ಯಕಥನವೂ, ಕರ್ತೃತ್ವಶಕ್ತಿಯೂ**—ಬಾಲಭುಜಂಗ ಯೋಗಿಗಳು ಮುಸುಕುತೆಗೆಯುವ ದಿವಸ ರಾತ್ರಿ, ಅವರ ಬಳಿಯಲ್ಲಿ ಕೆಲವು ತಂಬಿಗೆಗಳನ್ನು ನೀರು ತುಂಬಿ ಇಡುವ ಪರಿಪಾಠವಿತ್ತು; ಯಾಕಂದರೆ ಮುಸುಕು ತೆಗೆದ ರಾತ್ರಿ ಅವರು ತಂಪುಮಾಡಿದ ನೀರು ಆಗಾಗ್ಗೆ ಕುಡಿಯುತ್ತಿದ್ದರಲ್ಲದೆ, ಸುಮ್ಮನೆ ಕುಳಿತಾಗ ವಿನೋದದಿಂದ ಸಣ್ಣಾಗಿ ನೀರು ಚಲ್ಲುತ್ತ ಕುಳಿತುಕೊಳ್ಳುವದು ಅವರ ಪದ್ಧತಿಯಾಗಿತ್ತು. ಆ ಮಹಾತ್ಮನು ತನ್ನ ಹನ್ನೆರಡುವರ್ಷ ಎಂಟು ತಿಂಗಳ ತಪಶ್ಚರ್ಯದಲ್ಲಿ, ಮಲಗಲಿಲ್ಲ, ನಿದ್ದೆಮಾಡಲಿಲ್ಲ, ತಪಶ್ಚರ್ಯಕ್ಕೆ ಕುಳಿತಾಗ ಆತನಿಗೆ ಶೌಚಮೂತ್ರಗಳ ಬಾಧೆಯಾಗಲಿಲ್ಲ! ಈ ಸಂಗತಿಯನ್ನು ಕುರಿತು ಆಲೋಚಿಸುವಾಗ, ಬುದ್ಧಿಯು ಕುಂಠಿತವಾಗುವದು! ಇರಲಿ ಒಂದು ದಿವಸ ಸ್ವಾಮಿಗಳು ಹಾಗೆ ನೀರು ಚಲ್ಲುತ್ತ ಕುಳಿತಿರುವಾಗ, ಯಂಡಿಗೇರಿಯ ತುಳಜಂಭಟ್ಟ

ರೆಂಬವರಿಗೆ ಬಹಳ ನೀರಡಿಕೆಯಾಗಿತ್ತು. ಅವರು ಮಠದಲ್ಲಿ ನೀರು ಕುಡಿಯಬೇಕೆಂದರೆ, ಎಲ್ಲರೂ ಮಲಗಿಕೊಂಡಿದ್ದರು. ಆಗ ಸ್ವಾಮಿಗಳ ಬಳಿಯಲ್ಲಿ ನೀರು ಇರುತ್ತಿರುವದು ತುಳಜಂಭಟ್ಟರಿಗೆ ನೆನಪಾಯಿತು. ಆಗ ಅವರು ಬಾಲಭುಜಂಗಯೋಗಿಗಳ ಬಳಿಗೆ ಬರಲು, ಅವರು ಸಣ್ಣಾಗಿ ನೀರು ಚಲ್ಲುತ್ತ ಕುಳಿತಿದ್ದರು. ಅದನ್ನು ನೋಡಿ ತುಳಜಂಭಟ್ಟರು ಆತುರದಿಂದ ಸ್ವಾಮಿಗಳನ್ನು ಕುರಿತು—"ಸ್ವಾಮಿ, ಕುಡಿಯಲಿಕ್ಕೆ ನೀರು ಬೇಕು" ಎಂದು ಕೇಳಲು, ಬಾಲಭುಜಂಗಯೋಗಿಗಳು ತಟ್ಟನೆ ತಮ್ಮ ತಾಯಿಯನ್ನು ಕರೆದು—"ಅವ್ವಾ, ತುಳಜಂಭಟ್ಟರಿಗೆ ಬೆಂಕಿ ಬೇಕಾಗಿರುವದಂತೆ" ಎಂದು ನುಡಿದರು!

ಇದನ್ನು ಕೇಳಿದಕೂಡಲೆ ತುಳಜಂಭಟ್ಟರು ಬೆದರಿ ನೆಲಕ್ಕೆ ಕುಳಿತರು, ಯಾಕಂದರೆ ಬಾಲಭುಜಂಗಯೋಗಿಗಳ ಮುಖದಿಂದ ವ್ಯರ್ಥ ಮಾತು ಹೊರಡುವ ಸಂಭವವಿಲ್ಲದ್ದರಿಂದ, ನನ್ನ ನಾಶವನ್ನು ಸ್ವಾಮಿಗಳು ಸೂಚಿಸಿದರೆಂದು ತುಳಜಂಭಟ್ಟರ ಭಾವನೆಯಾಯಿತು! ಆಗ ಬಾಲಭುಜಂಗಯೋಗಿಯು ತುಳಜಂಭಟ್ಟನನ್ನು ಕುರಿತು—"ತುಳಜಂಭಟ್ಟಾ, ನಾನು ನುಡಿದದ್ದರ ಸಂಬಂಧವು ನಿನಗೆ ಇರುವದಿಲ್ಲ, ನೀನು ಬೆದರಬೇಡ. ನನ್ನ ಬಾಯಿಂದ ಆ ನುಡಿಯು ಯಾಕೆ ಹೊರಬಿತ್ತೆಂಬದು ನಾಳೆ ಬೆಳಗಿನಲ್ಲಿ ನಿನಗೆ ಗೊತ್ತಾಗುವದು" ಎಂದು ಹೇಳಿದನು! ಅಂದು ಬೇಗಾದ ಬಳಿಕ ಬಾಲಭುಜಂಗ ಯೋಗಿಗಳು ಮುಸುಕು ಹಾಕಿಕೊಂಡು ಅನುಷ್ಠಾನಕ್ಕೆ ಕುಳಿತುಕೊಳ್ಳಲು, ಇತ್ತ ಲೋಕಾಪುರದಲ್ಲಿ ಮಾರಿಕಾಬೇನೆಯು ಆರಂಭವಾದ ಸುದ್ದಿಯು ಬಂದಿತು! ಹೀಗೆ ಕೆಲವು ದಿನ ಜನರು ಬೇನೆಯಿಂದ ಸಾಯುತ್ತಿರಲು, ಬರಬರುತ್ತ ಮರಣಸಂಖ್ಯೆಯು ಹೆಚ್ಚಿತು! ಆಗ ಊರಜನರು ಗಾಬರಿಯಾಗಿ ಸ್ವಾಮಿಗಳು ಮುಸುಕುತೆಗೆದ ರಾತ್ರಿ ಅವರ ಬಳಿಗೆಬಂದು ನಮಸ್ಕರಿಸಿ—"ಸ್ವಾಮಿ, ಬೇನೆಯು ಹೆಚ್ಚಿತು! ಊರಬಿಟ್ಟು ಹೋಗುವ ಪ್ರಸಂಗವು ಬಂದಂತಾಯಿತು. ಮುಂದೆ ಗತಿಯೇನು?" ಎಂದು ಕೇಳಲು, "ಸ್ವಾಮಿಗಳು ಜನರನ್ನು ಕುರಿತು—"ಇಂದು ಎಷ್ಟು ಜನರಿಗೆ ಬೇನೆಬಂದಿರುವದು?" ಎಂದು ಕೇಳಲು

“ಎಂಟು ಜನರಿಗೆ” ಎಂದು ಹೇಳಿದರು. ಅದಕ್ಕೆ ಸ್ವಾಮಿಗಳು— “ಈಗ ಬೇನೆ ಬಂದಿರುವ ಜನರಿಗೆ ಏನೂ ಆಗುವದಿಲ್ಲ, ಇನ್ನುಮೇಲೆ ಬೇನೆ ಯಾರಿಗೂ ಬರುವದಿಲ್ಲ” ಎಂದು ಹೇಳಿದರು. ಅದರಂತೆಯೇ ಆದದ್ದನ್ನು ನೋಡಿದ ಜನರು ಇನ್ನೂ ಇರುವರು!

**ಮತ್ತೊಂದು ಭವಿಷ್ಯಕಥನವು**—ಬಾಲಭುಜಂಗಯೋಗಿಯ ತಂಗಿ ಭಾಗೀರಥಿಯೆಂಬ ಹೆಸರಿನ ಒಬ್ಬ ಕನ್ಯೆಯಿದ್ದಳು. ಆಕೆಗೆ ವರನನ್ನು ನಿಶ್ಚಯಮಾಡಿ ಲಗ್ನಮೂಹೂರ್ತವನ್ನು ಕೂಡ ಗೊತ್ತು ಮಾಡಿದರು! ಮುಂದೆ ಬಾಲಭುಜಂಗ ಯೋಗಿಗಳು ಮುಸುಗು ತೆಗೆದ ರಾತ್ರಿಯಲ್ಲಿ ಅವರ ತಂದೆ ತಮ್ಮಣದೀಕ್ಷಿತರು ಈ ಮಾತನ್ನು ಬಾಲಭುಜಂಗಯೋಗಿಗಳಿಗೆ ತಿಳಿಸಲು, ಅವರು ತಮ್ಮ ತಂದೆಯನ್ನು ಕುರಿತು—“ಅಪ್ಪಾ, ಈ ಮುಹೂರ್ತಕ್ಕೆ ಲಗ್ನಮಾಡಬೇಡಿರಿ, ಮತ್ತೊಂದು ಮುಹೂರ್ತಕ್ಕೆ ಲಗ್ನಮಾಡಿರಿ” ಎಂದು ಹೇಳಿದರು. ಬಾಲಭುಜಂಗನು ಈಗ ಉಡಾಳನಾಗಿದ್ದಿಲ್ಲ; ಜಗತ್ತನ್ನೇ ದಂಗುಬಡಿಸುವ ಗಂಭೀರ ತಪಸ್ವಿಯಾಗಿದ್ದನು ಆತನ ಹಲವು ಮಹಿಮೆಗಳ ಅನುಭವಪಡೆದದ್ದರಿಂದ, ಆತನ ವಿಷಯದಲ್ಲಿ ಜನರ ಭಯ-ಭಕ್ತಿಗಳು ಹೆಚ್ಚಾಗಿದ್ದವು; ಆದ್ದರಿಂದ ಆ ಬಾಲಭುಜಂಗ ಯೋಗಿಗಳ ಮಾತು ಮೀರಿ ಲಗ್ನಮಾಡಲಿಕ್ಕೆ ಯಾರಿಗೂ ಧೈರ್ಯವಾಗಲಿಲ್ಲ. ಅದರಂತೆ ತಮ್ಮಣದೀಕ್ಷಿತರು ಲಗ್ನವನ್ನು ನಿಲ್ಲಿಸಿಬಿಟ್ಟರು! ಬೇಗನೆ ಲಗ್ನಮಾಡಿಬಿಡಬೇಕೆಂದು ಮುಹೂರ್ತವನ್ನು ಸಮೀಪದಲ್ಲಿಯೇ ಇಟ್ಟಿದ್ದರು; ಆದರೆ ಅದೇ ಮುಹೂರ್ತದ ದಿವಸ ಗೊತ್ತುಮಾಡಿದ್ದ ಆ ವರನು ಸತ್ತ ಸುದ್ದಿಯು ಬಂದಿತು! ಮುಂದೆ ಬಾಲಭುಜಂಗಯೋಗಿಗಳು ಮುಸುಕು ತೆಗೆದಬಳಿಕ ರಾತ್ರಿ ಅವರಿಗೆ ಈ ಸುದ್ದಿಯನ್ನು ಹೇಳಲು, ಆ ಮಹಾತ್ಮರು—“ಎಲಎಲಾ! ಎಂಥ ಅನ್ಯಾಯವಾಯಿತಲ್ಲ! ಅಂತೇ ಮುತ್ತಯ್ಯನು ನನ್ನ ಮುಖದಿಂದ ಹಾಗೆ ಆಡಿಸಿದನೆಂಬಂತೆ ತೋರುತ್ತದೆ! ನೀವು ಆತನ ಮಾತಿನಂತೆ ಆ ಮುಹೂರ್ತಕ್ಕೆ ಲಗ್ನಮಾಡುವದನ್ನು ಬಿಟ್ಟದ್ದು ಬಹಳ ನೆಟ್ಟಗಾಯಿತು!” ಎಂದು ಹೇಳಿದರು! ಜ್ಞಾನಿಗಳು ಅಹಂಕಾರರಹಿತರೆಂಬ ಮಾತು ಸುಳ್ಳಲ್ಲ!

---

## ೩ ನೇ ವರ್ಷದ ತಪಶ್ಚರ್ಯೆ

# ೯ನೇ ಅಧ್ಯಾಯ—ತಪಶ್ಚರ್ಯದರೀತಿ



ಹೀಗೆ ಬಾಲಭುಜಂಗ ಯೋಗಿಯು ವಿಘ್ನಗಳನ್ನು ಲಕ್ಷಿಸದೆ ತಪಶ್ಚರ್ಯದ ಎರಡನೆಯ ಮೆಟ್ಟಲವನ್ನು ಏರಿ ಹೋಗಿ, ಮೂರನೆಯ ಮೆಟ್ಟಲವನ್ನು ಏರತೊಡಗಿದನು. ಆತನು ಮೊದಲನೆಯ ವರ್ಷ ಒಂದು ಹಗಲು, ಎರಡನೆಯ ವರ್ಷ ಎರಡು ಹಗಲು ಒಂದು ರಾತ್ರಿ ಮುಸುಕು ಹಾಕಿಕೊಂಡು ಏಕಾಸನದಿಂದ ಶೌಚ-ಮೂತ್ರಗಳ ಬಾಧೆಯಿಲ್ಲದೆ ತಪಶ್ಚರ್ಯ ಮಾಡಿದನೆಂಬ ಮಾತು ಈ ಮೊದಲೆ ಗೊತ್ತಾಗಿರುವದು. ಈಗ ಮೂರನೆಯ ವರ್ಷ ಮೂರು ಹಗಲು ಎರಡು ರಾತ್ರಿ ಮುಸುಕಿನಲ್ಲಿದ್ದು, ಚಲಿಸದೆ ಏಕಾಸನದಲ್ಲಿ ಕುಳಿತು ತಪಶ್ಚರ್ಯ ಮಾಡತೊಡಗಿದನು. ಆಗ ಆತನ ವಯಸ್ಸು ಹದಿನೇಳು ವರ್ಷದ್ದಾಗಿತ್ತು. ಆತನ ದೇಹವು ಅತ್ಯಂತಕೃಶವಾಗಿ, ಅದರಲ್ಲಿ ಕೇವಲ ಅಸ್ಥಿಚರ್ಮಗಳು ಮಾತ್ರ ಉಳಿದಿದ್ದವು. ಆತನ ಸುಂದರವಾದ ಕೂದಲುಗಳು ಉದ್ದ ಬೆಳೆದು, ನಿತ್ಯದ ತಣ್ಣೀರಸ್ನಾನದಿಂದ ಅವು ಜಡೆಗಟ್ಟಿ ಪೆಂಟೆಯಾಗಿ, ಆತನು ಕುಳಿತಾಗ ನೆಲಕ್ಕೆ ಎಳೆಯುತ್ತಿದ್ದವು! ಬಾಲಭುಜಂಗಯೋಗಿಯು ಕಾವಲಿಯಲ್ಲಿ ಸ್ನಾನಮಾಡುವಾಗ ತನ್ನ ಆ ಕೂದಲ ಪೆಂಟೆಯನ್ನು ತಲೆಯಮೇಲೆ ಮುಂದುಗಡೆಯಲ್ಲಿ ಚಲ್ಲಿಕೊಳ್ಳಲು, ಸರ್ಪಾಲಂಕೃತ ಶಿರಸ್ಸಿನ ಸಾಕ್ಷಾತ್ ಪರಶಿವನಂತೆ ಆತನು ತೋರುತ್ತಿದ್ದನು! ಆ ಚಲುವಚನ್ನಿಗ ಕುಮಾರನ ತಪ್ತಕಾಂಚನ ವರ್ಣದ ಸುಂದರ ಮುಖವನ್ನೂ, ಆತನ ಚಿಕ್ಕ ವಯಸ್ಸನ್ನೂ, ವೈರಾಗ್ಯದ ಸೂಚಕಗಳಾದ ಆತನ ಉಟ್ಟ ಹೊತ್ತ ಕೆಂಪು ಶಾಟಿಗಳನ್ನೂ, ಆತನ ಸುಮಧುರ ಕಂಠವನ್ನೂ, ಮುಗುಳು ನಗೆಯನ್ನೂ ಏಕೀಕರಿಸಿ ಮನಸ್ಸಿನಲ್ಲಿ ತಂದಾಗೆಲ್ಲ, ಶುಕಯೋಗಿ, ಧ್ರುವಕುಮಾರ ಇವರ ಸ್ಮರಣವು ಆಗದೆ ಇರುತ್ತಿ

ದ್ದಿಲ್ಲ! ಆ ಸುಂದರ ಬಾಲಮೂರ್ತಿ ಭುಜಂಗನ ಅಸ್ಥಿಪಂಜರಸದೃಶ ದೇಹ ವನ್ನು ನೋಡುವವರು ಮರಮರ ಮರುಗುತ್ತಿರಲು, ಅವರ ಕಣ್ಣೀರು ಗಳು ಉಮರುತ್ತಿದ್ದವು; ಆದರೆ ಆತನ ತೇಜಸ್ವಿಯಾದ ಸುಂದರ ಮುಖ ವನ್ನು ನೋಡಿದರೆ, ಅವರಿಗೆ ಪರಮಾನಂದವಾಗುತ್ತಿತ್ತು! ತಿಳಿದು ನೋಡಿ ದರೆ, ಇದು ಕಲಿಯುಗ! ಘೋರತಪಸ್ಸಿಗೆ ಬಾಧಕವಾದದ್ದು; ಬಾಲಭುಂ ಗನು ಗುರುಕುಲವಾಸದ ಗಂಧಕೂಡ ತಗಲದವನು; ಆತನ ಗೆಳೆಯ ರೆಂದರೆ, ಆಚಾರ-ವಿಚಾರಹೀನರಾದ ಕಗ್ಗ ದನಗಾಹಿಗಳು! ಇಂತಹ ಪ್ರತಿಕೂಲ ಸ್ಥಿತಿಯಲ್ಲಿ ನಮ್ಮ ಬಾಲಭುಜಂಗಯೋಗಿಯು, ಕೃತಯು ಗದ ಮಹಾ ತಪಸ್ವಿಗಳ ಚಿಕ್ಕ ಮಾದರಿಯನ್ನು ಲೋಕಕ್ಕೆ ತೋರಿಸಿ, ಲೋಕದ ಕಲಿಭಾವಕ್ಕೆ ಕೊಡಲಿಯ ಕಚ್ಚು ಹಾಕುತ್ತಿದ್ದದ್ದು, ಪರಮಹಂ ಸರ ಪ್ರಭಾವವೆಂತಲೇ ಹೇಳಬೇಕಾಗುವದು! ಆದ್ದರಿಂದಲೇ ಈ ಗಂಭೀರ ವಾದ ಚರಿತ್ರ ಗ್ರಂಥಕ್ಕೆ "ಕಲಿಕುಠಾರ" ಎಂಬ ಹೆಸರನ್ನು ಇಡ ಲಾಗಿದೆ!

## ೩ನೆಯ ವರ್ಷದ ಕೌತುಕದ ಸಂಗತಿಗಳು.

**ದ್ವಂದ್ವಸಹಿಷ್ಣುತೆ**—ಒಂದು ದಿನ ಬಾಲಭುಜಂಗಯೋಗಿಗಳು ತಮ್ಮ ವಾಡಿಕೆಯ ಕ್ರಮದಂತೆ ಮುಂಜಾನೆ ಸ್ನಾನಕ್ಕಾಗಿ ಕಾವಲಿಗೆ ಹೋಗಿ, ಇನ್ನು ಕಾವಲಿಯಲ್ಲಿ ಮುಣುಗುಹಾಕಬೇಕೆನ್ನುತ್ತಿರಲು, ಅವರ ಕಕ್ಕಂದಿರಾದ, ಅಂದರೆ ರಾಮದೀಕ್ಷಿತರ ಅಣ್ಣ ಯಜ್ಞೇಶ್ವರದೀಕ್ಷಿತರ ಮಕ್ಕಳಾದ ಚಂದ್ರಾಮದೀಕ್ಷಿತರು ಬಾಲಭುಜಂಗಯೋಗಿಗಳನ್ನು ಕುರಿತು—"ತಮ್ಮಾ, ಭುಜಂಗಾ, ಹೀಗೆ ಒಂದೇಸವನೆ ತಣ್ಣೀರುಮುಣು ಗಿದರೆ, ಜಡೆಯಲ್ಲಿ ಸೇರಿದ ನೀರಿನಿಂದ ನಿನ್ನ ದೇಹದ ಗತಿಯು ಏನಾಗ ಬೇಕಪ್ಪಾ! ಜಡೆಯನ್ನು ಒರಿಸಲಿಕ್ಕೆ ಬಂದೀತೇ? ಒರಿಸಿಕೊಳ್ಳುವ ತ್ರಾಣ ವಾದರೂ ನಿನಗೆ ಇರುವದೆಯೆ? ನಿನ್ನನ್ನು ಎರಡನೆಯವರು ಮುಟ್ಟು ವಹಾಗೆ ಇದ್ದಾರೆಯೆ? ಅಂದಬಳಿಕ ಹೀಗೆ ನೀರಿನಿಂದ ತಪಗಟ್ಟುವ ಜಡೆ ಯಿಂದ ನೀನು ಇನ್ನು ಮುಸುಕುಹಾಕಿಕೊಂಡು ಕುಳಿತುಕೊಳ್ಳುವದು ಧರ್ಮವಲ್ಲ. ಧರ್ಮವು ಶರೀರದಿಂದ ರಕ್ಷಿಸಲ್ಪಡತಕ್ಕದ್ದೆಂಬ ಮಾತನ್ನು,

ಅಂದರೆ ದೇಹವು ಸುರಕ್ಷಿತವಾಗಿರದಿದ್ದರೆ ಧರ್ಮವುನಡೆಯದೆಂಬ ಮಾತನ್ನು ನೀನು ನೆನಪಿನಲ್ಲಿಡತಕ್ಕದ್ದು. “ಶರೀರ ರಕ್ಷಿತೋಧರ್ಮಃ” ಎಂಬ ಉಕ್ತಿಯು ಪ್ರಸಿದ್ಧವಿರುವದು. ಧರ್ಮದಿಂದ ಶರೀರಪಾತಮಾಡಿಕೊಳ್ಳುವವನ ಧರ್ಮಾಚರಣೆಯು ನಿಜವಾದ ಧರ್ಮಾಚರಣೆಯೆನಿಸುವದಿಲ್ಲ; ಆದ್ದರಿಂದ ಇನ್ನು ಮೇಲೆ ನೀನು ತಲೆಯಮೇಲೆ ಸ್ನಾನಮಾಡದೆ, ಹೆಗಲಮೇಲೆ ಸ್ನಾನ ಮಾಡಬೇಕು. “ನಖಕೇಶಧಾರಣಾತ್ ಗಂಗಾಸ್ನಾನಫಲಂ” ಎಂದು ಧರ್ಮಶಾಸ್ತ್ರವು ಹೇಳುತ್ತಿರುವದು; ಆದ್ದರಿಂದ ಜಟಾ–ನಖಧಾರಿಯಾದ ನೀನು ತಲೆಯಮೇಲೆ ಸ್ನಾನಮಾಡದೆ ಕಂಠಸ್ನಾನಮಾಡಿದರೂ ನಿನಗೆ ಗಂಗಾಸ್ನಾನ ಫಲವು ಪ್ರಾಪ್ತವಾಗುವದು. ಇನ್ನುಮೇಲೆ ನೀನು ಶಿರಸ್ನಾನಮಾಡಬೇಡ ತಮ್ಮಾ ಭುಜಂಗಾ, ನೀನು ಹುಡುಗನಾದರೂ ಅತ್ಯಂತ ಪ್ರಭಾವಶಾಲಿಯೆಂಬ ಅನುಭವವು ನಮಗೆ ಬಂದದೆ. ಜಟಾಧಾರಿಗಳಾಗಿರಲು, ಅಖಂಡ ಎರಡು ವರ್ಷ ತಣ್ಣೀರುಮುಣುಗಿ ಈ ಪರಿಯ ತಪಶ್ಚರ್ಯಮಾಡಿದರೆ, ಸಾಮಾನ್ಯ ಜನರ ದೇಹವು ತಡೆಯಬಹುದೆ? ಅಪ್ಪಾ, ನೀನು ಯೋಗಭ್ರಷ್ಟನಿರುತ್ತೀ; ಮಹಾ ತಪಸ್ವಿಗಳಾದ ಪರಮಹಂಸರ ಕೃಪೆಯೂ ನಿನ್ನಮೇಲೆ ಇರುತ್ತದೆ; ಆದ್ದರಿಂದ ನೀನು ಈ ಸ್ಥಿತಿಯಲ್ಲಿಯೂ ದಿನಾಲು ತಣ್ಣೀರುಮುಣುಗಿ, ತಪಶ್ಚರ್ಯಮಾಡಬಹುದು; ಅಥವಾ ಯುಗಾಂತರದ “ಸೌಭರಿ” ಎಂಬ ಮುನಿಗಳಂತೆ ನೀರಲ್ಲಿ ಮುಣಗಿಕೊಂಡಿದ್ದಾದರೂ ನೀನು ತಪಶ್ಚರ್ಯಮಾಡಬಹುದು; ಆದರೆ ಇದು ಕಲಿಯುಗವು; ಯುಗಕ್ಕೆ ತಕ್ಕಂತೆ ಧರ್ಮಶಾಸ್ತ್ರವು ಆಚಾರಗಳನ್ನು ವಿಧಿಸುತ್ತದೆ; ಮೇಲೆ ನಾವು ಹಿರಿಯರು ನಿನಗೆ ಹೇಳುತ್ತೇವೆ; ಆದ್ದರಿಂದ ಯುಗಧರ್ಮವನ್ನು ಲಕ್ಷಿಸಿ, ನಮ್ಮ ಹಿರಿಯರ ಮಾತನ್ನು ನಡಿಸಿ, ಇಂದಿನಿಂದ ನೀನು ಶಿರಸ್ನಾನವನ್ನು ಮಾಡದೆ ಕಂಠಸ್ನಾನಮಾಡುತ್ತ ಹೋಗು.” ಎಂದು ಹೇಳಿದರು ಚಂದ್ರಾಮದೀಕ್ಷಿತರಲ್ಲಿ ಬಾಲಭುಜಂಗಯೋಗಿಗಳ ವಿಶ್ವಾಸಬಹಳ. ಹಿರಿಯರಾದ ಅವರ ಶಾಸ್ತ್ರಸಮ್ಮತವಾದ ಮಾತನ್ನು ನಡಿಸಿ, ಅಂದಿನಿಂದ ಆತನು ಶಿರಸ್ನಾನಮಾಡದೆ ಕಂಠಸ್ನಾನ ಮಾಡಹತ್ತಿದನು.

**ಜಮುಖಂಡಿಯ ಸಂಸ್ಥಾನಿಕರಾದ ಅಪ್ಪಾಸಾಹೇಬರು**— ಬಾಲಭುಜಂಗಯೋಗಿಗಳ ಮೂರನೆಯ ವರ್ಷದ ತಪಸ್ಸಿನ ಕೀರ್ತಿಯು ನಾಲ್ಕೂ ಕಡೆಗೆ ಪಸರಿಸತೊಡಗಿ, ಅದು ವರ್ತಮಾನಪತ್ರಗಳಲ್ಲಿಯೂ ಪ್ರಕಟವಾಗಹತ್ತಿತ್ತು; ಆದ್ದರಿಂದ ವಿಷಯ ವೈಭವದ ರಾಜಪುರುಷರ ಚಿತ್ತವೂ, ಬಾಲಭುಜಂಗಯೋಗಿಯ ತಪಸ್ಸಿನಿಂದ ಆಕರ್ಷಿತವಾಗಹತ್ತಿತು! ಸ್ವಾಮಿಗಳು ಮುಸುಕು ತೆಗೆಯುವ ದಿವಸ ಜನಸಮ್ಮರ್ದವು ಹೆಚ್ಚಾಗತೊಡಗಿತು; ಮಠದ ಬಾಗಿಲಲ್ಲಿ ಅಂಗಡಿಗಳು ಹೂಡತೊಡಗಿದವು, ಮಠದಲ್ಲಿ ಅನ್ನಸಂತರ್ಪಣದ ಮಾನವು ಬೆಳೆಯಿತು! ಹೀಗಿರುವಾಗ ಜಮುಖಂಡಿಯ ಸಂಸ್ಥಾನಿಕರಾದ ಅಪ್ಪಾಸಾಹೇಬರಿಗೆ ಸ್ವಾಮಿಗಳ ದರ್ಶನ ಮಾಡಿಕೊಳ್ಳಬೇಕೆಂಬ ಇಚ್ಛೆಯು ಉಂಟಾಯಿತು; ಆದರೆ ಅಪ್ಪಾ ಸಾಹೇಬರು ಸರ್ವಸಾಮಾನ್ಯ ಸಂಸ್ಥಾನಿಕರಿದ್ದಿಲ್ಲ, ಅವರು ಯೋಗಭ್ರಷ್ಟಸತ್ಪುರುಷರಾಗಿದ್ದರೆಂದು ಹೇಳಬಹುದು. ಆ ಬ್ರಾಹ್ಮಣ ಸಂಸ್ಥಾನಿಕರು ಅತ್ಯಂತ ಧರ್ಮಿಷ್ಠರು; ಪ್ರಜಾವತ್ಸಲರು, ದೇವರು-ಸತ್ಪುರುಷರು-ಬ್ರಾಹ್ಮಣರು ಇವರಲ್ಲಿ ಅತ್ಯಂತ ಶ್ರದ್ಧೆಯುಳ್ಳವರು; ರಾಜಕಾರಣ ಪಟುಗಳು; ಮಹಾತೇಜಸ್ವಿಗಳು; ಅತ್ಯಂತ ವಿಚಾರಪರರು ಆಗಿದ್ದರು! ಇಂತಹ ಅವರ ಚರಿತ್ರವು ಅತ್ಯಂತ ಮಾನನೀಯವಾಗಿದ್ದರೂ, ವಿಸ್ತಾರಭಯದಿಂದ ಅದನ್ನು ಮುಂದಿನ ಅಧ್ಯಾಯದಲ್ಲಿ ಸಂಕ್ಷೇಪದಿಂದ ಮಾತ್ರ ಕೊಡುವೆವು. ಬ್ರಹ್ಮಭಾವನೆಯಿಂದ ಅನ್ನದಾನಮಾಡುವ ವಿಷಯದಲ್ಲ ಅಪ್ಪಾಸಾಹೇಬರಂಥ ಸಂಸ್ಥಾನಿಕರು ಇನ್ನು ಮುಂದೆ ಆಗುವದು, ಅದರಲ್ಲಿಯೂ ಈಗಿನ ಭಾವನಾಹೀನ ಕಲಿಕಾಲದಲ್ಲಿ ಆಗುವದು ಅತ್ಯಂತ ದುರ್ಲಭವೆಂದು ಹೇಳಬಹುದು; ಆದರೂ ಅಪ್ಪಾಸಾಹೇಬರು ವ್ಯವಹಾರದಲ್ಲಿ ಅತ್ಯಂತ ಚಿಕಿತ್ಸಕರಾಗಿದ್ದರು; ತಮ್ಮ ಮನಸ್ಸಿನ ನಂಬಿಗೆಯಾದಹೊರತು ಅವರು ಯಾವದನ್ನೂ ಸಹಸಾ ನಂಬುತ್ತಿದ್ದಿಲ್ಲ; ಆದ್ದರಿಂದ ಲೋಕಾಪುರದ ಬಾಲಭುಜಂಗಯೋಗಿಗಳ ವಿಷಯದಲ್ಲಿ ಅವರ ಭಕ್ತಿಯು ಉತ್ಪನ್ನವಾಗಿದ್ದರೂ, ಸ್ವಾಮಿಗಳ ನಿಜವಾದ ಸ್ಥಿತಿಯನ್ನು ಕಣ್ಣುಮುಟ್ಟಿ ನೋಡಿ ಬರುವದಕ್ಕಾಗಿ ತಮ್ಮ ನಂಬಿಗೆಯ ಕಾರಕೂನನಾದ ಲಿಂಗೋಪಂತ ಪರಾಂಜಪೇ ಎಂಬ ಜಾಣನನ್ನು ಲೋಕಾಪುರಕ್ಕೆ ಕಳಿಸಿದರು.

ಈ ಕಲಿಯುಗವು ದಾಂಭಿಕವಾದದ್ದರಿಂದ, ಪ್ರತ್ಯಕ್ಷವಿದ್ದರೂ ಪ್ರಮಾಣಿಸಿ ನೋಡದೆ ವಿಚಾರವಂತರು ಯಾವದನ್ನೂ ನಂಬಲಾಗದು. ಅದರಂತೆ, ಅಪ್ಪಾಸಾಹೇಬರು ಕಾರಕೂನನನ್ನು ಲೋಕಾಪುರಕ್ಕೆ ಕಳಿಸಿದ್ದು ಯೋಗ್ಯವೇ ಸರಿ " ಇಂತಹ ಕಲಿಯುಗದಲ್ಲಿ ಈ ಬಗೆಯ ತಪಶ್ಚರ್ಯ ಮಾಡುವವರು ಇರಬಹುದೆ ?" ಎಂಬ ಸಂಶಯುವು ಅಪ್ಪಾಸಾಹೇಬರಂಥ ವಿಚಾರವಂತರಲ್ಲಿ ಉಂಟಾದದ್ದು ಸ್ವಾಭಾವಿಕವು. " ಹದಿನಾಲ್ಕು ವರ್ಷದ ಉಡಾಳಹುಡುಗನು ಅಕಸ್ಮಾತ್ ತಪಶ್ಚರ್ಯಕ್ಕೆ ಕುಳಿತುಕೊಳ್ಳುವದೆಂದರೇನು? ಆತನ ತಪಶ್ಚರ್ಯವು ಉತ್ತರೋತ್ತರ ಅಭಿವೃದ್ಧಿಹೊಂದುತ್ತಾ ಬಂದಿರುವದೆಂದರೇನು ? ಈ ಸಂಗತಿಯು ಸತ್ಯವಾದದ್ದಿರಬಹುದೆ? ಅಥವಾ ಇದರಲ್ಲಿ ಏನಾದರೂ ಮೋಸವಿರಬಹುದೇ ? " ಎಂಬ ವಿಚಾರವು ಅಪ್ಪಾಸಾಹೇಬರಂಥ ಚಿಕಿತ್ಸಕ ಸಂಸ್ಥಾನಿಕರಿಗೇ ಏಕೆ, ಎಂಥವರಿಗಾದರೂ ಉತ್ಪನ್ನವಾಗುವ ಸಂಭವವಿರುತ್ತದೆ, ಆದರೆ ಅಪ್ಪಾಸಾಹೇಬರು ಸತ್ಯ ಸಂಗತಿಗಳ ವಿಷಯದಲ್ಲಿ ಇಲ್ಲದ ಕುತರ್ಕಗಳನ್ನು ಕಲ್ಪಿಸಿ, ಸತ್ಯಸಂಗತಿಯನ್ನು ಅಸತ್ಯವೆಂದು ಸ್ಥಾಪಿಸಿ, ತಮ್ಮ ಅಹಂಕಾರದ ಪಾಂಡಿತ್ಯವನ್ನು ಮೆರಿಸುವ ನಾಸ್ತಿಕಶಿಖಾಮಣಿಗಳಾಗಿದ್ದಿಲ್ಲ; ಅವರು ಸತ್ಯಾಸತ್ಯಗಳ ವಿಮರ್ಶವನ್ನು ಆಸ್ತಿಕಭಾವದ ಶುದ್ಧಾಂತಃಕರಣದಿಂದ ಮಾಡಿ, ಸತ್ಯ ಸಂಗತಿಗಳಿಗೆ ತಲೆಬಾಗಿ, ಅಸತ್ಯಸಂಗತಿಗಳನ್ನು ಪರಿತ್ಯಜಿಸುವ ತೇಜಸ್ವಿ ಆಸ್ತಿಕ ಶಿಖಾಮಣಿಗಳಾಗಿದ್ದರು. ಅವರಲ್ಲಿ ಗುರುಶಿಷ್ಯಸಂಬಂಧವು ಅತ್ಯಂತ ಸೂಕ್ಷ್ಮವಾಗಿದ್ದು, ವೈದಿಕರ ಪತಿ—ಪತ್ನೀ ಸಂಬಂಧದಂತೆ ಅದು ಎಂದೂ ತಪ್ಪಿಸಿಕೊಳ್ಳಲಿಕ್ಕೆ ಬಾರದ್ದಾಗಿರುವದು. " ಕಾಡಿ ಕೂಡು, ಕೂಡಿ ಕಾಡಬೇಡ " ಎಂಬಂತೆ, ಲಗ್ನವಾಗುವ ಮೊದಲೇ ವೈದಿಕರು ವಧೂವರರ ಘಟಿತಾರ್ಥವನ್ನು, ಅಂದರೆ ನಾಡಿ, ಕೂಟ, ಗಣ ಮೊದಲಾದ ಸೂಕ್ಷ್ಮ ಸಂಗತಿಗಳನ್ನು ಪರೀಕ್ಷಿಸಬೇಕಾಗುವದು ; ಅದರಂತೆ ಗುರುಶಿಷ್ಯ ಸಂಬಂಧಮಾಡಿಕೊಳ್ಳಬೇಕೆನ್ನುವವರು, ಪರಸ್ಪರರ ಕುಲ—ಶೀಲ—ಆಚಾರ—ವಿಚಾರ—ವ್ಯವಹಾರ—ಜ್ಞಾನ—ಯೋಗ್ಯತೆ ಮೊದಲಾದವನ್ನು ವಿಚಾರಿಸಬೇಕಾಗುವದು. ಒಮ್ಮೆ ಲಗ್ನವಾಯಿತೆಂದರೆ ಮುಂದೆ ಗಂಡನು ಎಂಥ ಅಯೋ

ಗ್ಯನೇ ಇರಲಿ, ಹೆಂಡತಿಯು ಆಮರಣ ಆತನ ಸೇವೆ ಮಾಡಿದರೆ ಮಾತ್ರ ಆಕೆಯು ಸದ್ಗತಿಪಡೆಯುವಳು; ಹಾಗೆ ಮಾಡದೆ ಆಕೆಯು ಪತಿಯನ್ನು ಪರಿತ್ಯಜಿಸಿದರೆ, ಅಥವಾ ಆತನನ್ನು ಕಾಡಿದರೆ ನರಕಕ್ಕೆ ಇಳಿಯುವಳೆಂದು ವೈದಿಕಧರ್ಮವು ಶಾಸನ ಮಾಡುವದು! ಇದೇ ಮಾತು ಗುರುಶಿಷ್ಯರ ಸಂಬಂಧಕ್ಕೂ ಹತ್ತುವದು; ಆದ್ದರಿಂದಲೇ ವಿವೇಕಿಗಳಾದ ಅಪ್ಪಾಸಾಹೇಬರು ಮೇಲೆ ಹೇಳಿದಂತೆ ಲಿಂಗೋಪಂತ ಪರಾಂಜಪೆಯನ್ನು ಲೋಕಾಪುರಕ್ಕೆ ಸ್ವಾಮಿಗಳ ಪರೀಕ್ಷಾರ್ಥವಾಗಿ ಕಳಿಸಿದ್ದು ಯಥಾಯೋಗ್ಯವೇ ಸರಿ. ಇನ್ನು ಅಪ್ಪಾಸಾಹೇಬರ ಘನವಾದ ಯೋಗ್ಯತೆಯು ವಾಚಕರ ಮನಸ್ಸಿನಲ್ಲಿ ಬರುವದಕ್ಕಾಗಿ, ಅವರ ಸಂಕ್ಷಿಪ್ತ ಚರಿತ್ರವನ್ನು ಮುಂದಿನ ಅಧ್ಯಾಯದಲ್ಲಿ ಕೊಡುವೆವು.

---

## ೧೦ನೇ ಅಧ್ಯಾಯ

## ಜಮುಖಂಡಿಯ ಅಪ್ಪಾಸಾಹೇಬರು.

---

ಬಾಳಾಜಿ ಬಾಜಿರಾವ ಉರ್ಫ ನಾನಾಸಾಹೇಬ ಪೇಶವೆಯ ಕಾಲದಲ್ಲಿ, ಪರಶುರಾಮಭಾವು ಪಟವರ್ಧನ ಎಂಬ ಬ್ರಾಹ್ಮಣ ಸರದಾರನು, ರಣಶೂರನೂ, ಯುದ್ಧಕಲಾನಿಪುಣನೂ ಎಂದು ಪ್ರಸಿದ್ಧಿಪಡೆದಿದ್ದನ್ನು ಇತಿಹಾಸಜ್ಞರು ಬಲ್ಲರು. ಆತನ ಮಗ ಗೋಪಾಳರಾವ ಪಟವರ್ಧನ ಎಂಬವನು ಜಮುಖಂಡಿಯ ಸಂಸ್ಥಾನದ ಅಧಿಪತಿಯಾಗಿದ್ದನು; ಆದರೆ ಆತನ ಹೊಟ್ಟೆಯಲ್ಲಿ ಮಕ್ಕಳಾಗದ್ದರಿಂದ, ಆತನು ತಮ್ಮ ಪಟವ

ರ್ಥನ ಮನೆತನದೊಳಗಿನ ಗಣಪತಿಯೆಂಬ ಏಳುವರ್ಷದ ಹುಡುಗನನ್ನು ದತ್ತಕಮಾಡಿಕೊಂಡು, ಆತನಿಗೆ ರಾಮಚಂದ್ರರಾವ ಉರ್ಫ ಅಪ್ಪಾಸಾಹೇಬ ಎಂದು ಹೆಸರಿಟ್ಟನು. ಈ ಅಪ್ಪಾಸಾಹೇಬರೇ ನಮ್ಮ ಚರಿತ್ರ ನಾಯಕರು

ಗಣಪತಿಯ ಜನ್ಮವು ಆಸಂಗಿ ಎಂಬ ಗ್ರಾಮದಲ್ಲಿ ಸನ್ ೧೮೩೩ನೇ ಇಸವಿಯಲ್ಲಿ ಆಯಿತು. ಆತನ ಜನ್ಮಕುಂಡಲಿಯನ್ನು ನೋಡಿ ಜ್ಯೋತಿಷಿಗಳು—" ಈತನಿಗೆ ರಾಜಯೋಗವಿರುತ್ತದೆಂ" ದು ಹೇಳಿದ್ದರಲ್ಲದೆ, ಒಬ್ಬ ಮುದುಕನಾದ ಫಕೀರನು ತನಗೆ ಭಿಕ್ಷೆಹಾಕಬಂದ ಗಣಪತಿಯ ಮುಖವನ್ನು ದಿಟ್ಟಿಸಿನೋಡಿ, ಆತನ ತಂದೆಯಾದ ತಾತ್ಯಾಸಾಹೇಬರನ್ನು ಕುರಿತು—" ಈ ಹುಡುಗನು ದೊಡ್ಡ ತಪಶ್ಚರ್ಯಮಾಡಿ ಬಂದಿರುವದರಿಂದ, ಈತನು ಸ್ವಲ್ಪದಿನಗಳಲ್ಲಿ ರಾಜನಾಗಿ ಬಹಳ ಕೀರ್ತಿಯನ್ನು ಸಂಪಾದಿಸುವನು" ಎಂದು ಭವಿಷ್ಯಹೇಳಿದ್ದನಂತೆ. ಈ ಎರಡು ಪೂರ್ವಸೂಚನೆಗಳಂತೆ ಗಣಪತಿಯು ಜಮುಖಂಡಿಯ ಸಂಸ್ಥಾನಕ್ಕೆ ದತ್ತಕವಾಗಿ ಅಪ್ಪಾಸಾಹೇಬನೆಂದು ಕರೆಸಿಕೊಂಡದ್ದರಿಂದ, ಆತನ ತಂದೆ ತಾತ್ಯಾಸಾಹೇಬರಿಗೆ ಪರಮಾನಂದವಾದದ್ದು ಸ್ವಾಭಾವಿಕವು.

ಹೀಗೆ ಏಳುವರ್ಷದವರಿರುವಾಗ ಅಪ್ಪಾಸಾಹೇಬರು ಜಮುಖಂಡಿಯ ಮಾಲಕರಾಗಲು, ಸಾರ್ವಭೌಮ ಇಂಗ್ಲಿಷಸರಕಾರದ ಒಪ್ಪಿಗೆಯಿಂದ, ಅವರ ದತ್ತಕತಾಯಿ ರಾಧಾಬಾಯಿಯೆಂಬವರು, ತಮ್ಮ ಯಜಮಾನರಾದ ಗೋಪಾಳರಾಯರ ಕಾಲದ ಕಾರಭಾರಿಗಳಸಹಾಯದಿಂದ ಸಂಸ್ಥಾನದ ಕಾರಭಾರವನ್ನು ನಡಿಸಹತ್ತಿದರು. ಅವರ ರಾಜ್ಯಕಾರಭಾರವು ಏಳೆಂಟುವರ್ಷಸಾಗಿರಲು, ಕಾರಭಾರಿಗಳ ಅಯೋಗ್ಯನಡತೆಯು ಸಾರ್ವಭೌಮಸರಕಾರಕ್ಕೆ ಗೊತ್ತಾಗಿ, ಕಾರಭಾರಿಯ ಅಪರಾಧಕ್ಕಾಗಿ ಆತನಿಗೆ ಶಿಕ್ಷೆಯಾದದ್ದಲ್ಲದೆ, ರಾಧಾಬಾಯಿಯವರ ರಾಜ್ಯಕಾರಭಾರವು ಸಾರ್ವಭೌಮಸರಕಾರದ ಅಧೀನವಾಯಿತು! ಆಗ ಆ ಇಂಗ್ಲಿಷಸರಕಾರದವರು ರಾಧಾಬಾಯಿಯವರಿಗೆ ಆರುಸಾವಿರರೂಪಾಯಿಗಳ ವಾರ್ಷಿಕಸಂಬಳವನ್ನು ಕುಮಾಡಿಕೊಟ್ಟು, ವಿನಾಯಕ ಕೃಷ್ಣಪಂಡಿತ ಎಂಬ ಹೊಸ ಕಾರಭಾರಿ

ಯನ್ನು ಗಲಗಲೀ ಇಸವಿಯಲ್ಲಿ ನಿಯಮಿಸಿ, ಆತನ ಮುಖಾಂತರ ರಾಜಕಾರಭಾರವನ್ನು ನಡಿಸತೊಡಗಿದರು. ಈ ಬದಲಾವಣೆಗೆ ಅಪ್ಪಾ ಸಾಹೇಬರೇ ಕಾರಣರೆಂದು ಸ್ವಾರ್ಥಪರಾಯಣನೀಚರು ಸುಳ್ಳು ಸುಳ್ಳೇ ರಾಧಾಬಾಯಿಯವರ ಕಿವಿಯಊದಿದ್ದರಿಂದ, ಸರಳಸ್ವಭಾವದ ಆ ಹೆಣ್ಣು ಮಗಳು ಮಗನಮೇಲೆ ನಿಷ್ಕಾರಣಸಿಟ್ಟಾಗಿ ಜಮಖಂಡಿಯನ್ನು ಬಿಟ್ಟು ಅದೇ ತಾಲೂಕಿನೊಳಗಿನ ಕಲ್ಲೊಳ್ಳಿ ಎಂಬ ಗ್ರಾಮದಲ್ಲಿ ತನ್ನ ಪರಿವಾರ ದೊಡನೆ ಇರತೊಡಗಿದಳು.

ಮುಂದೆ ನಾಲ್ಕುವರ್ಷಗಳಮೇಲೆ ಅಪ್ಪಾಸಾಹೇಬರು ವಯಸ್ಸಿಗೆ ಬರಲು, ಸಾರ್ವಭೌಮಸರಕಾರದವರು ಅವರಿಗೆ ಸಂಸ್ಥಾನದ ಯಾವತ್ತು ಅಧಿಕಾರವನ್ನು ಕೊಟ್ಟರು. ಹೀಗೆ ಅಪ್ಪಾಸಾಹೇಬರೇ ಸ್ವತಂತ್ರವಾಗಿ ರಾಜ್ಯಕಾರಭಾರನಡಿಸಹತ್ತಿದ್ದನ್ನು ನೋಡಿ, ರಾಧಾಬಾಯಿಯವರಸ್ವಾರ್ಥ ಪರ ಪರಿವಾರಕ್ಕೆ ಅಸೂಯೆಯು ಉತ್ಪನ್ನವಾಯಿತು. ಆ ಪರಿವಾರದ ವರು ರಾಧಾಬಾಯಿಯನ್ನು ಕುರಿತು—“ಇನ್ನುಮೇಲೆ ನೀವು ಜಮ ಖಂಡಿಯ ಸಂಸ್ಥಾನದಲ್ಲಿದ್ದರೆ, ಅಪ್ಪಾಸಾಹೇಬರಿಂದ ನಿಮಗೆ ಪರಿಪರಿಯ ತೊಂದರೆಗಳುಂಟಾಗುವವು” ಎಂದು ಮತ್ತೆ ಬೋಧಿಸಲು, ರಾಧಾಬಾಯಿ ಯವರು ತಮ್ಮ ಪರಿವಾರದೊಡನೆ ಕಲ್ಲೊಳ್ಳಿಯಿಂದ ಹೊರಟು, ಖಾಲಸಾ ದೊಳಗಿನ ಹಿಪ್ಪರಿಗಿ ಎಂಬ ಗ್ರಾಮಕ್ಕೆ ಹೋಗಿ ಅಲ್ಲಿ ಇರತೊಡಗಿದರು. ಆಗ ಅಪ್ಪಾಸಾಹೇಬರು ಅವರ ಗೊಡವಿಗೆ ಹೋಗದೆ, ತಮ್ಮ ರಾಜ್ಯಕಾರ ಭಾರವನ್ನು ನಡಿಸತೊಡಗಿದರು. ಅಪ್ಪಾಸಾಹೇಬರು ಅತ್ಯಂತ ಬುದ್ಧಿ ಶಾಲಿಗಳಿದ್ದು, ತಕ್ಕಮಟ್ಟಿಗೆ ವೈದಿಕಶಿಕ್ಷಣವನ್ನು ಪಡೆದಿದ್ದರಲ್ಲದೆ, ಮರಾ ಠಿ, ಸಂಸ್ಕೃತ, ಕನ್ನಡ, ಇಂಗ್ಲಿಷ ಭಾಷೆಗಳ ಶಿಕ್ಷಣವನ್ನು ಚನ್ನಾಗಿ ಪಡೆ ದಿದ್ದರು. ಯುದ್ಧ—ಗಾಯನ—ಸಿಲ್ಪ ಮೊದಲಾದ ಹಲವು ಕಲೆಗಳ ಪರಿ ಚಯವೂ ಅವರಿಗೆ ಇದ್ದಿತು ; ಅಲ್ಲದೆ, ಹಲವು ಮಾರ್ಗದಿಂದ ರಾಜಕೀಯ ವಿಷಯದ ಜ್ಞಾನವನ್ನು ಅವರು ಸಂಪಾದಿಸಿದ್ದರು ; ಆದ್ದರಿಂದ ಅವರು ಐದುವರ್ಷ ಸುಸೂತ್ರವಾಗಿ ರಾಜ್ಯಕಾರಭಾರವನ್ನು ಮಾಡಿದರು ; ಆದರೆ ಅಕಸ್ಮಾತ್ ಆಕಾಶದಕೊಡಲಿಯು ತಲೆಯಮೇಲೆ ಬಿದ್ದಂತೆ, ಅಪ್ಪಾಸಾಹೇ ಬರಮೇಲೆ ಒಂದು ದೊಡ್ಡಗಂಡಾಂತರವು ಬಂದಿತು !

ಸನ್ ೧೮೫೭ನೇ ಇಸವಿಯಲ್ಲಿ ನಾನಾಸಾಹೇಬನು ಉತ್ತರ ಹಿಂದುಸ್ಥಾನದಲ್ಲಿ ಬಂಡಾಯವೆಬ್ಬಿಸಿದ್ದು ಸುಪ್ರಸಿದ್ಧವಷ್ಟೆ? ಆ ಬಂಡಾಯದಸುಂಕವು ಹಬ್ಬುತ್ತ ಹಬ್ಬುತ್ತ ದಕ್ಷಿಣ ಹಿಂದುಸ್ಥಾನಕ್ಕೂ ಬಂದಿತು. ಆಗ ಅಪ್ಪಾಸಾಹೇಬರು, ತಮ್ಮ ಹಾಗು ತಮ್ಮ ಪ್ರಜೆಗಳ ಸುರಕ್ಷಿತತೆಗಾಗಿ ಕೋಟೆಯ ಸುವ್ಯವಸ್ಥೆಮಾಡಿ, ಬಂದೋಬಸ್ತಿಗಾಗಿ ಹೆಚ್ಚು ಸೈನಿಕರನ್ನು ಇಡಲು, ಅದೇ ಸರಕಾರದ ಸಂಶಯಕ್ಕೆ ಕಾರಣವಾಗಿ, ಅಪ್ಪಾಸಾಹೇಬರು, ಅಪರಾಧಿಗಳಾದರು! ಆಗ ಸರಕಾರದವರು ಜಮಖಂಡಿಯ ಕೋಟೆಯ ಗೋಡೆಗಳನ್ನು ನಡನಡುವೆಕೆಡವಿ, ನಾಲ್ಕೂಕಡೆಗೆ ಹಾದಿಗಳನ್ನು ಮಾಡಿದ್ದಲ್ಲದೆ, ಅಪ್ಪಾಸಾಹೇಬರನ್ನು ಸೆರೆಹಿಡಿದು, ಅವರನ್ನು ಮೊದಲು ಬೆಳಗಾವಿಗೆ, ಆಮೇಲೆ ವೆಂಗುರ್ಲೆಗೆಕಳಿಸಿ, ಜಮಖಂಡಿಯ ಖಜಾನೆಯನ್ನೂ ವಸ್ತ್ರಒಡಿವೆಗಳನ್ನು ಜಪ್ತಮಾಡಿ ತೆಗೆದುಕೊಂಡು ಹೋದರು! ಮುಂದೆ ಅಪ್ಪಾಸಾಹೇಬರ ವಿಚಾರಣೆನಡೆದು, ಅವರ ಮೇಲೆ ತಪ್ಪು ಹೊರಲಿಕ್ಕೆ ಪುರಾವೆಗಳು ಇಲ್ಲದಾದವು. ಅಷ್ಟರಲ್ಲಿ ನರಗುಂದದ ಬಂಡಾಯವು ಏಳಲು, ಅಪ್ಪಾಸಾಹೇಬರ ವಿಚಾರಣೆಯು ಹಿಂದಕ್ಕೆಬಿದ್ದಿತು. ಮುಂದೆ ನ್ಯಾಯಬುದ್ಧಿಯ ಇಂಗ್ಲಿಷಸರಕಾರದ ಸಂಶಯವು ಹೋಗದಿದ್ದರೂ, ಸಾಕ್ಷಿಪುರಾವೆಗಳ ಅಭಾವದಮೂಲಕ ಸರಕಾರದವರು ಔದಾರ್ಯದಿಂದ ಅಪ್ಪಾಸಾಹೇಬರನ್ನು ನಿರಪರಾಧಿಗಳೆಂದು ನಿರ್ಣಯಿಸಿ, ಅವರ ಸಂಸ್ಥಾನವನ್ನೂ, ಅವರ ಖಜಾನೆಯನ್ನೂ, ಅವರ ವಸ್ತ್ರ ಒಡವೆಗಳನ್ನೂ ಅವರಿಗೆ ತಿರುಗಿಕೊಟ್ಟರು!

ಹೀಗೆ ಇಂಗ್ಲಿಷ ಸರಕಾರದ ನ್ಯಾಯಬುದ್ಧಿಯಮೂಲಕ, ಹಾಲಿದ್ದಷ್ಟು ಹಾಲಾಗಿ ಅಪ್ಪಾಸಾಹೇಬರು ಪುನಃ ಸಂಸ್ಥಾನದ ಅಧಿಪತಿಗಳಾಗಿ ಬರಲು, ಅವರ ಪರಿವಾರಕ್ಕೂ, ಅವರ ಪ್ರಜೆಗಳಿಗೂ ಪರಮಾನಂದವಾಯಿತು! ತಮ್ಮ ಸತ್ಯಸ್ವರೂಪವು ಸರಕಾರದ ನಿದರ್ಶನಕ್ಕೆ ಬರಲಿಕ್ಕೆ ತಮ್ಮ ಮೇಲಿರುವ ಈಶ್ವರಕೃಪೆಯೇ ಕಾರಣವೆಂದು ಅಪ್ಪಾಸಾಹೇಬರ ಭಾವನೆಯಾಗಿ, ಸ್ವಾಭಾವಿಕವಾಗಿಯೇ ಇದ್ದ ಅವರ ಭಾವಿಕತನವು ಮತ್ತಿಷ್ಟು ಹೆಚ್ಚಿತು. ಹೀಗೆ ಅಪ್ಪಾಸಾಹೇಬರ ಭಾವಿಕತನವು ಹೆಚ್ಚಲಿಕ್ಕೆ ಬೇರೆ ಒಂದು ಕಾರ

ಣವೂ ಇದ್ದಿತು. ಹಿಂದಕ್ಕೆ ಒಬ್ಬ ಸಿದ್ಧಪುರುಷನು ಕರಬೂಜಿಯ ಹಣ್ಣಿನಷ್ಟು ದೊಡ್ಡದಾದ ಒಂದು ಬಾಣವನ್ನು ಅಪ್ಪಾಸಾಹೇಬರಿಗೆ ಕೊಟ್ಟು— “ನೀನು ನಿತ್ಯ ಇದನ್ನು ಪೂಜಿಸುತ್ತ ಹೋದರೆ, ಮುಂದೆ ನೀನು ಒಂದು ದೊಡ್ಡ ಸಂಕಟದಿಂದ ಮುಕ್ತನಾಗುವೆ.” ಎಂದು ಹೇಳಿದ್ದನಂತೆ! ಅದರಂತೆ ಅಪ್ಪಾಸಾಹೇಬರು ಪ್ರವಾಸದಲ್ಲಿ ಕೂಡ ತಮಗೆ ಎಷ್ಟು ತೊಂದರೆಯಾದರೂ, ಆ ಬಾಣವನ್ನು ಸಂಗಡ ತಕ್ಕೊಂಡು ಹೋಗಿ ಅದನ್ನು ನಿತ್ಯ ಪೂಜಿಸುತ್ತ ಬಂದಿದ್ದರು. ಅವರ ಈ ಭಾವಿಕತನದ ಕೃತಿಯೇ ಅವರ ಮುಕ್ತತೆಗೆ ಕಾರಣವಾಯಿತೆಂದು ಹೇಳಬಹುದು. ಹೀಗೆ ಅಪ್ಪಾಸಾಹೇಬರು ಆ ಶಿವಬಾಣದ ಪೂಜೆಯಿಂದ ಬಂಧಮುಕ್ತರಾಗಿ ರಾಜ್ಯವಾಳಹತ್ತಿದ ಬಳಿಕ, ಆ ಬಾಣದ ಪ್ರತಿಷ್ಠಾಪನೆಗಾಗಿ ಜಮಖಂಡಿಯ ಕೋಟೆಯಲ್ಲಿ ಒಂದು ಸುಂದರ ದೇವಾಲಯವನ್ನು ಬಹಳ ಹಣವೆಚ್ಚಮಾಡಿ ಕಟ್ಟಿಸಿ, ಆ ಮಂದಿರದಲ್ಲಿ ಆ ಬಾಣದ ಪ್ರತಿಷ್ಠಾಪನೆಮಾಡಿ, ಅದಕ್ಕೆ “ಉಮಾರಾಮೇಶ್ವರ” ಎಂಬ ಹೆಸರನ್ನು ಇಟ್ಟರು. ಆ ಉಮಾರಾಮೇಶ್ವರನ ನಿತ್ಯಪೂಜೆ, ಶಿವರಾತ್ರಿ ಮೊದಲಾದ ಬೇರೆ ಬೇರೆ ಕಾಲಗಳಲ್ಲಿ ಆಗುವ ಉತ್ಸವಗಳು ಇವುಗಳ ವೆಚ್ಚಕ್ಕಾಗಿ ಅಪ್ಪಾಸಾಹೇಬರು ಹದಿನಾಲ್ಕು ಸಾವಿರದ ಹತ್ತೊಂಬತ್ತು ರೂಪಾಯಿಗಳ ವಾರ್ಷಿಕ ನೇಮಣೂಕು ಮಾಡಿ ಕೊಟ್ಟರು.

ದುಷ್ಟಜನರು ಸ್ವಾರ್ಥಮೂಲಕ ರಾಧಾಬಾಯಿ ಸಾಹೇಬರವರಿಗೆ ಇಲ್ಲದ್ದೊಂದು ಹೇಳಿ ಅಪ್ಪಾಸಾಹೇಬರ ವಿಷಯವಾಗಿ ಅವರ ಮನಸ್ಸು ಕೆಡಿಸಿದ್ದರೆಂದು ಹಿಂದೆ ಹೇಳಿದೆಯಷ್ಟೆ? ಆದರೆ ಮಾತೃಭಕ್ತರಾದ ಅಪ್ಪಾಸಾಹೇಬರು ಅಲ್ಪ ಸರಂಜಾಮದೊಡನೆ ಸ್ವತಃ ಹಿಪ್ಪರಿಗೆಗೆ ಹೋಗಿ ಮಾತೃದೇವತೆಯ ಚರಣಕ್ಕೆರಗಿ, ತನ್ನ ಅಪರಾಧವೇನಿದ್ದರೂ ಕ್ಷಮಿಸಿ, ಜಮಖಂಡಿಗೆ ಬಂದು ನನ್ನ ಸೇವೆಯನ್ನು ಸ್ವೀಕರಿಸಲೇಬೇಕೆಂದು ಪ್ರಾರ್ಥಿಸಿ, ತಾಯಿಯ ಸನ್ನಿಧಿಯಲ್ಲಿ ಜಡೆಯೂರಿ ಕುಳಿತುಬಿಟ್ಟರು! ಆಗ ರಾಧಾಬಾಯಿಸಾಹೇಬರವರ ಮನಸ್ಸು ಕರಗಿ ಅವರ ತಪ್ಪು ತಿಳುವಳಿಕೆಗಳು ದೂರವಾಗಲು, ಅವರು ಅಪ್ಪಾಸಾಹೇಬರಿಂದ ತಮ್ಮ ಕೆಲವು ಇಚ್ಛೆಗಳನ್ನು

ಪೂರ್ಣಮಾಡುವಬಗ್ಗೆ ವಚನಪಡೆದದ್ದಲ್ಲದೆ, ಅಪ್ಪಾಸಾಹೇಬರ ಹೇಳಿಕೆಯಂತೆ ಇಂಗ್ಲಿಷ ಸರಕಾರಕ್ಕೆ—"ನಮ್ಮ ತಾಯಿಮಕ್ಕಳ ವಿತುಷ್ಟತೆಯು ದೂರವಾಯಿತೆಂ"ಬರ್ಥದ ಥೈಲಿಯನ್ನು ಬರೆದು ಮಗನೊಡನೆ ಜಮಖಂಡಿಗೆ ಹೊರಟರು. ಆಗ ಅಪ್ಪಾಸಾಹೇಬರಿಗೆ ಪರಮಾನಂದವಾಗಿ, ತಾಯಿಯನ್ನು ಸಮಾರಂಭದಿಂದ ಅರಮನೆಗೆ ಕರತಂದರು. ಅಪ್ಪಾಸಾಹೇಬರಿಗೆ ನಾಲ್ವರು ಹೆಂಡಿರಾದರೂ ಅವರಿಗೆ ಗೃಹಸೌಖ್ಯವು ಉಂಟಾಗಲಿಲ್ಲವೆಂತಲೇ ಹೇಳಬಹುದು ಅವರಿಗೊಬ್ಬ ಗಂಡುಮಗನು ಹುಟ್ಟಿದರೂ, ಆತನು ಹುಟ್ಟಿದ ಕೆಲವು ತಿಂಗಳಲ್ಲಿಯೇ ಕಾಲವಾದನು! ಅವರಿಗೆ ಮೊದಲು ಒಬ್ಬ ಹೆಣ್ಣುಮಗಳು ಹುಟ್ಟಿದ್ದು, ಆಕೆಯಿಂದ ಅವರು ಮೊಮ್ಮಕ್ಕಳನ್ನು ಕಂಡಿದ್ದರೂ, ಇರುವತನಕ ಆ ತಂದೆ ಮಕ್ಕಳಲ್ಲಿ ಪ್ರೇಮವಿರದೆ, ಆ ಹೆಣ್ಣುಮಗಳು ಅಪ್ಪಾಸಾಹೇಬರ ಮುಂದೆಯೇ ತೀರಿಕೊಂಡಳು.

ಹೀಗಿದ್ದೂ ಅಪ್ಪಾಸಾಹೇಬರು ರಾಜ್ಯಕಾರಭಾರದಲ್ಲಾಗಲಿ, ಸಾರ್ವಜನಿಕಹಿತದ ಕೆಲಸಗಳ ವಿಷಯದಲ್ಲಾಗಲಿ, ಧರ್ಮಕೃತ್ಯಗಳಲ್ಲಾಗಲಿ ಎಷ್ಟುಮಾತ್ರವೂ ದುರ್ಲಕ್ಷ್ಯಮಾಡುತ್ತಿದ್ದಿಲ್ಲ. ಅಪ್ಪಾಸಾಹೇಬರು ಜಾತ್ಯಾ ಚಟುವಟಿಕೆಯ ಸ್ವಭಾವದವರೂ, ತೀಕ್ಷ್ಣಬುದ್ಧಿಯವರೂ ಇದ್ದು, ಅವರಿಗೆ ಸಂಸ್ಥಾನದ ಸಂಬಧದ ನಡತೆ ನಡಾವಳಿಗಳ ಸಣ್ಣಪುಟ್ಟಸಂಗತಿಗಳು ಕೂಡ, ಆಗಿನ ಹಳೆಯ ಜನರಿಂದ ಪೂರಾ ಗೊತ್ತಾಗಿದ್ದವು. ಅಲ್ಲದೆ, ಅವರು ಉತ್ತಮ ಶಿಕ್ಷಣವನ್ನೂ ಪಡೆದಿದ್ದರು; ಆದ್ದರಿಂದ ಆ ಕರ್ತೃತ್ವಶಾಲಿಗಳು ರಾಜ್ಯಕಾರಭಾರದಲ್ಲಿ ಒಂದೊಂದೇ ತಿದ್ದುಪಡೆಮಾಡಿದರು. ಇವರು ಅತ್ಯಂತ ಸ್ವಾಭಿಮಾನಿಗಳು, ಅತ್ಯಲ್ಪಅಪಮಾನವಾದರೂ ಇವರಿಗೆ ತಡೆಯುತ್ತಿದ್ದಿಲ್ಲ. ಒಮ್ಮೆ ತಮ್ಮ ಸಂಸ್ಥಾನದ ಅಪರಾಧಿಗಳನ್ನು ಶಿಕ್ಷೆ ಭೋಗಿಸುವದಕ್ಕಾಗಿ ಏಜಂಟರು ಕೊಲ್ಲಾಪುರದ ಸೆರೆಮನೆಗೆ ಕಳಿಸಲು, ಅಪ್ಪಾಸಾಹೇಬರಿಗೆ ಅಪಮಾನಕರವಾಗಿ ತೋರಿ, ಮೇಲಿನತನಕ ಕೆಲಸ ನಡಿಸಿ, ಆ ಅಪರಾಧಿಗಳನ್ನು ತಮ್ಮ ಜಮಖಂಡಿಯ ಸೆರೆಮನೆಗೆ ತರಿಸಿಕೊಂಡರು! ಅಪ್ಪಾಸಾಹೇಬರು ರಾಮತೀರ್ಥದಲ್ಲಿರಹತ್ತಿದ ಬಳಿಕ, ಇಂಗ್ಲಿಷಸರಕಾರದವರು ಈ ಮೊದಲೆ ಕೆಡವಿಸಿದ್ದಕೋಟೆಯ ಗೋಡೆ

ಗಳನ್ನು ಪುನಃಕಟ್ಟಿಸಿ, ಕೋಟೆಗೆ ಶೋಭೆಯನ್ನುಂಟು ಮಾಡಿದರು; ಮತ್ತು ಕೋಟೆಯ ಕಂದಕವನ್ನು ಹುಗಿಸಿ, ಜನರ ವಸತಿಗೆ ಅನುಕೂಲ ಮಾಡಿಕೊಟ್ಟರು. ಶ್ರೀಮಂತ ಅಪ್ಪಾಸಾಹೇಬರು ತಮ್ಮ ಆಳಿಕೆಯ ನಲವತ್ತುನಾಲ್ಕುವರ್ಷಗಳಲ್ಲಿ ಸಾರ್ವಜನಿಕ ಕೆಲಸಗಳಿಗಾಗಿ, ದುಷ್ಕಾಳ ನಿವಾರಣಾರ್ಥವಾಗಿ, ದಾನಧರ್ಮಗಳಿಗಾಗಿ, ಇಮಾರತು ದೇವಮಂದಿರಾದಿಗಳನ್ನು ಕಟ್ಟಿಸುವದಕ್ಕಾಗಿ, ಅನ್ನದಾನಕ್ಕಾಗಿ ಇನ್ನೂ ಇಂತಹ ಹಲವು ಸತ್ಕಾರ್ಯಗಳಿಗಾಗಿ ಲಕ್ಷಾಂತರ ರೂಪಾಯಿಗಳನ್ನು ವೆಚ್ಚಮಾಡಿದರೂ, ಅವರಿಗೆ ಒಂದು ಪೈಕೂಡ ಸಾಲವಿದ್ದಿಲ್ಲ! ಅವರ ಅಂತಕಾಲದಲ್ಲಿ ಅವರ ಖಾಸಗಿಯ ಸಿಲಕು ೨೧೩೪೯೩ ರೂಪಾಯಿ, ದೇವಸ್ಥಾನಗಳ ಸಿಲಕು ೪೩೦೪೪ ರೂಪಾಯಿ ೬ ಆಣೆ ೧|| ಪೈ, ದವಲತ್ತಿನ ಸಿಲಕು ೩೭೯೧೬೫ ರೂಪಾಯಿ ೧೦ ಆಣೆ ಎರಡು ಪೈ ಹೀಗೆ ಒಟ್ಟು ೬೩೫೭೦೩ ರೂಪಾಯಿ ಎಂಟುಆಣೆ ಎಂಟುವರಿ ಪೈ ಸಿಲಕು ಇದ್ದಿತು ಇದರಿಂದ ಅಪ್ಪಾಸಾಹೇಬರ ಕರ್ತೃತ್ವಶಕ್ತಿಯೂ, ಸುವ್ಯವಸ್ಥೆಯೂ, ಜಾಣತನವೂ ಚನ್ನಾಗಿ ವ್ಯಕ್ತವಾಗಿ, ಅವರದೈವಶಾಲಿತ್ವವೂ ಒಡೆದು ಕಾಣಿಸುವದು!

**ಧರ್ಮಕೃತ್ಯಗಳು**— ಈಮೊದಲೆ ಜಮಖಂಡಿಯ ಕೋಟೆಯಲ್ಲಿ ಅಪ್ಪಾಸಾಹೇಬರು ಶ್ರೀಉಮಾರಾಮೇಶ್ವರ ದೇವಸ್ಥಾನವ ಕಟ್ಟಿಸಿ, ಅದರವಿನಿಯೋಗದ ಉತ್ತಮ ವ್ಯವಸ್ಥೆಮಾಡಿದ್ದನ್ನು ಹೇಳಿದೆಯಷ್ಟೆ? ಅದರಂತೆ ರಾಮತೀರ್ಥದಲ್ಲ ಮೂವತ್ತೆರಡು ಲಕ್ಷರೂಪಾಯಿ ವೆಚ್ಚಮಾಡಿ ಸುಂದರಮಂದಿರಗಳನ್ನೂ, ಹಲವು ದೇವಸ್ಥಾನಗಳನ್ನೂ ಕಟ್ಟಿಸಿದ್ದನ್ನು ಮೇಲೆ ಹೇಳಿದೆ ಅಲ್ಲದೆ, ಸಂಸ್ಥಾನದಿಂದ ಪುರಾತನವಾಗಿ ನಡೆಯುತ್ತ ಬಂದಿದ್ದ ಶ್ರೀಗಣಪತಿಯ ಉತ್ಸವವನ್ನು ಅಪ್ಪಾಸಾಹೇಬರು ಬಹುವಿಜೃಂಭಣೆಯಿಂದ ಮಾಡುತ್ತಿದ್ದದ್ದರಿಂದ, ಕಾಶಿಯಿಂದಲೂ, ಬೇರೆ ಮಹಾಸ್ಥಾನಗಳಿಂದಲೂ ದೊಡ್ಡ ದೊಡ್ಡ ವಿದ್ವಾಂಸ ಬ್ರಾಹ್ಮಣರು ಬಂದು ಸನ್ಮಾನಿತರಾಗಿ, ವ್ಯವಸ್ಥಿತವಾದ ಅತ್ಯಾದರದ ಸುಗ್ರಾಸಭೋಜನದಿಂದ ಸಂತುಷ್ಟರಾಗುತ್ತಿದ್ದರಲ್ಲದೆ, ಅವರೂ, ಹಲವು ಕಲಾವಂತರೂ ದೊಡ್ಡಸಂಭಾವನೆಗಳಿಂದ ಸಂಭಾವಿಸಲ್ಪಡುತ್ತಿದ್ದರು. ಈಕಾರ್ಯಗಳಲ್ಲದೆ ಅಪ್ಪಾಸಾಹೇಬರು

ಪಾಶುಪತಾಸ್ತ್ರದ ಪುರಶ್ಚರಣ, ಶತಚಂಡಿ ಅನುಷ್ಠಾನ ಮೊದಲಾದ-ನಾವಿ ರಾರು ರೂಪಾಯಿಗಳ ವೆಚ್ಚದ ಧರ್ಮಕಾರ್ಯಗಳನ್ನು ಮಾಡಿಸಿದರು. ಇವರಕಾಲದಲ್ಲಿ ಶೃಂಗೇರಿಯ ಶ್ರೀಜಗದ್ಗುರು ನರಸಿಂಹಭಾರತೀ ಮಹಾ ಸ್ವಾಮಿಗಳವರು ಮಹಾಸತ್ಕಾರವನ್ನು ಹೊಂದಿ ಸಂತುಷ್ಟರಾದರು! ಆ ಮಹಾಸ್ವಾಮಿಗಳವರ ಸತ್ಕಾರಕ್ಕಾಗಿ ನಲವತ್ತುಸಾವಿರ ರೂಪಾಯಿಗಳು ವೆಚ್ಚವಾದವಂತೆ ಮುಂದೆ ಜಗದ್ಗುರು ಶ್ರೀಸಂಕೇಶ್ವರಸ್ವಾಮಿಗಳ ಸತ್ಕಾ ರವನ್ನೂ ಅಪ್ಪಾಸಾಹೇಬರು ಮಾಡಿದರು ಅಲ್ಲದೆ ಆಪರಮ ಗುರುಭಕ್ತರು, ಮುಧೋಳದಂಥ ಪರಸಂಸ್ಥಾನದಲ್ಲಿದ್ದ ಲೋಕಾಪುರ ಮಠದ ಪ್ರಸಿದ್ಧ ಬಾಲ ಭುಜಂಗಯೋಗಿಗಳ ಶಿಷ್ಯರಾಗಿ, ಆ ಮಠದ ಮೂಲ ಪುರುಷರಾದ ಪರ ಮಹಂಸ ಸ್ವಾಮಿಗಳ ಸಮಾಧಿಯಮೇಲೆ ೧೮೫೨ನೇ ಇಸವಿಯಲ್ಲಿ ಒಂದು ಸುಂದರ ಮಂಟಪವನ್ನು ಕಟ್ಟಿಸಿದ್ದು, ಮುಂದೇ ಆ ಭುಜಂಗಸ್ವಾಮಿಗಳ ಚರಿತ್ರದಲ್ಲಿ ಉಲ್ಲೇಖವಾಗಿರುವದು ವಾಚಕರಿಗೆ ಗೊತ್ತಾಗಬಹುದು ಹೀಗೆಯೇ ಈ ಧರ್ಮವೀರರು, ಶ್ರೀಜಗದ್ಗುರು ಸ್ಥಾನವಾದ ಶೃಂಗೇರಿ, ಶ್ರೀಗಣಪತಿಯ ಜಾಗ್ರತಸ್ಥಾನವಾದ ಪುಳೆ, ಭವಾನಿಯ ಸ್ಥಾನವಾದ ತುಳಜಾಪುರ, ಅದರಂತೆ ಮಹಾಬಳೇಶ್ವರ ಮುಂತಾದ ಕ್ಷೇತ್ರಸ್ಥಾನಗಳು ಇವುಗಳಲ್ಲಿಮಾಡಿದ ಧರ್ಮಕೃತ್ಯಗಳನ್ನು ಸ್ಥಳಸಂಕೋಚಕ್ಕಾಗಿ ವರ್ಣಿ ಸದೆ ಬಿಟ್ಟು ಬಿಡಬೇಕಾಗಿದೆ.

**ಸರ್ವಜಾತಿಗಳ ಭೋಜನ**—ಈ ಭರತಖಂಡದಲ್ಲ ಇತ್ತಕಡೆಗೆ ದಾನಶೂರರು ಬಹುಜನರು ಆಗಿಹೋಗಿರುವರು; ಆದರೆ ಪ್ರಾಣಿಮಾತ್ರಗ ಳನ್ನು ಶಿವಸ್ವರೂಪವೆಂದು ತಿಳಿದು, ದೊಡ್ಡ ದೊಡ್ಡ ದಾನಗಳನ್ನೂ, ಪಾರಿತೋಷಕಗಳನ್ನೂ ಕೊಡುವವರೂ, ಲಕ್ಷಬ್ರಾಹ್ಮಣಭೋಜನ, ಬೇರೆ ದೊಡ್ಡ ದೊಡ್ಡ ಬ್ರಾಹ್ಮಣಸಂತರ್ಪಣ ಇವುಗಳನ್ನು ಮಾಡಿ, ಬ್ರಹ ವೃಂದವನ್ನು ಹಲವು ಪಕ್ವಾನ್ನ-ದಕ್ಷಿಣೆದಾನಗಳಿಂದ ಸಂತುಷ್ಟಮಾಡಿದ ವರೂ, ಅದರಂತೆ ಅಂತ್ಯಜಾದಿ ಬ್ರಾಹ್ಮಣೇತರಗಳಾದ ಯಾವತ್ತು ಜನ ರಿಗೆ ಯಥೇಚ್ಛ ಮಿಷ್ಟಾನ್ನ ಭೋಜನಮಾಡಿಸಿದವರೂ ಅಪ್ಪಾಸಾಹೇಬ ರಿಗೆ ಸಮಾನರಾದವರು ದೊರೆಯುವದು ಅಪರೂಪವೆಂತಲೇ ಹೇಳಬೇ

ಕಾಗಿದೆ ಅಪ್ಪಾಸಾಹೇಬರು ಮಾಡಿದಂಥ ಅನ್ನದಾನಸಮಾರಂಭವು ಪುನಃ ಕಣ್ಣಿಗೆ ಬಿದ್ದ ದಿನವನ್ನು ನಿಶ್ಚಯವಾಗಿ ಸುದಿನವೆಂದು ತಿಳಿಯಬೇಕಾಗುವದು! ರಾಮಚಂದ್ರರಾವ ಉರ್ಫ ಅಪ್ಪಾಸಾಹೇಬರು ಯಾವತ್ತೂ ಜಾತಿಯವರ ಹಲವು ಭೋಜನಗಳನ್ನು ಮಾಡಿಸಿದರು. ಅವುಗಳಲ್ಲಿ ಕಟ್ಟಕಡೆಯ ಸರ್ವಜಾತಿಯ ಭೋಜನದ ವೆಚ್ಚವು, ಇಪ್ಪತ್ತೈದುಸಾವಿರದ ತೊಂಬತ್ತು ರೂಪಾಯಿ ಹನ್ನೊಂದು ಆಣೆ ಏಳುಪೈ ಆಯಿತು! ಈ ಕಡೆಯ ಭೋಜನವು ನಡೆದಿರುವಾಗ ಅಪ್ಪಾಸಾಹೇಬರು ಪಂಕ್ತಿಗಳಲ್ಲಿ ವಿನಯದಿಂದ "ಸಾವಕಾಶವಾಗಿ ಉಣ್ಣಿರಿ, ಬೇಕಾದದ್ದನ್ನು ಬೇಕಾದಷ್ಟು ಹಾಕಿಸಿಕೊಂಡು ಹೊಟ್ಟೆತುಂಬ ಉಣ್ಣಿರಿ, ಅನುಮಾನಮಾಡಬೇಡಿರಿ." ಎಂದು ಹೇಳುತ್ತ, ಸಮಾಚಾರ ತಕ್ಕೊಳ್ಳುತ್ತಿರುವಾಗ, ಹೀನಜಾತಿಯ ಕುರೂಪದ ಹರಕಬಟ್ಟೆಯ ಒಬ್ಬ ಮುಪ್ಪಿನ ಮುದುಕಿಯ ರೂಪದಿಂದ ಪ್ರತ್ಯಕ್ಷ ಜಗನ್ಮಾತೆ ಭವಾನಿಯು ಅಪ್ಪಾಸಾಹೇಬರನ್ನು ಕುರಿತು ಕಂಪಿತಸ್ವರದಿಂದ-"ಅಪ್ಪಾ, ನೀನು ಭಕ್ತಿಪೂರ್ವಕವಾಗಿ ನಮ್ಮ ದೀನ ಜನರಿಗೆ ಎಂದೂ ದೊರೆಯದಿದ್ದ ಮಿಷ್ಟಾನ್ನವನ್ನು ಹೊಟ್ಟೆತುಂಬ ಹಾಕಿದೆ; ಅದರಿಂದ ನಾನು ಸಂತುಷ್ಟಳಾದೆನು ನಿನಗೆ ಯಾವಾಗಲೂ ಕಲ್ಯಾಣವಾಗಲಿ." ಎಂದು ನುಡಿಯಲು, ಅಪ್ಪಾಸಾಹೇಬರಿಗೆ ಪರಮಸಂತೋಷವಾಯಿತು! ಅವರು ಆ ಹರಕುಬಟ್ಟೆಯ ಮುಪ್ಪಿನ ಮುದುಕಿಗೆ ಸೀರೆ-ಕುಪ್ಪಸಕೊಡಬೇಕೆಂದು ತರಿಸಿ, ಆ ಮುದುಕಿಯನ್ನು ಹುಡುಕಿಸಲು, ಆಕೆ ಎತ್ತೋ ಮಾಯವಾಗಿ ಹೋಗಿಬಿಟ್ಟಳು! ಪ್ರತ್ಯಕ್ಷ ಪಾರ್ವತಿಯೇ ಆ ಮುದುಕಿಯ ರೂಪದಿಂದ ಬಂದಿದ್ದಳೆಂದು ಅಪ್ಪಾಸಾಹೇಬರೂ, ಉಳಿದ ಜನರೂ ತಿಳಿದುಕೊಂಡರು!

ಅಪ್ಪಾಸಾಹೇಬರು ಜನ್ಮಾಂತರದಲ್ಲಿ ಉಗ್ರ ತಪಶ್ಚರ್ಯವನ್ನು, ಅಥವಾ ದೊಡ್ಡ ಯೋಗಾಭ್ಯಾಸವನ್ನು ಮಾಡಿದ್ದರಿಂದ, ಅವರ ಮುಖದಲ್ಲಿ ಒಂದು ಪ್ರಕಾರದ ತೇಜಸ್ಸು ಮಿನುಗುತ್ತಿತ್ತು! ಅವರು ಅಷ್ಟು ಎತ್ತರವಿದ್ದಿಲ್ಲ, ಅಷ್ಟು ಗಿಡ್ಡೂ ಇದ್ದಿಲ್ಲ, ಹವಣಿಯ ಆಳು ಆಗಿದ್ದರು ಅವರ ಮೈಕಟ್ಟು ಮಧ್ಯಮ ಪ್ರಕಾರದ್ದು; ಅವರು ತಮ್ಮ ಮುಸುಗುಟ್ಟುವ

ಪ್ರಾಯದಲ್ಲಿ ಪ್ರತಿದಿನ ಹನ್ನೆರಡು ನೂರು ಸೂರ್ಯನಮಸ್ಕಾರಗಳನ್ನು ಹಾಕುತ್ತಿದ್ದದ್ದರಿಂದ, ಅವರ ವಿಸ್ತಾರವಾದ ಹಣೆಯು ಎಡಗಡೆಗೆ ಒಂದು ದಡ್ಡು ಬಿದ್ದಿತ್ತು! ಅವರ ಕಣ್ಣು ತೇಜಃಪುಂಜ; ಅವರ ಕಲ್ಲಿಯು ಮೀಸೆಯಿಂದ ಅವರ ಮುಖದಲ್ಲಿ ಒಂದು ಪ್ರಕಾರದ ರಾವು ತೋರುತ್ತಿದ್ದರೂ, ಅವರ ಹೃದಯವು ಬಹಳ ಕೋಮಲ! ಅವರು ಸಂತಪ್ತ ಸ್ವಭಾವದವರಾದದ್ದರಿಂದ ಶೀಘ್ರಕೋಪಿಗಳಾಗಿದ್ದರೂ, ದೀರ್ಘದ್ವೇಷಿಗಳಿದ್ದಿಲ್ಲ. ಅವರು ಅತ್ಯಂತ ಸತ್ಯಪಕ್ಷಪಾತಿಗಳು, ಅವರಿಗೆ ಸುಳ್ಳು ಸರ್ವಥಾ ತಡೆಯುತ್ತಿದ್ದಿಲ್ಲ. ಸುಳ್ಳಾಡುವವರನ್ನು ತಮ್ಮ ಗಾಳಿಗೂ ನಿಲ್ಲಗೊಡುತ್ತಿದ್ದಿಲ್ಲ! ಅವರು ಕೊಟ್ಟ ವಚನವನ್ನು ತಪ್ಪದವರು, ಪರದುಃಖದಿಂದ ಕರಗುವ ಹೃದಯದವರು! ಅಲ್ಲದೆ, ಅವರು ಉದಾರರು, ದಾನಶೂರರು, ಅನ್ಯರ ವಿಷಯದ ಗುಪ್ತಸಂಗತಿಗಳನ್ನು ಬೈಲಿಗಿಡದವರು ಆಗಿದ್ದರು. ಅವರ ಸ್ಮರಣಶಕ್ತಿ ತೀವ್ರವಾದದ್ದು ತಮ್ಮ ಆಪ್ತರೂ, ಇಷ್ಟಮಿತ್ರರೂ, ಸೇವಕರೂ, ಪ್ರಜೆಗಳೂ ಸುಖದಿಂದಲೂ, ಆನಂದದಿಂದಲೂ ಇರಬೇಕೆಂದು ಅವರು ಮನಃಪೂರ್ವಕವಾಗಿ ಇಚ್ಛಿಸುತ್ತಿದ್ದರು. ಅವರಿಗೆ ಔರಸ ಸಂತತಿಯಿಲ್ಲದ್ದರಿಂದ, ದಾಜಿರಾವ ಪಟವರ್ಧನ ಎಂಬವರನ್ನು ದತ್ತಕತೆಗೆದುಕೊಂಡು, ಅವರಿಗೆ ಪರಶುರಾಮಪಂತ ಭಾವುಸಾಹೇಬ ಪಟವರ್ಧನ ಎಂದು ಹೆಸರಿಟ್ಟರು

ಅಪ್ಪಾಸಾಹೇಬರ ಶರೀರವು ಜಾತ್ಯಾ ಬಲಿಷ್ಠವೂ, ನಿರೋಗಿಯೂ ಆದದ್ದರಿಂದ, ಅವರಿಗೆ ದೊಡ್ಡ ಬೇನೆಗಳು ಎಂದೂ ಬರಲಿಲ್ಲ; ಒಂದರೆ ಸಣ್ಣಪುಟ್ಟವು ಮಾತ್ರ ಯಾವಾಗಾದರೊಮ್ಮೆ ಬರುತ್ತಿದ್ದವು ಹೋಗುತ್ತಿದ್ದವು, ಆದರೆ ೧೮೭೬ನೇ ಇಸವಿಯಲ್ಲಿ ಅವರ ಬೆನ್ನಿನಮೇಲೆ ಒಂದು ಸಣ್ಣ ಗಂಟಿನಹಾಗೆ ಆಗಿ, ಅದು ದೊಡ್ಡದಾಗುತ್ತಾಗುತ್ತ ದೊಡ್ಡ ವ್ರಣವಾಯಿತು. ಅದರ ಪರಿಹಾರಕ್ಕಾಗಿ ಅಪ್ಪಾಸಾಹೇಬರು, ಹಲವು ಅನುಷ್ಠಾನಗಳನ್ನು ಮಾಡಿಸಿದರು; ಸಾಧು-ಸತ್ಪುರುಷರಿಗೆ ಶರಣುಹೋದರು; ವೈದ್ಯರು, ಡಾಕ್ತರರು ಇವರಿಂದ ಚಿಕಿತ್ಸೆ ಮಾಡಿಸಿದರು; ಆದರೆ ಒಂದರಿಂದಲೂ ಪ್ರಯೋಜನವಾಗಲಿಲ್ಲ. ಆ ವ್ರಣವು ವಿಸ್ತಾರವಾಗು

ತ್ತಾಗುತ್ತ ಇಪ್ಪತ್ತುವರ್ಷ ಕ್ರೂರ ಶತ್ರುವಿನಂತೆ ಆ ತೇಜಸ್ವಿ ರಾಜ ಪುರುಷನ ಬೆನ್ನಮೇಲೆ ಇರುತ್ತಿರಲು, ಒಂದಾನೊಂದು ದಿವಸ ಅದ ಕ್ಕೊಂದು ಛಿದ್ರವು ಬಿದ್ದು, ಅದು ಸೋರಹತ್ತಿತು! ಆಗ ಬಹುಮೂತ್ರ ರೋಗವಿದ್ದ ಅಪ್ಪಾಸಾಹೇಬರಿಗೆ, ತಮ್ಮ ಮರಣಕಾಲವು ಸಮೀಪಿಸಿ ತೆಂಬ ಮಾತು ಗೊತ್ತಾಗಿ, ಅವರು ಮಾಡತಕ್ಕ ವ್ಯವಸ್ಥೆಗಳನ್ನೆಲ್ಲ ಮನಃಪೂರ್ವಕವಾಗಿ ಮಾಡಿದರು. ಅಷ್ಟರಲ್ಲಿ ಅವರಿಗೆ ಜ್ವರಬಾಧೆಯೂ ಉಂಟಾಯಿತು! ಹೀಗೆ ತ್ರಿದೋಷಗಳಂತೆ ಬಹುಮೂತ್ರ, ವಾಳ, ಜ್ವರ ಇವು ಮೂರು ರೋಗಗಳು ಅಪ್ಪಾಸಾಹೇಬರ ದೇಹದಮೇಲೆ ಒಮ್ಮೆಲೆ ದಾಳಿಮಾಡಿದವು. ಆಗ ಮೃತ್ಯುಲೋಕದ ಸ್ವಭಾವದಂತೆ ಆ ಘನವಂತ ರಾದ ಅಪ್ಪಾಸಾಹೇಬರು ಸನ್ ೧೮೯೨ನೇ ಇಸವಿಯ ಜಾನೇವರಿ ತಿಂಗಳ ೧೨ನೇ ತಾರೀಖಿನ ದಿವಸ ಇಹಲೋಕದ ಯಾತ್ರೆಯನ್ನು ಮುಗಿಸಿ, ಕೈಲಾಸಕ್ಕೆ ತೆರಳಿದರು! ಇಂತಹ ಸದ್ಗುಣಸಮುಚ್ಚಯದ ತೇಜಸ್ವಿ ನೃಪ ತುಂಗರ ಪರಂಪರೆಯು ದೇಶದಲ್ಲಿ ಆಗಹತ್ತಿದರೆ, ದೇಶದ ಊರ್ಜಿತಾವ ಸ್ಥೆಗೆ ವಿಲಂಬವೇಕಾಗುವದು?

---

## ೧೧ನೇ ಅಧ್ಯಾಯ-ಸಂಶಯನಿವೃತ್ತಿ



೭೦೦ದ ೯ನೇ ಅಧ್ಯಾಯದಲ್ಲಿ ಹೇಳಿರುವಂತೆ, ಬಾಲಭುಜಂಗ ಯೋಗಿಗಳ ಪರೀಕ್ಷೆಗಾಗಿ ಲಿಂಗೋಪಂತನು ಬಂದದ್ದು, ಮೂರನೆಯ ವರ್ಷದ ತಪಶ್ಚರ್ಯದಕಾಲಕ್ಕೆ ಎಂಬದು ವಾಚಕರ ಲಕ್ಷದಲ್ಲಿ ಬಂದಿರಬ ಹುದು. ಲಿಂಗೋಪಂತನು ಹಗಲು ರಾತ್ರಿ ಏಕಪ್ರಕಾರವಾಗಿ ಕಣ್ಣಲ್ಲಿ

ಎಣ್ಣೆಹಾಕಿಕೊಂಡು ಬಾಲಭುಜಂಗ ಯೋಗಿಗಳ ಸ್ಥಿತಿಗತಿಗಳನ್ನು ಅತ್ಯಂತ ಸೂಕ್ಷ್ಮರೀತಿಯಿಂದ ಪರೀಕ್ಷಿಸಿದನು; ಹಾಗೆ ಆತನು ಏಕನಿಷ್ಠೆಯಿಂದ ಪರೀಕ್ಷಿಸಲೇಬೇಕಾಗಿತ್ತೆಂದು ಹೇಳಬಹುದು; ಯಾಕಂದರೆ, ತನ್ನ ಪರೀಕ್ಷೆಯು ಅಪ್ಪಾಸಾಹೇಬರಂಥ ತೇಜಸ್ವಿ ಸ್ವಧರ್ಮನಿಷ್ಠ ಭೂಪತಿಗೆ ಸಂಪೂರ್ಣಮಾನ್ಯವಾಗಿ, ತಾನು ಯೋಗ್ಯ ಪರೀಕ್ಷಕನೆನಿಸಿ, ತನ್ನ ಸ್ವಾಮಿಯನ್ನು ಸಂತೋಷಪಡಿಸುವ ಇಚ್ಛೆಯು ಆ ರಾಜನಿಷ್ಠ ಲಿಂಗೋಪಂತನ ಮನಸ್ಸಿನಲ್ಲಿ ಸಂಪೂರ್ಣವಾಗಿಯೇ ಇದ್ದಿತು ತನ್ನ ಸ್ವಾಮಿಯನ್ನು ಸಂತೋಷಪಡಿಸುವದು ಸೇವಕನ ಪವಿತ್ರ ಕರ್ತವ್ಯವೇ ಆಗಿರುವದರಿಂದ, ಲಿಂಗೋಪಂತನ ಮನೋದಯವು ಅಯೋಗ್ಯವಾದದ್ದೆಂದು ಹೇಳಲಾಗುವದಿಲ್ಲ. ಲಿಂಗೋಪಂತನು ತಾನು ಯಾರು, ಯಾಕೆಬಂದಿರುವೆನು ಎಂಬದನ್ನೇನೂ ತಿಳಿಸದೆ, ಗುಪ್ತಚಾರನಂತೆ ಬಾಲಭುಜಂಗಯೋಗಿಗಳ ತಪಶ್ಚರ್ಯದ ಪರೀಕ್ಷೆಯನ್ನು ಬಗೆಬಗೆಯಿಂದ ಮಾಡಿ, ತನ್ನ ಮನಸ್ಸಿನ ನಂಬಿಗೆಯಾದ ಬಳಿಕ ಜಮಖಂಡಿಗೆ ಹೋಗಿ ತನ್ನ ಸ್ವಾಮಿಯನ್ನು ಕಂಡು—"ಬಾಲಭುಜಂಗ ಯೋಗಿಗಳ ತಪಶ್ಚರ್ಯವು ನಿಜವಾದದ್ದು, ಅದರಲ್ಲಿ ಮರೆಮೋಸಗಳೇನು ಇರುವದಿಲ್ಲ" ಎಂದು ಹೇಳಿದನು. ಅದನ್ನು ಕೇಳಿ ಅಪ್ಪಾಸಾಹೇಬರಿಗೆ ಬಹಳ ಸಂತೋಷವಾಯಿತು; ಯಾಕಂದರೆ, ಬಾಲಭುಜಂಗ ಯೋಗಿಯ ತಪಶ್ಚರ್ಯದವಿಷಯದಲ್ಲಿ ಅವರಿಗೆ ಅಸೂಯೆಯಿರದೆ, ದೇವರ ದಯದಿಂದ ಆ ಬಾಲಭುಜಂಗಯೋಗಿಯ ತಪಶ್ಚರ್ಯವು ನಿಜವಾಗಲೆಂಬ ಇಚ್ಛೆಯು ಅವರಿಗೆ ಸಂಪೂರ್ಣವಾಗಿ ಇದ್ದಿತು; ಆದ್ದರಿಂದ ಅವರು ಸ್ವಾಮಿಗಳ ದರ್ಶನಕ್ಕಾಗಿ ಲೋಕಾಪುರಕ್ಕೆ ಹೊರಡಲು ನಿಶ್ಚಯಿಸಿದರು!

ಅಪ್ಪಾಸಾಹೇಬ ಉರ್ಫ ರಾಮಚಂದ್ರರಾವ ಪಟವರ್ಧನರವರು ಬ್ರಾಹ್ಮಣಸಂಸ್ಥಾನಿಕರೆಂಬದು ಈ ಮೊದಲೆ ವಾಚಕರಿಗೆ ಗೊತ್ತಾಗಿರುವದು; ಆದರೆ ಲೋಕಾಪುರವು ಮುಧೋಳ ಸಂಸ್ಥಾನದಲ್ಲಿದ್ದದ್ದರಿಂದ, ಲೌಕಿಕದ ಯಾವಕಾರಣದಿಂದಲೂ ಅಪ್ಪಾಸಾಹೇಬರಂಥ ತೇಜಸ್ವಿಸಂಸ್ಥಾನಿಕರು ಪರಸಂಸ್ಥಾನದೊಳಗಿನ ಲೋಕಾಪುರಕ್ಕೆ ಆಗಂತುಕರಾಗಿ ಬರುವ

ಸಂಭವವಿದ್ದಿಲ್ಲ ; ಆದರೆ ಭಾವಿಕರಾದ ಅಪ್ಪಾಸಾಹೇಬರು ಯಾವ ಮಾನ ಮರ್ಯಾದೆಗಳನ್ನೂ ಮನಸ್ಸಿನಲ್ಲಿತಾರದೆ. ಕೇವಲ ಬಾಲಭುಜಂಗಯೋಗಿಗಳ ಮಹಿಮೆಯಲ್ಲಿ ಲಕ್ಷವಿಟ್ಟು ಒಬ್ಬ ಸಾಮಾನ್ಯ ಮನುಷ್ಯನಂತೆ ಲೋಕಾಪುರಕ್ಕೆ ಬಂದದ್ದು, ಹಾಗು ಮುಂದೆ ಪದೇಪದೇ ಬರತೊಡಗಿದ್ದು ಲೌಕಿಕದೃಷ್ಟಿಯಿಂದ ಆಶ್ಚರ್ಯದ ಸಂಗತಿಯಾಗಿದ್ದರೂ, ಪರಮಾರ್ಥದೃಷ್ಟಿಯಿಂದ ಅದರಲ್ಲೇನು ವಿಶೇಷವಿಲ್ಲವು! ದುಷ್ಯಂತರಾಜನು ಕಣ್ವಋಷಿಗಳ ಆಶ್ರಮಕ್ಕೆ ಹೋಗುವಾಗ, ತನ್ನ ಛತ್ರಚಾಮರಾದಿ ರಾಜವೈಭವದ ಚಿಹ್ನಗಳನ್ನು ಬಿಟ್ಟು, ಕಾಲನಡಿಗೆಯಿಂದ ಭಕ್ತಿಪುರಸ್ಸರ ಹೋದದ್ದು ಪುರಾಣಪ್ರಸಿದ್ಧವಾಗಿರುವದು. ಆ ಮಹಾರಾಜನಂತೆಯೇ ಅಪ್ಪಾಸಾಹೇಬರು, ತಾವು ಸಂಸ್ಥಾನಿಕರೆಂಬ ಉಪಾಧಿಯಬಾಧೆಗೆ ಒಳಗಾಗದೆ, ಕೇವಲ ಭಕ್ತಿವಶರಾಗಿ ಬಾಲಭುಜಂಗ ಯೋಗಿಗಳ ದರ್ಶನಕ್ಕೆ ಬಂದದ್ದು, ವೈದಿಕ ಶಿಷ್ಟರಾಜರ ಸಾಂಪ್ರದಾಯವನ್ನನುಸರಿಸಿದ್ದೇ ಆಗಿರುವದು.

ಬಾಲಭುಜಂಗ ಯೋಗಿಯು ದರ್ಶನಮಾಡಿಕೊಳ್ಳುವದು ರಾತ್ರಿಯಲ್ಲಿ ಎಂಬದು ಪ್ರಸಿದ್ಧವಷ್ಟೆ? ಅದರಂತೆ ಸ್ವಾಮಿಗಳು ಮುಸುಕು ತೆಗೆದಿಟ್ಟ ರಾತ್ರಿ ಅಪ್ಪಾಸಾಹೇಬರು, ಅವರ ದರ್ಶನಮಾಡಿಕೊಳ್ಳುವದಕ್ಕಾಗಿ ಮಠದ ಮಹಾದ್ವಾರಕ್ಕೆ ಬಂದರು. ಆಗ ಬಾಲಭುಜಂಗ ಯೋಗಿಗಳು ಘಣಘಣಿಸುವ ವಾಣಿಯಿಂದ ಜನರಸಂಗಡ ಮಾತಾಡುತ್ತ ಕುಳಿತಿದ್ದರು. ಅವರ ಆ ಮಾತುಗಳನ್ನುಕೇಳಿ ಅಪ್ಪಾಸಾಹೇಬರು ಮನಸ್ಸಿನೊಳಗೆ— "ಈಗ ಎರಡುವರ್ಷಗಳಿಗಿಂತಹೆಚ್ಚುಕಾಲ, ಸ್ವಲ್ಪ ಹಾಲು-ಹಣ್ಣಿನ ಮೇಲಿದ್ದವರು ಇಷ್ಟು ಘಣ ಘಣಿಸಿ ಮಾತಾಡಬಹುದೇ" ಎಂದು ಶಂಕಿತರಾದರು ಅವರು ಮಹಾದ್ವಾರವನ್ನು ಹೊಕ್ಕು ಮುಂದಕ್ಕೆ ಹೋಗಲು, ಬಾಲಭುಜಂಗ ಯೋಗಿಯ ತೇಜಃಪುಂಜ ಮುಖವು ಅವರ ಕಣ್ಣಿಗೆ ಬಿದ್ದಿತು. "ಇಂಥ ತೇಜಸ್ಸು ಅಖಂಡ ಎರಡುವರ್ಷಗಳಿಂದ ತಪಶ್ಚರ್ಯ ಮಾಡುತ್ತಲಿದ್ದವರ ಮುಖದಲ್ಲಿರಬಹುದೇ" ಎಂಬ ಮತ್ತೊಂದು ಶಂಕೆಯು ಅಪ್ಪಾಸಾಹೇಬರ ಮನಸ್ಸಿನಲ್ಲಿ ಉತ್ಪನ್ನವಾಯಿತು. ಅವರು ಸ್ವಾಮಿಗಳ ಬಳಿಗೆಹೋಗಿ ಸಾಷ್ಟಾಂಗವೆರಗಲು, ಬಾಲಭುಜಂಗಯೋಗಿ

ಗಳು ಅವರಿಗಾಗಿ ಹಾಕಿಸಿಟ್ಟಿದ್ದ ಮಣೆಯ ಕಡೆಗೆ ಬೆರಳುಮಾಡಿ—"ಅಲ್ಲಿ ಮಣೆಯಮೇಲೆ ಕುಳಿತುಕೊಳ್ಳಬೇಕು. ತಮಗಾಗಿಯೇ ಮಣೆಹಾಕಿಸಿದೆ" ಎಂದು ಹೇಳಿದರು ಅದಕ್ಕೆ ಅಪ್ಪಾಸಾಹೇಬರು—"ಸ್ವಾಮಿಾ, ನೀನು ಕರುಣಿಸಿ ವೈಭವಕೊಟ್ಟಿರುವದರಿಂದ, ಬಂಗಾರದ ಮಣೆಯಮೇಲೆ ಕುಳಿತುಕೊಳ್ಳಲಿಕ್ಕೆ ನನಗೆ ಬರುವಹಾಗಿದೆ; ಅಂದಬಳಿಕ ಈ ಕಟ್ಟಿಗೆಯ ಮಣೆಯಮೇಲೆ ಕುಳಿತುಕೊಳ್ಳುವದರಲ್ಲಿ ಮಹತ್ವವೇನು? ಆದರೆ ಮಹಾಸ್ವಾಮಿಾ, ನಾನು ಇಲ್ಲಿಗೆ ಮಣೆಯಮೇಲೆ ಕುಳಿತು ಪ್ರತಿಷ್ಠಿತನೆನಿಸಿಕೊಳ್ಳಲಿಕ್ಕೆ ಬಂದಿರುವದಿಲ್ಲ, ನಿನ್ನ ಪವಿತ್ರತರ ಚರಣರಜದಿಂದಪವಿತ್ರತಮವಾಗಿರುವ ಈ ನಿನ್ನ ಅಂಗಳದ ಉಸುಬಿನ ಮೇಲೆ ಉರುಳಾಡಿ, ಪವಿತ್ರನಾಗಲಿಕ್ಕೆ ಬಂದಿದ್ದೇನೆ!" ಎಂದು ನುಡಿದು, ಸಮಾಧಿಗಳ ಬೈಲಉಸುಬಿನ ಹಾಸಿಗೆಯಮೇಲೆಯೇ ಕೈಜೋಡಿಸಿ ಕುಳಿತುಕೊಂಡರು!

ಆಗಿನ ಅಪೂರ್ವನೋಟವನ್ನು ವರ್ಣಿಸುವದು ಸುಲಭವಲ್ಲ; ಯಾಕಂದರೆ, ಸರ್ವಸಂಗಪರಿತ್ಯಾಗಮಾಡಿರುವ ಬಾಲಭುಜಂಗಯೋಗಿಗಳ ಬಳಿಯಲ್ಲಿ, ಆರುಲಕ್ಷರೂಪಾಯಿಗಳ ವಾರ್ಷಿಕ ಉತ್ಪನ್ನದ ತೇಜಸ್ವಿ ಸಂಸ್ಥಾನಿಕನು ನೆಲದಮೇಲೆ ಕುಳಿತುಕೊಂಡಿರಲು, ಅಲ್ಲಿ ಅರುಣ-ಸೂರ್ಯರ ಕಾಂತಿಯು ಸಂಗಮವಾಗಿರುವಂತೆ ಕಾಣುತ್ತಲಿತ್ತು. ಬರಬರುತ್ತ ಸೂರ್ಯನ ಕಾಂತಿಯಲ್ಲಿ ಅರುಣನಕಾಂತಿಯು ಅಡಗಿಹೋದಂತೆ, ಬಾಲಭುಜಂಗನ ಸಾತ್ವಿಕವಾದ ತಪಸ್ತೇಜಸ್ಸಿನಲ್ಲಿ ಅಪ್ಪಾಸಾಹೇಬರ ರಾಜಸವಾದ ರಾಜತೇಜಸ್ಸು ಅಡಗಿಹೋಯಿತು! ಆಗ ಎಲ್ಲಕಡೆಯಲ್ಲಿ ಸ್ತಬ್ಧತೆಯುಂಟಾಗಿತ್ತು, ಅಲ್ಲಿ ಇದ್ದಜನರು ಒಮ್ಮೆ ವಿರಾಗಿಯಾದ ಬಾಲಭುಜಂಗಯೋಗಿಯ ಕಡೆಗೆ, ಒಮ್ಮೆ ರಾಗಿಯಾದ ಅಪ್ಪಾಸಾಹೇಬನ ಕಡೆಗೆ ನೋಡುತ್ತಲಿದ್ದರು. ಅವರು ಆ ದೈವೀತೇಜ-ರಾಜತೇಜಗಳೆರಡನ್ನು, ತಕ್ಕಡಿಯ ಒಂದೊಂದು ಪರಡಿಗೆಯಲ್ಲಿ ಹಚ್ಚಿ, ಇವುಗಳಲ್ಲಿ ಯಾವದು ಭಾರವಾದದ್ದೆಂಬದನ್ನು ಪರೀಕ್ಷಿಸುತ್ತಿರುವಂತೆ ತೋರುತ್ತಿತ್ತು! ಆಗ ರಾಗಿಗಳಾದವರಿಗೆ ಅಪ್ಪಾಸಾಹೇಬರ ರಾಜತೇಜವು ಭಾರವಾಗಿಯೂ, ವಿರಾಗಿಗಳಾದವರಿಗೆ ಬಾಲಭುಜಂಗ ಯೋಗಿಗಳ ದೈವೀತೇಜಸ್ಸು ಭಾರ

ವಾಗಿಯೂ ತೋರಿದರೂ, ರಾಗಿಗಳಾಗಿದ್ದ ಅಪ್ಪಾಸಾಹೇಬರು ವಿರಾಗಿಗಳಾಗಿದ್ದ ಬಾಲಭುಜಂಗಯೋಗಿಗಳಿಗೆ ಶರಣುಬಂದಿರುವದು ಮನಸ್ಸಿನಲ್ಲಿ ಬರಲು, ರಾಗಭಾಗ್ಯಕ್ಕಿಂತ ವಿರಾಗಭಾಗ್ಯವೇ ಹೆಚ್ಚಿನದೆಂಬ ಭಾವವು ಸರ್ವಸಾಮಾನ್ಯವಾಗಿ ಎಲ್ಲರಲ್ಲಿಯೂ ಉತ್ಪನ್ನವಾಯಿತು !

ಹೀಗೆ ಅಲ್ಪಕಾಲವು ಸ್ತಬ್ಧತೆಯಲ್ಲಿ ಕಳೆದು ಹೋಗಲು, ಸ್ವಾಮಿಗಳು ಅಪ್ಪಾಸಾಹೇಬರ ಯೋಗಕ್ಷೇಮವನ್ನು ವಿಚಾರಿಸಿ, ನಮ್ಮ ಮಠಕ್ಕೆ ತಾವು ಬಂದದ್ದೊಂದು, ಭಾಗ್ಯೋದಯವಾದಂತಾಯಿತೆಂದು ಆ ಪಟವರ್ಧನ ಸಂಸ್ಥಾನಿಕನನ್ನು ಅಭಿನಂದಿಸಿದರು. ಆಗ ಅಪ್ಪಾಸಾಹೇಬರು ತಲೆಬಾಗಿ– " ಎಲ್ಲಕ್ಕೂ ಚರಣಾನುಗ್ರಹವೇ ಕಾರಣವು " ಎಂದು ನುಡಿದು, ತಮ್ಮ ವಿನಯಭಾವವನ್ನು ವ್ಯಕ್ತಮಾಡಿದರು. ಹೀಗೆ ಕೆಲಕಾಲವು ಕ್ರಮಿಸುತ್ತಿರಲು, ಬಾಲಭುಜಂಗಯೋಗಿಗಳ ಸ್ನಾನದ ಹೊತ್ತಾಯಿತು ಶ್ರೀಮಂತಅಪ್ಪಾಸಾಹೇಬರು ಸ್ವಾಮಿಗಳ ದರ್ಶನಕ್ಕೆ ಬಂದಾಗ, ಬಾಲಭುಜಂಗಯೋಗಿಗಳು ಮೈತುಂಬ ಶಾಟಿಯನ್ನು ಹೊತ್ತುಕೊಂಡಿದ್ದದ್ದರಿಂದ, ಅಪ್ಪಾಸಾಹೇಬರಿಗೆ ಸ್ವಾಮಿಗಳ ಸುಂದರವಾದ ತೇಜಸ್ವಿಮುಖ, ಎರಡುಹಸ್ತಗಳು, ಹೊತ್ತುಕೊಂಡಿದ್ದಶಾಟಿ ಈ ಮೂರರಹೊರತು ಬೇರೆ ಏನೂ ಕಾಣುತ್ತಿದ್ದಿಲ್ಲ. ಬಾಲಭುಜಂಗಯೋಗಿಗಳ ಘಣಘಣಿಸುವ ಮಾತುಗಳನ್ನಂತು ಆ ಸಂಸ್ಥಾನಿಕರು ಕೇಳುತ್ತಲೇ ಇದ್ದರು ; ಆದ್ದರಿಂದ ಭುಜಂಗಯೋಗಿಗಳು ತಪಃಕ್ಷೀಣರಾಗದೆ, ಇಷ್ಟು ತೇಜಸ್ವಿಗಳೂ, ಪರಿಪುಷ್ಟರೂ ಹೇಗಿರಬಹುದೆಂದು ಆ ಸಂಸ್ಥಾನಿಕರು ಎಣಿಕೆಹಾಕುತ್ತಿದ್ದರು.

ಮುಂದೆ ಬಾಲಭುಜಂಗಯೋಗಿಗಳು ಸ್ನಾನಕ್ಕೆ ಏಳುವದಕ್ಕಾಗಿ ಹವಣಿಸಲು, ಅವರಿಗೆ ತಟ್ಟನೆ ಏಳಲಿಕ್ಕೆ ಬರಲೊಲ್ಲದು. ಅವರು ಮೆಲ್ಲನೆ ಕಾಲುತಿಕ್ಕಿಕೊಂಡು ಸೈಲುಮಾಡಿಕೊಳ್ಳುತ್ತ, ಮೆಲ್ಲನೆ ಕಾಲುಚಾಚುತ್ತ, ಜೋಲಿಯಸಂಬಾಳಿಸಿ ಮೇಲಕ್ಕೆದ್ದರು. ಅವರಿಗೆ ಬೇಗನೆ ಹೆಜ್ಜೆಯಿಡಲಿಕ್ಕೆ ಬಾರದಾಗಲು, ಕೆಲಹೊತ್ತು ತೀರಸಾವಕಾಶವಾಗಿ ಹೆಜ್ಜೆಯಿಡುತ್ತ, ಮೆಲ್ಲಮೆಲ್ಲನೆ ಮುಂದಕ್ಕೆ ಸಾಗುತ್ತ ಸಾವಕಾಶವಾಗಿ ಪಾವಟಿಗೆಗಳನ್ನು ಇಳಿದು ಕಾವಲಿಗೆ ಸಾಗಿದರು ! ಆಗ ಅವರನ್ನು ಎಲ್ಲರೂ ಮೆಲ್ಲಗೆ ಹಿಂಬಾ

ಲಿಸಿ ಸಾಗಿದ್ದರು. ಈ ಪ್ರಸಂಗದಲ್ಲಿ ಬಾಲಭುಜಂಗಯೋಗಿಗಳು ತಮ್ಮನ್ನು ಹಿಂಬಾಲಿಸಿಬರುತ್ತಿರುವ ಸಂಸಾರಮಗ್ನರನ್ನು ಕುರಿತು—“ ನೀವು, ವಿಷಯಸುಖಗಳಕಡೆಗೆ ಓಡುತ್ತಿರುವ ನಿಮ್ಮ ಮನಸ್ಸನ್ನು ಹೀಗೆಯೇ ಮೆಲ್ಲ ಮೆಲ್ಲನೆ ಬಲಾತ್ಕಾರದಿಂದ ಸತ್ಸಮಾಗಮದಕಡೆಗೆ ಎಳಕೊಂಡು ಹೋಗುತ್ತಿರಬೇಕು ” ಎಂದು ಪಾಠವನ್ನು ಕಲಿಸುತ್ತಿರುವಂತೆ ತೋರುತ್ತಿತ್ತು ! ಬಾಲಭುಜಂಗಯೋಗಿಗಳು ಹೀಗೆ ಸಾವಕಾಶವಾಗಿ ಸಾಗಿಹೋಗಿ ಕಾವಲಿಯಮೇಲೆ ನಿಂತು—“ ಇಗೋ, ಹೀಗೆ ದೇಹದಂಡನ-ಕರಣಖಂಡನಗಳನ್ನು ಮಾಡಿ ಕೃಶರಾದಹೊರತು ಪರಮಾರ್ಥದ ಹಾದಿಯು ಸಿಗಲಾರದೆಂ” ಬದನ್ನು ತೋರಿಸುವದಕ್ಕಾಗಿಯೋಅನ್ನುವಂತೆ, ಆ ಮಹಾತ್ಮನು ಕಾವಲಿಯಲ್ಲಿ ಸ್ನಾನಕ್ಕೆ ಇಳಿಯುವದಕ್ಕಾಗಿ ತನ್ನ ಮೈಮೇಲಿನಶಾಟಿಯನ್ನು ತೆಗೆದನು ಆಗ ನೋಡುವವರ ಕಣ್ಣಿಗೆ ಕೇವಲ ಅಸ್ಥಿಪಂಜರವನ್ನು ಕಟ್ಟಿದಂತಾಯಿತು ! ಅದನ್ನು ನೋಡಿದಕೂಡಲೆ ಅಪ್ಪಾಸಾಹೇಬರ ಸಂಶಯಗಳೆಲ್ಲ ದೂರವಾಗಿ, ಆ ಸಹೃದಯ ಭೂಪತಿಯು ಕಣ್ಣೊಳಗಿಂದ ಬಳಬಳ ನೀರುಗಳು ಉದುರಿದವು !

ಹೀಗೆ ಅಪ್ಪಾಸಾಹೇಬರು ಬಾಷ್ಪಪೂರಿತ ಲೋಚನರಾಗಿ ಬಾಲಭುಜಂಗಯೋಗಿಗಳ ಕೃಶವಾದ ದೇಹದಕಡೆಗೆ ನೋಡುವಾಗ, ಅವರ ಕಂಠವು ಸದ್ಗತಿತವಾಗಿ ಅವರ ಬಾಯಿಂದ ಮಾತುಗಳು ಹೊರಡದಾದವು. ಇಂಥ ಕಲಿಯುಗದಲ್ಲಿ ಇಂಥ ಮಹಾ ತಪಸ್ವಿಯನ್ನು ಕಂಡ ಧನ್ಯತೆಯಿಂದ ಅವರ ಆನಂದವು ಹೊಟ್ಟೆಯಲ್ಲಿ ಹಿಡಿಸದೆ ಹೊರಚಿಮ್ಮುತ್ತಿರಲು, ಆ ಭಾವಿಕನಾದ ಭೂಪತಿಯು ಬಾಲಭುಜಂಗಯೋಗಿಗಳಿಗೆ ಸಾಷ್ಟಾಂಗವಾಗಿ ಎರಗಿ, ಸುಮ್ಮನಿರಲಾರದೆ ಕುಗ್ಗುತ್ತಿರುವ ದನಿಯಿಂದ—“ನಾನು ಪುರಾಣಾಂತರದಲ್ಲಿ ಶುಕಯೋಗಿಯ ಚರಿತ್ರವನ್ನು ಕೇಳಿದ್ದೆನು; ಆದರೆ ಇಂದು ಪ್ರತ್ಯಕ್ಷ ಶುಕಯೋಗಿಯ ದರ್ಶನವಾಗಿ ನಾನು ಕೃತಾರ್ಥನಾದೆನು ” ಎಂದು ನುಡಿದು, ಭುಜಂಗಯೋಗಿಗಳಿಗೆ ಮತ್ತೆ ಸಾಷ್ಟಾಂಗವೆರಗಿದನು! ಆಗ ಆ ಭಾವಿಕನಾದ ಭೂಪಾಲನ ಹೃದಯಲ್ಲಿದ್ದ ರಾಜ್ಯ-ಕೋಶ-ಕುಟುಂಬ-ಪರಿವಾರ-ಪ್ರಜಾಮೊದಲಾದವುಗಳ ಗಲಿಬಿಲಿಯ ಗದ್ದ

ಲವಡಗಿ, ಅವು ಅಸ್ತಂಗತವಾಗಿ ಹೋಗಿರಲು, ಬರಿದಾಗಿದ್ದ ಆತನ ಹೃದಯವನ್ನೆಲ್ಲ ಬಾಲಭುಜಂಗಯೋಗಿಗಳೇ ವ್ಯಾಪಿಸಿಕೊಂಡು ಬಿಟ್ಟಿದ್ದರಿಂದ, ಆ ಪವಿತ್ರ ಹೃದಯದ ಭೂಪಾಲನಿಗೆ ಕ್ಷಣಮಾತ್ರ ಬ್ರಹ್ಮಾನಂದದ ಅನುಭವವು ಆಗಿಹೋಯಿತು! ಇದರಂತೆ ಅಪ್ಪಾಸಾಹೇಬರೇ ಆಗಲಿ, ನಾವೇ ಆಗಲಿ, ಬೇರೆ ಯಾರೇ ಆಗಲಿ ನಮ್ಮ ಸಾಂಸಾರಿಕ ಗೊಂದಲಗಳನ್ನೆಲ್ಲ ಹೃದಯದೊಳಗಿಂದ ಹೊರದೂಡಿ ಅವುಗಳ ಘಟಸ್ಫೋಟಮಾಡಿದ ಮಾನದಿಂದ, ನಮ್ಮ ವೈಷಯಿಕ ಕ್ಷಣಿಕಾನಂದವು ಆತ್ಮಾನುಭವದ ಅಖಂಡಾನಂದದ ಸ್ವರೂಪವನ್ನು ಹೊಂದುವ ವೈಭವದ ಅನುಭವ ಪಡೆಯಬಹು ದಲ್ಲದೆ, ಅನ್ಯಮಾರ್ಗದಿಂದ ಆ ಅನುಭವವನ್ನು ಸರ್ವಥಾ ಪಡೆಯಲಾರೆವು.

ಇತ್ತ ಬಾಲಭುಜಂಗಯೋಗಿಯು ಸ್ನಾನವಾಗಿ, ಆತನು ಮೆಲ್ಲನೆ ಮಠಕ್ಕೆ ಸಾಗಿಹೋಗಿ, ಪರಮಹಂಸರ ವೃಂದಾವನದ ಕಿರಿಕಟ್ಟೆಯಮೇಲೆ ನಿರಿಗೆಹಾಕಿ ಇಟ್ಟಿದ್ದ ತನ್ನ ಒಣಗಿದ ಶಾಟಿಯನ್ನು ಉಟ್ಟುಕೊಂಡು, ಒಣಗಿದ್ದ ಮತ್ತೊಂದು ಶಾಟಿಯನ್ನು ಹೊದ್ದುಕೊಂಡು ತನ್ನ ನಿತ್ಯದ ನಿಯಮದಂತೆ ಹಣೆಗೆ ಭಸ್ಮ ಹಚ್ಚಿಕೊಂಡು ಆಚಮನಮಾಡಿದಬಳಿಕ, ಸಂಧ್ಯಾವಂದನಾನಂತರ ಮುಸುಕುಹಾಕಿಕೊಳ್ಳುವಮೊದಲು, ತನ್ನ ಎದುರಿಗಿರುವ ಮೂಲಭುಜಂಗ ಸ್ವಾಮಿಗಳ ವೃಂದಾವನದ ಕಡೆಗೆ ದಿಟ್ಟಿಸಿ ನೋಡತೊಡಗಿದನು. ಆಗ ಎಲ್ಲ ಜನರು—“ಓಹೋ! ವೃಂದಾವನವು ತೂಗಾಡುವದು, ವೃಂದಾವನವು ತೂಗಾಡುವದು” ಎಂದು ನುಡಿಯುತ್ತ, ಆ ಭುಜಂಗಸ್ವಾಮಿಗಳ ವೃಂದಾವನದ ಕಡೆಗೆ ನೋಡತೊಡಗಿದರು. ಹೀಗೆ ಜನರ ಲಕ್ಷವೆಲ್ಲ ವೃಂದಾವನದ ಕಡೆಗೆ ಇರಲು, ಇತ್ತ ಬಾಲಭುಜಂಗಯೋಗಿಗಳು ಪಕ್ಕನೆ ಮುಸುಗುಹಾಕಿಕೊಂಡು ಅನುಷ್ಠಾನಕ್ಕೆ ಕುಳಿತುಬಿಟ್ಟರು! ಇದನ್ನೆಲ್ಲ ಅಪ್ಪಾಸಾಹೇಬರು ಬೆರಗಾಗಿ ನೋಡುತ್ತಲಿದ್ದರು! ಇಂದು ತಾವು ಒಂದು ದಿವ್ಯವಾದ ಹೊಸಸೃಷ್ಟಿಯಲ್ಲಿ ವ್ಯವಹರಿಸುತ್ತಿರುವೆವೆಂಬ ಭಾವವು ಅವರಿಗೆ ಆಯಿತು! ಆದರೆ ವೃಂದಾವನವು ಅಲ್ಲಾಡುವದೆಂಬ ಮಾತು ಅವರಿಗೆ ವಿಶ್ವಸನೀಯವಾಗಿ ತೋರಲಿಲ್ಲ! ಇದೊಂದು ಜನರಭ್ರಮೆಯಿರುವದೆಂದು ಅವರು ಭಾವಿಸಿದರು; ಆದರೆ ಈ ವಿಚಿತ್ರ

ವಾದ ತಪೋಭೂಮಿಯಲ್ಲಿ ಯಾವಯಾವ ಅದ್ಭುತ ಸಂಗತಿಗಳು ಕಣ್ಣಿಗೆ ಬಿದ್ದಾವೆಂಬದನ್ನು ನಮ್ಮಂಥ ಪಾಮರರು ತರ್ಕಿಸಲು ಅಶಕ್ಯವಾದದ್ದರಿಂದ, ವೃಂದಾವನದ ಆಂದೋಲನದ ಚಮತ್ಕಾರವನ್ನು ಮುಂದಿನಮುಸುಕಿನಕಾಲಕ್ಕೆ ಪರೀಕ್ಷಿಸೋಣವೆಂದು ಆ ಸಂಸ್ಥಾನಿಕನು ನಿಶ್ಚಯಿಸಿದನು.

---

# ೧೨ನೇ ಅಧ್ಯಾಯ

## ಭುಜಂಗಯೋಗಿಯ ನಿಸ್ಪೃಹತೆಯೂ, ಬೇರೆ ಮಹಿಮೆಗಳೂ



ಭಾವಿಕರಾದ ಅಪ್ಪಾಸಾಹೇಬರ ಮನಸ್ಸನ್ನು ಬಾಲಭುಜಂಗಯೋಗಿಯ ತಪಶ್ಚರ್ಯವು ಸಂಪೂರ್ಣವಾಗಿ ಆಕರ್ಷಿಸಿಬಿಟ್ಟಿತು! ಇದರಲ್ಲಿ ಮೂಲ ಭುಜಂಗಸ್ವಾಮಿಗಳ ಜಡವೃಂದಾವನವು ಅಲ್ಲಾಡುವದನ್ನು ಕೇಳಿಯಂತು, ಲೋಕಾಪುರಪೀಠವು ಜಾಗ್ರತಪೀಠವೆಂಬ ಭಾವವು ಆ ಭಾವಿಕ ಸಂಸ್ಥಾನಿಕರಲ್ಲಿ ಉತ್ಪನ್ನವಾಯಿತು; ಆದ್ದರಿಂದ ಅವರು ಪ್ರತಿಮುಸುಕು ತೆಗೆಯುವಕಾಲಕ್ಕೂ ಲೋಕಾಪುರಕ್ಕೆ ಬರತೊಡಗಿದರು; ಅಲ್ಲದೆ, ಪ್ರತಿಮುಸುಕು ತೆಗೆಯುವಕಾಲಕ್ಕೆ ಅವರು ಹಣ್ಣುಹಂಪಲಗಳನ್ನು ಸ್ವಾಮಿಗಳಿಗೆ ಕಳಿಸಹತ್ತಿದರು ಅವರು ಮೊದಲನೆಯಸಾರೆ ಬಂದಾಗ, ಬಾಲಭುಜಂಗ ಯೋಗಿಗಳಿಗೆ ಸ್ನಾನಕ್ಕೆ ಹೋಗುವಾಗ ತ್ರಾಸವಾಗಬಾರದೆಂದು, ಕಾವಲಿಯದಾರಿಯುದ್ದಕ್ಕೆ ಆಸರಕ್ಕಾಗಿ ಕೋಲುಗಳನ್ನು ನಿಲ್ಲಿಸಿ, ಕಿರಿಪಾವಟಿಗೆಗಳ ಮಾಡಿಸಿದ್ದರು. ಈಗ ಬಾಲಭುಜಂಗ

ಸ್ವಾಮಿಗಳ ತಲೆಯಮೇಲಿನ ಹತ್ತಿಯಕಟ್ಟಿಗೆಯ ಚಪ್ಪರವನ್ನು ನೋಡಿ, ಮಠದವಿರಾಗವೃತ್ತಿಗಾಗಿ ಆಶ್ಚರ್ಯವಾಗಲು, ಪರಮಹಂಸರ ವೃಂದಾವನದಮೇಲೊಂದು ಮಂದಿರವನ್ನು ಕಟ್ಟಿಸಬೇಕೆಂಬ ವಿಚಾರವು ಆ ಧರ್ಮಿಷ್ಠಸಂಸ್ಥಾನಿಕರ ಮನಸ್ಸಿನಲ್ಲಿ ಉತ್ಪನ್ನವಾಯಿತು ; ಆದರೆ ಅದಕ್ಕೆ ಬಾಲಭುಜಂಗಯೋಗಿಗಳ ಒಪ್ಪಿಗೆಯಿಲ್ಲದೆ ಅವರಿಗೆ ಏನು ಮಾಡಲಿಕ್ಕೂ ಬರುವಹಾಗಿದ್ದಿಲ್ಲ ; ಯಾಕಂದರೆ ಸಮಾಧಿಯ ಕಿರಿಕಟ್ಟೆಯಮೇಲೆ ಸಮಾಧಿಗೆ ಹೊಂದಿಯೇ ಕುಳಿತು ಆ ಬಾಲಯೋಗಿಗಳು ಅನುಷ್ಠಾನ ಮಾಡುತ್ತಲಿದ್ದರು.

ಹೀಗೆ ಇಚ್ಛೆಯುಂಟಾದ ತರುವಾಯದಲ್ಲಿ ಒಮ್ಮೆ ಅಪ್ಪಾಸಾಹೇಬರು ಲೋಕಾಪುರಕ್ಕೆ ಬಂದಾಗ, ಮುಸಗು ತೆಗೆದರಾತ್ರಿ ಬಾಲಭುಜಂಗಯೋಗಿಗಳನ್ನು ಕುರಿತು— “ ಮಹಾಸ್ವಾಮಿ, ಪರಮಹಂಸರ ವೃಂದಾವನದಮೇಲೊಂದು ಮಂದಿರವನ್ನು ಕಟ್ಟಿಸಬೇಕೆಂಬ ಇಚ್ಛೆಯುಂಟಾಗಿದೆ; ಆ ನನ್ನ ಇಚ್ಛೆಯನ್ನು ಮಹಾಸ್ವಾಮಿಗಳು ಪೂರ್ಣಮಾಡಬೇಕು ” ಎಂದು ಪ್ರಾರ್ಥಿಸಿದರು. ಅದಕ್ಕೆ ಸ್ವಾಮಿಗಳು-- “ ಅಪ್ಪಾಸಾಹೇಬರೇ, ಸಮಾಧಿಯ ಮೇಲೆ ಮಂದಿರವೇತಕ್ಕೆ ಬೇಕು ? ಮುನ್ನೂರುವರ್ಷಗಳಿಂದಲೂ ಪರಮಹಂಸರ ವೃಂದಾವನವು ಬೈಲಲ್ಲಿಯೇ ಇರುವದು. ಅದರ ಮೇಲೆ ಮಂದಿರವು ಬೇಕಾಗಿದ್ದರೆ, ಅವರು ತಮ್ಮ ಸಮಾಧಿಯನ್ನು ಕಟ್ಟಿಸಿಕೊಂಡಂತೆ ಮಂದಿರವನ್ನು ತಾವಾದರೂ ಕಟ್ಟಿಸಿಕೊಳ್ಳಬಹುದಾಗಿತ್ತು ; ಅಥವಾ ಮುಂದೆ ಅವರ ಮಹಾಸಮರ್ಥ ಶಿಷ್ಯರಾದರೂ ಕಟ್ಟಿಸಬೇಕಾಗಿತ್ತು; ಆದರೆ ಹಾಗೆ ಆಗದಿರುವಾಗ, ಈಗ ಮಂದಿರ ಕಟ್ಟಿಸುವ ಆವಶ್ಯಕತೆಯು ತೋರುವದಿಲ್ಲ. ಪರಮಹಂಸರ ವೃಂದಾವನದಂತೆ ನಮ್ಮ ಉಳಿದ ಗುರುಗಳವೃಂದಾವನಗಳಾದರೂ ಬೈಲಲ್ಲಿಯೇ ಇರುತ್ತವೆ ; ಅಲ್ಲದೆ, ಪರಮಹಂಸರೇ ಮೊದಲಾಗಿ ನಮ್ಮ ಹಿಂದಿನ ಗುರುಗಳೆಲ್ಲರೂ ಜೀವಿಸುತ್ತಿರುವಾಗಾದರೂ, ಬಹಿರಾಡಂಬರಕ್ಕೆ ಆಸ್ಪದಕೊಡದೆ ಬಾಲೋನ್ಮತ್ತಪಿಶಾಚಗಳಂತೆ ಆಚರಿಸಿ, ತಮ್ಮ ಪ್ರಖರವಾದ ಅಂತಸ್ತೇಜಸ್ಸನ್ನು ಬೂದಿಮುಚ್ಚಿದ ಕೆಂಡದಂತೆ ಕಾದುಕೊಳ್ಳುತ್ತ ಬಂದಿರುವರು ! ಆದ್ದರಿಂದಲೇ “ ಬಚ್ಚಿದ್ದು ಬೆಳೆಯಿತು, ತಿರಿ

ದದ್ದು ಅಳಿಯಿತು" ಎಂಬಸಿದ್ಧಾಂತದಂತೆ. ನಮ್ಮ ಲೋಕಾಪುರದ ಪೂರ್ವ ಗುರುಗಳ ಅಂತಸ್ತೇಜಸ್ಸುನಷ್ಟವಾಗದೆ, ಮೂಲಗುರು ಅಜಮೀರಸಾಹೇಬರ ವರಪ್ರದಾನದಂತೆ ಈವರೆಗೂ ನಮ್ಮ ಪೀಠಸ್ಥರಿಗೆ ಜನ್ಮತಃ, ಅಥವಾ ಪೀಠಕ್ಕೆ ಕುಳಿತದಿವಸದಿಂದ ಸಿದ್ಧಿಗಳೂ, ಜ್ಞಾನವೂ ಪ್ರಾಪ್ತವಾಗುತ್ತ ಬಂದಿರುವವು!

ಹೀಗೆ ನುಡಿದು ಬಾಲಭುಜಂಗಯೋಗಿಗಳು ಸ್ವಲ್ಪ ಹೊತ್ತು ಸುಮ್ಮ ನಿದ್ದು ಮತ್ತೆ ಅಪ್ಪಾಸಾಹೇಬರನ್ನು ಕುರಿತು— "ಅಪ್ಪಾಸಾಹೇಬರೇ, ಪೀಠದ ಜಾಗ್ರತಿಯು ಹೀಗೆಯೇ ಇರಬೇಕಾಗಿದ್ದರೆ, ಸಮಾಧಿಯ ಮೇಲೆ ಮಂದಿರ ಕಟ್ಟದಿರುವದೇ ನೆಟ್ಟಗೆ! "ತಂಗಳ ದುಡ್ಡು ಕಟ್ಟುವವರ ಗಂಡ" ಎಂಬ ಬಿರುದು ಇದ್ದ ಮಠಕ್ಕೆ ಲೌಕಿಕವೈಭವವೇತಕ್ಕೆ? ತಪಸ್ವಿಗಳು ಶೀತೋಷ್ಣ, ಸುಖದುಃಖ, ಮಾನಾಪಮಾನ ಮೊದಲಾದ ದ್ವಂದ್ವಗಳನ್ನು ಸಹಿಸುವದು ಅವಶ್ಯವಾಗಿರುವದು; ಆದ್ದರಿಂದಲೇ ಅವರು ತಾವು ಬದುಕಿರುವಾಗಿನಂತೆ ಈಗಾದರೂ ಚಳಿ-ಮಳೆ-ಬಿಸಿಲು-ಗಾಳಿಗಳ ಬಾಧೆಯನ್ನು ಸಹಿಸುವನೆವದಿಂದ ಜಗತ್ತಿಗೆ, ವಿಶೇಷವಾಗಿ ತಮ್ಮ ಶಿಷ್ಯಪರಂಪರೆಗೆ ಪಾಠವನ್ನು ಕಲಿಸುತ್ತಿರುವರು! ಹಾಗಿಲ್ಲದಿದ್ದರೆ, ಈಗ ಬೇರೆಯಾವದೊಂದು ಸ್ಥಳನೋಡಿ, ಅಥವಾ ತನ್ನ ಬಡತನದ ಮಠದಲ್ಲಿಯೊತ್ತಟ್ಟಿಗೆ ನಾನು ಅನುಷ್ಠಾನಕ್ಕೆ ಕೂಡುವಂತೆ ಮುತ್ತಯ್ಯನು ನನ್ನನ್ನು ಪ್ರೇರಿಸದೆ, ತನ್ನ ಬೈಲವೃಂದಾವನದ ಕಿರಿಕಟ್ಟೆಯ ಮೇಲೆ ಕೂಳಿತುಕೊಳ್ಳುವಂತೆ ಯಾಕೆ ಪ್ರೇರಿಸುತ್ತಿದ್ದನು? ಆದ್ದರಿಂದ ಸಮಾಧಿಯಮೇಲೆ ಮಂದಿರ ಕಟ್ಟಿಸುವದು ಬೇಡ. ಮೇಲಾಗಿಮುತ್ತಯ್ಯನ ಸಮಾಧಿಯ ಬಳಿಯಿಂದ ನಾನು ಅತ್ತಿತ್ತ ಉಲುಕುವಹಾಗಿಲ್ಲ; ಮೂರುದಿನಕ್ಕೊಂದು ರಾತ್ರಿಮಾತ್ರ ಮುಸುಕು ತೆಗೆದರೂ ಸಮಾಧಿಯ ಬಳಿಯಲ್ಲಿಯೇ ಆಸನಚ್ಯುತಿಯಾಗದಂತೆ ಮಾತು ಕಥೆಯಾಡುತ್ತ ನಾನು ಕುಳಿತುಕೊಳ್ಳುವವನು! ಸ್ನಾನಕ್ಕಾಗಿ ಮಾತ್ರ ಸ್ವಲ್ಪಹೊತ್ತು ಸಮಾಧಿಯ ಬಿಟ್ಟುಹೋಗುವೆನು. ಅಂದಬಳಿಕ, ನನ್ನ ಅನುಷ್ಠಾನಕ್ಕೆ ಬಾಧೆಬಾರದಂತೆ ನೀವು ಪರಮಹಂಸರ ವೃಂದಾವನದ ಮೇಲೆ, ಅರ್ಥಾತ್ ನನ್ನ ತಲೆಯ ಮೇಲೆ ಮಂದಿರ ಕಟ್ಟಿಸುವದಾದರೂ

ಹೇಗೆ? ಆದ್ದರಿಂದ ನೀವು ಮಂದಿರವ ಕಟ್ಟಿಸುವ ಉಸಾಬರಿಗೆ ಹೋಗದಿರುವದೇ ನೆಟ್ಟಗೆ! ಇದರ ಮೇಲೆಯೂ ಮಂದಿರವ ಕಟ್ಟಿಸುವ ಪ್ರಬಲವಾದ ಇಚ್ಛೆಯು ನಿಮಗೆ ಇದ್ದರೆ, ನಮ್ಮ ತಪಸ್ಸಿಗೆ ಬಾಧೆಬಾರದಂತೆ ಮಂದಿರವನ್ನು ಕಟ್ಟಿಸಿರಿ; ಮುತ್ತಯ್ಯನ ವೃಂದಾವನದ ಮೇಲೆ ಭಕ್ತಿಯಿಂದ ನೀವು ಮಂದಿರ ಕಟ್ಟಿಸುತ್ತೇವೆಂದು ಅನ್ನುತ್ತಿರಲು, ನಾನಾದರೂ ಯಾಕೆ ಬೇಡವೆನ್ನಬೇಕು? ಮುತ್ತಯ್ಯನ ಇಚ್ಛೆಯುಮುಂದೆ ನನ್ನ ಅನುಷ್ಠಾನದ ಪ್ರತಿಷ್ಠೆಯಾದರೂ ಏನು? ಮುತ್ತಯ್ಯನ ಮನಸ್ಸಿಗೆ ಬಂದರೆ ನಿಮ್ಮ ಮಂದಿರವು ಪೂರ್ಣವಾಗುವದು!

ಹೀಗೆ ನುಡಿದ ಬಾಲಭುಜಂಗಯೋಗಿಯ ನಿಸ್ಪೃಹತೆಯ ಮಾತುಗಳನ್ನು ಕೇಳಿ, ಅಂತಹ ವ್ಯವಹಾರದಕ್ಷ ತೇಜಸ್ವಿ ಅಪ್ಪಾಸಾಹೇಬರಿಗೂ, ಏನು ಮಾತಾಡಬೇಕೆಂಬನು ತೋಚದಾಯಿತು! ವೈರಾಗ್ಯಭಾಗ್ಯದ ಮುಂದೆ, ರಾಜ್ಯ, ಸಾಮ್ರಾಜ್ಯ, ವೈರಾಜ್ಯಾದಿಗಳ ಭಾಗ್ಯಗಳ ಬೆಲೆಯಾದರೂ ಏನು? ಹೀಗೆ ಅಪ್ಪಾಸಾಹೇಬರು ಏನು ಮಾತಾಡಬೇಕೆಂಬದು ಗೊತ್ತಾಗದೆ ಆಲೋಚಿಸುತ್ತ ನಿಂತಿರಲು, ಬಾಲಭುಜಂಗಯೋಗಿಗಳೇ ಅಪ್ಪಾಸಾಹೇಬರನ್ನು ಕುರಿತು—"ಅಪ್ಪಾಸಾಹೇಬ, ನೀವು ಖಿನ್ನರಾಗ ಬೇಡಿರಿ. ನಮ್ಮ ಅನುಷ್ಠಾನಕ್ಕೆ ಬಾಧೆಬಾರದಂತೆ ನೀವು ಸಮಾಧಿಯ ಮೇಲೆ ಮಂದಿರವನ್ನು ಅವಶ್ಯವಾಗಿ ಕಟ್ಟಿಸಬಹುದು" ಎಂದು ನುಡಿದರು. ಅದನ್ನು ಕೇಳಿ ಅಪ್ಪಾಸಾಹೇಬರಿಗೆ ಪರಮಾನಂದವಾಯಿತು! ಕೂಡಲೆ ಆಕರ್ತೃತ್ವಶಾಲಿಗಳು ಮಂದಿರ ಕಟ್ಟಿಸುವೆನೆಂದು ಸಂಕಲ್ಪ ಮಾಡಿದರು! ಪ್ರಿಯ ವಾಚಕರೇ, ವೈಷಯಿಕ ವೈಭವವು, ಬೇಕುಬೇಕೆನ್ನುವವರಿಂದ ದೂರದೂರ ಓಡಿಹೋಗುವದು; ಆದರೆ ಆ ವೈಭವವು ಬೇಡಬೇಡೆನ್ನುವ ತೇಜಸ್ವಿಗಳ ಮೈಮೇಲೆ ತಾನಾಗಿ ಬಂದು ಬೀಳುವದು! ಬ್ರಾಹ್ಮಣಜಾತಿಯು ಮೂಲತಃ ವಿಷಯ ವೈಭವವವನ್ನು ಬೇಡಬೇಡವೆಂದು ತಿರಸ್ಕರಿಸತಕ್ಕದ್ದಾದ್ದರಿಂದ, ಅಂಥ ಬ್ರಾಹ್ಮಣರನ್ನುದ್ದೇಶಿಸಿ, ನಾವು ಹಿಂದೆಯೊಮ್ಮೆ ಹೇಳಿದಂತೆ ಮನುಮಹಾರಾಜನು—"ಸರ್ವಂ ಬ್ರಾಹ್ಮಣಸ್ಯೇದಂ" ಎಂದು ಹೇಳಿದ್ದಾನೆ! ಈ ಮನುವಾಕ್ಯವು "ಜಗತ್ತು ನಿಸ್ಪೃಹಿಗಳದು" ಎಂಬ ವ್ಯಾಪಕಾರ್ಥವನ್ನು ಸೂಚಿಸುತ್ತಿರುವದೆಂದು ತಿಳಿಯತಕ್ಕದ್ದು! ಬ್ರಾಹ್ಮಣನಾಗಿದ್ದ ಬಾಲ

ಭುಜಂಗಯೋಗಿಯ ನಿಸ್ಪೃಹತೆಯ ಒಗರು. ಆತನ ಬ್ರಾಹ್ಮಣಜಾತಿಗೆ ನಿಶ್ಚಯವಾಗಿ ಭೂಷಣವಾಗಿರುವದು!

**ಅಪ್ಪಾಸಾಹೇಬರ ಕರ್ತೃತ್ವ ಶಕ್ತಿಯು**— ಅಪ್ಪಾಸಾಹೇಬರು ಯಾವ ಕಾರ್ಯವನ್ನೇ ಮಾಡಲಿ, ಅದನ್ನು ಉದಾರಮನಸ್ಸಿನಿಂದಲೂ, ಸುವ್ಯವಸ್ಥೆಯಿಂದಲೂ ಮಾಡತಕ್ಕವರೆಂಬ ಖ್ಯಾತಿಯು ಇರುವದು. ಅದರಂತೆ ಈಗ ಪರಮಹಂಸರ ವೃಂದಾವನದ ಮೇಲಿನ ಮಂದಿರವನ್ನು ಅವರು ಬಾಲಭುಜಂಗಯೋಗಿಗಳ ಅಪ್ಪಣೆಯಾಗಿದ್ದಂತೆ, ಅವರ ತಪಸ್ಸಿಗೆ ಬಾಧೆಬಾರದ ಹಾಗೆ, ಗದ್ದಲ ಗೊಂದಲಗಳಾಗದಂತೆ ಕಟ್ಟಿಸತೊಡಗಿದರು. ಅವರು ಮೊದಲು ಸಪ್ಪಳಿಲ್ಲದೆ ಗೋಡೆಗಳನ್ನು ಕಟ್ಟಿಸಿ, ಬಳಿಕ ಮೇಲಿನ ಛಾವಣಿಯನ್ನೆಲ್ಲ ಕೆಳಗೆ ಸಿದ್ಧಮಾಡಿಸಿ, ಸ್ವಾಮಿಗಳು ಸ್ನಾನಕ್ಕೆ ಹೋಗಿ ಬರುವದರೊಳಗಾಗಿ ಅದನ್ನು ಮಂದಿರದ ಮೇಲೆ ಇಡಿಸಿದರು! ಅಲ್ಲದೆ, ಅವರು ಇನ್ನೊಂದು ಕೆಲಸವನ್ನು ಮಾಡಿದರು, ಪರಮಹಂಸರ ಸಮಾಧಿಯ ವೃಂದಾವನದ ಕಟ್ಟೆಯು ಮೊದಲು ಮಣ್ಣಿನದಿತ್ತು, ಆದರೆ ಆ ಕಟ್ಟೆಯನ್ನಾದರೂ ಅಪ್ಪಾಸಾಹೇಬರು ಬಾಲಭುಜಂಗಯೋಗಿಯ ತಪಶ್ಚರ್ಯಕ್ಕೆ ಬಾಧೆ ಬಾರದಂತೆ, ಸಂಗಮುರವರಿಯ ಕಲ್ಲುಗಳಿಂದ ಸುಂದರವಾಗಿ ಕಟ್ಟಿಸಿದರು. ಒಟ್ಟಿಗೆ, ಮಂದಿರವಾಗುವವರೆಗೆ, ಹಾಗೂ ಕಟ್ಟೆಯು ಸಿದ್ಧವಾಗುವವರೆಗೆ ಬಾಲಭುಜಂಗಯೋಗಿಯ ತಪಶ್ಚರ್ಯಕ್ಕೆ ಯಾವ ಬಗೆಯ ಪ್ರತಿಬಂಧವೂ ಆಗಲಿಲ್ಲವಂತೆ! ಆ ಪುಣ್ಯಶಾಲಿ ಸಂಸ್ಥಾನಿಕರು ಹೀಗೆ ಅತ್ಯಂತ ಭಕ್ತಿಯಿಂದಲೂ, ದಕ್ಷತೆಯಿಂದಲೂ ಕಟ್ಟಿಸಿದ್ದ ಅಚ್ಚುಕಟ್ಟಿನ ಸುಂದರ ಮಂದಿರವನ್ನೂ, ಸಂಗಮುರವರಿಯ ಸುಂದರವಾದ ಸಮಾಧಿಯ ಕಟ್ಟೆಯನ್ನೂ ಈಗಲೂ ನೋಡಬಹುದು.

ಹೀಗೆ ಅಪ್ಪಾಸಾಹೇಬರು ಬಾಲಭುಜಂಗಯೋಗಿಗಳ ಮೇಲಿನ ಭಕ್ತಿಯಿಂದ ಶ್ರೀಪರಮಹಂಸರ ಸಮಾಧಿಯಮೇಲೆ ಮಂದಿರವನ್ನು ಕಟ್ಟಿಸಿದ ಮೇಲೆ, ಬರಬರುತ್ತ ಸ್ವಾಮಿಗಳ ಮೇಲಿನ ಅವರ ಭಕ್ತಿಯು ಹೆಚ್ಚಲು, ಅವರು ಮತ್ತೆ ಬೇರೆಬೇರೆ ಸತ್ಕಾರ್ಯಮಾಡಿಸುವ ಸಂಕಲ್ಪಗಳನ್ನು ಮಾಡಿದರು. ಒಟ್ಟಿಗೆ, ಅಪ್ಪಾಸಾಹೇಬರು ಆರಂಭದಿಂದಮಾಡಿದ ಸಂಕಲ್ಪಗಳು ಆರು

ಇರುವವು, ಅವು ಯಾವದೆಂದರೆ—೧ ಪರಮಹಂಸರ ವೃಂದಾವನದ ಮೇಲೆ ಮಂದಿರಕಟ್ಟಿಸುವದು. ೨ ಪರಮಹಂಸರ ಹಳೇ ಮಠವನ್ನು ತೆಗೆದು ಹೊಸಸುಂದರಮಠಕಟ್ಟಿಸುವದು ೩ ಸ್ವಾಮಿಗಳ ಪಾದಪೂಜೆಯನ್ನು ಕೈಮುಟ್ಟಮಾಡುವದು. ೪ ಸ್ವಾಮಿಗಳ ಕೈಯಿಂದ ತನ್ನ ಬೆನ್ನಮೇಲಿನ ವಾಳವನ್ನುಮುಟ್ಟಿಸುವದು ೫ ಸ್ವಾಮಿಗಳ ಅನುಷ್ಠಾನದಉಪಯೋಗಕ್ಕಾಗಿ ಬೆಳ್ಳಿಯಪಾತ್ರೆಗಳನ್ನು ಮಾಡಿಸಿಕೊಡುವದು ೬ ಮೂಲಭುಜಂಗಸ್ವಾಮಿಗಳ ವೃಂದಾವನದ ಕಟ್ಟೆಯನ್ನು ಸಂಗಮರವರಿಯ ಕಲ್ಲಿನಿಂದ ಕಟ್ಟಿಸುವದು. ಈ ಆರು ಸಂಕಲ್ಪಗಳಲ್ಲಿ ಒಂದನೆಯ ಸಂಕಲ್ಪವು ಮಾತ್ರ ಬಾಲಭುಜಂಗಯೋಗಿಗಳ ಒಪ್ಪಿಗೆಯಿಂದ ಪೂರ್ಣವಾದದ್ದನ್ನು ಮೇಲೆ ಹೇಳಿರುತ್ತದೆ. ಉಳಿದ ಐದು ಸಂಕಲ್ಪಗಳೂ ಭುಜಂಗಯೋಗಿಗಳ ನಿಸ್ಪೃಹತೆಯಮೂಲಕ ಸತ್ಯಸಂಕಲ್ಪಗಳಾಗದ್ದರಿಂದ, ಅವು ಬೇರೆ ಬೇರೆ ಕಾರಣಗಳಿಂದ ವಿಫಲವಾದವು

ಸಂಕಲ್ಪಗಳಲ್ಲಿ ದೈವಸಂಕಲ್ಪ, ಮನುಷ್ಯಸಂಕಲ್ಪ ಎಂಬ ಎರಡು ವಿಧಗಳಿರುವವು ಸೃಷ್ಟಿಯು ದೇವನಿರ್ಮಿತವಾಗಿರುವದರಿಂದ, ಅದು ದೈವಸಂಕಲ್ಪದಿಂದಾದದ್ದು. ದೈವಸಂಕಲ್ಪವು, ಸತ್ಯಸಂಕಲ್ಪವು, ಅದು ವ್ಯರ್ಥವಾಗುವದಿಲ್ಲ; ಮನುಷ್ಯಸಂಕಲ್ಪವು ದೈವಸಂಕಲ್ಪವನ್ನು ಅನುಸರಿಸಿದ್ದಾಗಿದ್ದರೆ, ಅದೂ ಸತ್ಯಸಂಕಲ್ಪವೇ ಆಗುವದು; ಆದರೆ ಅದು ದೈವಸಂಕಲ್ಪವನ್ನು ಅನುಸರಿಸಿದ್ದಾಗಿರದೆ, ಕೇವಲ ಮನುಷ್ಯಕರ್ಮಪ್ರವಾಹಪತಿತವಾಗಿದ್ದರೆ, ಅಂಥ ಮನುಷ್ಯ ಸಂಕಲ್ಪವು ವ್ಯರ್ಥವಾಗುವದರಿಂದ, ಅದು ಭ್ರಷ್ಟ ಸಂಕಲ್ಪವೆನಿಸುವದು; ಯಾಕಂದರೆ ಜಗದ್ವ್ಯವಹಾರಗಳೆಲ್ಲ ದೈವೀಸಂಕಲ್ಪದಿಂದಲೇ ನಡೆದಿರುವವು. ಅಪ್ಪಾಸಾಹೇಬರ ಮಂದಿರ ಕಟ್ಟಿಸುವ ಸಂಕಲ್ಪವು ಮನುಷ್ಯಸಂಕಲ್ಪವಾಗಿದ್ದರೂ, ಅದು ದೈವಸಂಕಲ್ಪವನ್ನು, ಅಂದರೆ, ದೈವೀಭಾವದ ಬಾಲಭುಜಂಗಯೋಗಿಗಳ ಸಂಕಲ್ಪವನ್ನು ಅನುಸರಿಸಿದ್ದದ್ದರಿಂದ, ಆ ಬಾಲಭುಜಂಗಯೋಗಿಗಳ ಕೃಪೆಯಾಗಲು, ಅದು ಪೂರ್ಣವಾಯಿತು; ಆದರೆ ಅಪ್ಪಾಸಾಹೇಬರ ಉಳಿದ ಐದು ಸಂಕಲ್ಪಗಳು ದೈವಸಂಕಲ್ಪವನ್ನು ಅನುಸರಿಸದವು, ಅಂದರೆ

ಕೇವಲ ಅಪ್ಪಾಸಾಹೇಬರ ದ್ರವ್ಯಾನುಕೂಲತೆಯ ಅಭಿಮಾನ-ಪ್ರೇರಿತಗಳು ಆದದ್ದರಿಂದ, ಅವು ವಿಫಲಗಳಾದವು, ಹೇಗಂದರೆ—

**೨ನೆಯ ಸಂಕಲ್ಪದ ವಿಫಲತೆ**—ಅಪ್ಪಾಸಾಹೆಬರು ಮಹಾ ದೈವಶಾಲಿಗಳೂ, ಧರ್ಮಿಷ್ಠರೂ, ದೇವ-ಬ್ರಾಹ್ಮಣ-ಸಾಧು-ಸತ್ಪುರುಷ ರಲ್ಲಿ ಅತ್ಯಂತ ಶ್ರದ್ಧೆಯುಳ್ಳವರೂ ಇದ್ದರೆಂಬದನ್ನು ಅವರ ಚರಿತ್ರಾವ ಲೋಕನದಿಂದ ಅರಿತುಕೊಳ್ಳಬಹುದು. ಅವರಿಂದ ಜಮುಖಂಡಿಯ ರಾಮ ತೀರ್ಥದ ಅರಣ್ಯವು, ಇಂದ್ರನ ಅಮರಾವತಿಯಾದದ್ದನ್ನು ಅವರ ಚರಿ ತ್ರದಲ್ಲಿ ಹೇಳಿದೆ. ಅಂಥವರಿಗೆ ಲೋಕಾಪುರದ ಬಡಮಠದ ಕಟ್ಟಡವು ಮನ ಸ್ಸಿಗೆ ಬಾರದೆ, ಅವರು ಭಕ್ತಿಪ್ರೇರಿತರಾಗಿ ಲೋಕಾಪುರದ ಹಳೇ ಮಠವನ್ನು ತೆಗೆದು ಸುಂದರವಾದ ಹೊಸ ಮಠವನ್ನು ಕಟ್ಟಿಸುವ ಮನಸ್ಸು ಮಾಡಿದ್ದು ಆಶ್ಚರ್ಯವಲ್ಲ; ಆದರೆ ಆ ಮಠಕಟ್ಟುವದು ಬಾಲಭುಜಂಗಯೋಗಿಗಳ ಮನ ಸ್ಸಿಗೆ ಬಾರದಿದ್ದರೂ, ಅವರು ಪ್ರತ್ಯಕ್ಷವಾಗಿ ಅಪ್ಪಾಸಾಹೇಬರಿಗೆ ಬೇಡೆಂದು ಹೇಳದೆ, ಪರ್ಯಾಯದಿಂದ ಪ್ರತಿಬಂಧವುಂಟಾಗುವಂತೆ ಮಾಡಿದರು. ಅಪ್ಪಾಸಾಹೇಬರು ಸಾವಿರಾರು ರೂಪಾಯಿಗಳ ವೆಚ್ಚದ ಮಠದ ಅಂದಾಜ ಪತ್ರಿಕೆಯನ್ನು ಮಾಡಿದರು; ಮಠದ ನಕಾಶವೂ ಸಿದ್ಧವಾಯಿತು; ಆದರೆ ಮಠದ ಸ್ಥಳವನ್ನು ಚಚ್ಚೌಕು ಮಾಡುವ ಪ್ರಸಂಗದಲ್ಲಿ, ಒಬ್ಬ ಸಾಮಾನ್ಯ ಮನುಷ್ಯನು ಆಡಿದ ಮಾತು ಅಪ್ಪಾಸಾಹೇಬರ ಮನಸ್ಸಿಗೆಹತ್ತಿ ಅವರಲ್ಲಿ ಅಭಿಮಾನವುಂಟಾಗಲು, ಅವರು ಮಠಕಟ್ಟಿಸುವ ವಿಚಾರವನ್ನು ಬಿಟ್ಟುಬಿ ಟ್ಟರು! ದೈವಸಂಕಲ್ಪವಲ್ಲದ ಮನುಷ್ಯಸಂಕಲ್ಪವು ಹೀಗೆ ವಿಫಲವಾದದ್ದು ಸ್ವಾಭಾವಿಕವೇ ಸರಿ!

**೩ನೇ ಸಂಕಲ್ಪದ ವಿಫಲತೆ**—ಬಾಲಭುಜಂಗಯೋಗಿಗಳ ಹನ್ನೆ ರಡು ವರ್ಷ ಎಂಟುತಿಂಗಳ ತಪಶ್ಚರ್ಯದಲ್ಲಿ, ಅನ್ಯರು ಅವರ ದೇಹಸ್ಪರ್ಶ ಮಾಡಿದ್ದು ಮೂರೇಸಾರೆ ಎಂದು ಹಿಂದೆ ಹೇಳಿಯದೆ; ಆದರೆ ಅಪ್ಪಾಸಾ ಹೇಬರು ಅಂಥವರ ಪಾದಪೂಜೆ ಮಾಡಬೇಕೆಂಬ ಉತ್ಕಟೇಚ್ಛೆಯಿಂದ, ಅಂಜುತ್ತಂಜುತ್ತ ಆ ವಿಷಯವಾಗಿ ಬಾಲಭುಜಂಗಯೋಗಿಗಳನ್ನು ಪ್ರಾರ್ಥಿಸಿದರು; ಆದರೆ ಯೋಗಿಗಳು ಅದಕ್ಕೆ ಒಪ್ಪಲಿಲ್ಲ ; ಒಪ್ಪಿದ್ದರೆ

ಮಠಕ್ಕೆ ದೊಡ್ಡ ಲಾಭವಾಗುವಸಂಭವವಿತ್ತು. ಆದರೆ " ನಿಸ್ಪೃಹಸ್ಯ ತೃಣಂ ಜಗತ್ " ಎಂಬ ಉಕ್ತಿಯಂತೆ, ಜಗತ್ತೇ ತೃಣವಾಗಿತೋರುವ ಬಾಲಭುಜಂಗಯೋಗಿಗಳಿಗೆ, ಜಗತ್ತಿನೊಳಗಿನ ಯಾವ ವಸ್ತುಗಳ ಇಚ್ಛೆ ಇದ್ದೀತು ? ನಿಸ್ಪೃಹಿಗಳು ಮನಸ್ವಿಗಳು, ಅವರಿಗೆ ರಾಜನೂ ಅಷ್ಟೇ, ರಂಕನೂ ಅಷ್ಟೆ ! ತಮ್ಮ ಮನಸ್ಸಿಗೆ ಬಂದಂತೆ ನಡೆಯುವಾಗ ಅವರು ಯಾರನ್ನೂ ಲಕ್ಷಿಸುವವರಲ್ಲ !

**೪ನೇ ಸಂಕಲ್ಪದ ವಿಫಲತೆ**—ಅಪ್ಪಾಸಾಹೇಬರ ಬೆನ್ನಮೇಲೆ ಪ್ರಬಲ ಶತ್ರುವಿನಂತೆ ಒಂದು ವಾಳವು ಇಪ್ಪತ್ತು ವರ್ಷ ಅಭಿವೃದ್ಧವಾಗುತ್ತಲಿದ್ದು, ಕಡೆಗೆ ಅದು ಆ ಧರ್ಮಿಷ್ಠ ಸಂಸ್ಥಾನಿಕರ ಪ್ರಾಣಹರಣ ಮಾಡಿದ್ದನ್ನು ಅವರ ಚರಿತ್ರದಲ್ಲಿ ಹೇಳಿದೆ. ತಮ್ಮ ಆ ವಾಳದ ನಿವಾರಣಕ್ಕಾಗಿ ಅಪ್ಪಾಸಾಹೇಬರು ಔಷಧೋಪಚಾರಾದಿ ವಿವಿಧ ಉಪಾಯಗಳನ್ನು ಮಾಡಿದರು ; ಸಾಧು–ಸತ್ಪುರುಷರಿಗೂ, ದೇವರಿಗೂ ಶರಣುಹೋದರು ; ಆದರೂ ಅವೆಲ್ಲ ವ್ಯರ್ಥವಾದದ್ದರ ಉಲ್ಲೇಖವು ಅವರ ಚರಿತ್ರದಲ್ಲಿ ಆಗಿರುವದು. ತಮ್ಮ ಆ ವಾಳವನ್ನು ಬಾಲಭುಜಂಗಯೋಗಿಗಳು ಸ್ಪರ್ಶಮಾಡಿದರೆ, ಅದರ ನಿವಾರಣವಾಗುವದೆಂಬದರ ನಂಬಿಗೆಯು ಅಪ್ಪಾಸಾಹೇಬರಿಗೆ ಇದ್ದದ್ದರಿಂದ, ಅದನ್ನು ಸ್ಪರ್ಶಮಾಡಲು ಅವರು ಬಾಲಭುಜಂಗಯೋಗಿಗಳನ್ನು ಪ್ರಾರ್ಥಿಸಿದರು ; ಆದರೆ ಯೋಗಿಗಳು ಅದಕ್ಕೆ ಒಪ್ಪಲಿಲ್ಲ ; ಆಗ ತಾವು ಕೈಮುಟ್ಟಿ ಅಂಗಾರವನ್ನಾದರೂ ಕೊಡಬೇಕೆಂದು ಅಪ್ಪಾಸಾಹೇಬರು ಸ್ವಾಮಿಗಳಿಗೆ ಹೇಳಿಕೊಂಡರು ; ಅದಕ್ಕೆ ಸ್ವಾಮಿಗಳು— " ಅಪ್ಪಾಸಾಹೇಬ, ಕೈಮುಟ್ಟಿ ಅಂಗಾರಕೊಡಲಿಕ್ಕೆ ನನ್ನಲ್ಲೇನು ಮಹತ್ವವದೆ ? ಹತ್ತುಮಂದಿಯಲ್ಲಿ ನಾನೊಬ್ಬ ಹನ್ನೊಂದನೆಯವನು ! ಆಗೋ, ಅಲ್ಲಿ ಮಹಾತ್ಮರಾದ ಪರಮಹಂಸರ ಅಂಗಾರವಿದೆ, ಅದನ್ನು ತಕ್ಕೊಂಡು ಹಚ್ಚಿರಿ" ಎಂದು ಹೇಳಿದರು! ಪಾಪ! ಸ್ವಾಮಿಗಳು ಹೀಗೆ ಅಪ್ಪಾಸಾಹೇಬರ ಮನಸ್ಸು ನೋಯಿಸತಕ್ಕದ್ದಿದ್ದಿಲ್ಲವೆಂದು ವಾಚಕರು ಅನ್ನಬಹುದು ; ಆದರೆ ಸ್ವಾಮಿಗಳು ಹಾಗೆ ಯಾಕೆ ಮಾಡಿದರೆಂಬದು ಅವರಿಗೇಗೊತ್ತು. ನಮ್ಮಂಥ ಪಾಮರರಿಗೆ ಅದರ ಕಾರಣವು ಗೊತ್ತಾಗದ್ದರಿಂದ, ನಮ್ಮ

ಯೋಗ್ಯತೆಯಂತೆ ನಾವು ಏನಾದರೂ ಕಲ್ಪಿಸುವದರಲ್ಲಿ ಅರ್ಥವಿಲ್ಲವು. " ಸಂತಃಸ್ವಯಂಪರ ಹಿತೇಷುಕೃತಾಭಿಯೋಗಾಃ " ಎಂಬ ಭರ್ತೃಹರಿಯ ಉಕ್ತಿಯಂತೆ, ಸಂತರ ಕೃತಿಯು ಜಗತ್ಕಲ್ಯಾಣಕಾರಿಯಾದದ್ದರಿಂದ, ಸ್ವಾಮಿಗಳ ಈ ಕೃತಿಯು ಅಪ್ಪಾಸಾಹೇಬರ ಕಲ್ಯಾಣಕ್ಕಾಗಿಯೇ ಇರಬೇಕಾಗುವದು. ಹಿಂದಕ್ಕೆ ಮಠದ ರಾಜಿಎಂಬ ಮುಸಲ್ಮಾನಜಾತಿಯ ಹುಡುಗೆಯ ಹೋಗಿದ್ದ ಎರಡೂ ಕಣ್ಣುಗಳನ್ನು ಬಾಲಭುಜಂಗಯೋಗಿಗಳು ತಂದುಕೊಟ್ಟದ್ದು, ರಾಜಿಯಕಲ್ಯಾಣಕ್ಕಾಗಿ ಇರುವಂತೆ, ಅಪ್ಪಾಸಾಹೇಬರ ವಾಳವನ್ನು ಅವರ ಪ್ರಾರ್ಥನೆಯಂತೆ ಸ್ಪರ್ಶಮಾಡಿ ಅದರ ನಿವಾರಣ ಮಾಡದೆಯಿದ್ದದ್ದಾದರೂ ಅಪ್ಪಾಸಾಹೇಬರ ಕಲ್ಯಾಣಕ್ಕಾಗಿಯೇ ಎಂದು ನಿಃಸಶಯವಾಗಿ ತಿಳಿದುಕೊಳ್ಳತಕ್ಕದ್ದು !

**೫ನೇ ಸಂಕಲ್ಪದ ವಿಫಲತೆ**—ಬಾಲಭುಜಂಗಯೋಗಿಗಳ ಅನುಷ್ಠಾನಕ್ಕಾಗಿ ಬೆಳ್ಳಿಯ ಪಾತ್ರೆಗಳನ್ನು ಮಾಡಿಸಿಕೊಡಬೇಕೆಂದು ಶ್ರೀಮಂತರಾದ ಅಪ್ಪಾಸಾಹೇಬರ ಮನಸ್ಸಿನಲ್ಲಿ ಬಂದಿತು. ಆಗ ಅವರು ಬೆಳ್ಳಿಯ ತಂಬಿಗೆ, ಬೆಳ್ಳಿಯ ಪಂಚಪಾತ್ರೆ, ಬೆಳ್ಳಿಯ ನೌಟು, ಬೆಳ್ಳಿಯ ತಾಭಾಣ, ಬೆಳ್ಳಿಯ ಧೂಪಾರತಿ ಮುಂತಾದ ನೂರಾರು ರೂಪಾಯಿ ಬೆಲೆಯ ಸಾಮಾನುಗಳನ್ನು, ಸ್ವಾಮಿಗಳ ಒಪ್ಪಿಗೆ ಪಡೆಯದೆ ಮಾಡಿಸಿದರು. ಬಳಿಕ ಸ್ವಾಮಿಗಳು ಮುಸುಕುತೆಗೆಯುವದಿವಸ ಅವರು, ಲೋಕಾಪುರಕ್ಕೆ ಬಂದು, ಆ ಬೆಳ್ಳಿಯ ಸಾಮಾನುಗಳನ್ನು ಸ್ವಾಮಿಗಳಮುಂದೆ ಇಟ್ಟು, ನಮಸ್ಕಾರಮಾಡಲು, ಸ್ವಾಮಿಗಳು—" ಅಪ್ಪಾಸಾಹೇಬ, ಇವನ್ನೇಕೆ ತಂದಿರಿ? " ಎಂದು ಕೇಳಿದರು. ಆಗ ಆ ಮೂರ್ತಿಮಂತ ವೈರಾಗ್ಯದ ಮುಂದೆ—" ನಿಮ್ಮ ಅನುಷ್ಠಾನಕ್ಕಾಗಿ ತಂದಿರುವೆನು " ಎಂದು ಹೇಳಲಿಕ್ಕೆ ಧೈರ್ಯಸಾಲದ್ದರಿಂದ —" ಮಹಾಸ್ವಾಮಿ, ಇವನ್ನು ಪರಮಹಂಸರ ಪೂಜೆಯ ಉಪಕರಣಗಳಾಗಿ ತಂದಿರುವೆನು " ಎಂದು ಅಪ್ಪಾಸಾಹೇಬರು ಹೇಳಿದರು. ಅದಕ್ಕೆ ಸ್ವಾಮಿಗಳು —" ಒಳಿತಾಯಿತು, ಇವನ್ನು ಪರಮಹಂಸರ ಸಮಾಧಿಯ ಮುಂದೆ ಇಟ್ಟುಬಿಡಿರಿ " ಎಂದು ಹೇಳಿದರು ! ಹೀಗೆ ಸ್ವಾಮಿಗಳು ಹೇಳಿದ್ದರಲ್ಲಿ ನಿಸ್ಪೃಹತೆಯು ತುಂಬಿತುಳುಕುತ್ತಿರುವದು.

ಮತ್ತೊಬ್ಬ ಆಶೆಬುರಕರಾಗಿದ್ದರೆ, –“ ಇವು ಬೆಳ್ಳಿಯ ಪಾತ್ರೆಗಳು, ಬೈಲಲ್ಲಿ ಇಟ್ಟರೆ ಯಾರಾದರೂ ಕದ್ದಾರು” ಎಂದು ಆಲೋಚಿಸಿ, ಅಪ್ಪಾಸಾಹೇಬರ ಮುಂದೆ—“ ಇವುಗಳ ಯಾದಿಯ ಮಾಡಿಸಿ ಇವನ್ನು ಒಳಗೆ ಕೊಡಿರಿ” ಎಂದು ಹೇಳಬಹುದಾಗಿತ್ತು ; ಆದರೆ ಮಹಾತ್ಮರಾದ ಬಾಲಭುಜಂಗ ಯೋಗಿಗಳ ವೈರಾಗ್ಯದ ವೈಭವವೇ ಅಂತಹದು ! ಅವರಿಗೆ ಬೆಳ್ಳಿಯ ಪಾತ್ರೆಗಳೂ ಅಷ್ಟೇ, ಮಣ್ಣಿನಪಾತ್ರೆಗಳೂ ಅಷ್ಟೆ ! ಆದರೆ ಅಪ್ಪಾಸಾಹೇಬರಿಗೆ ಸ್ವಾಮಿಗಳು ತಮ್ಮ ಬೆಳ್ಳಿಯಪಾತ್ರೆಗಳನ್ನು ಸ್ವೀಕರಿಸದೆ ಇದ್ದದ್ದಕ್ಕಾಗಿ ಅಸಮಾಧಾನವಾಯಿತಲ್ಲದೆ, ಬಾಲಭುಜಂಗಯೋಗಿಗಳು ಹೇಳಿದಂತೆ ತಮ್ಮ ಆ ಪಾತ್ರೆಗಳನ್ನು ಪರಮಹಂಸರ ಸಮಾಧಿಯಮುಂದೆ ಇಟ್ಟುಬಿಡುವಷ್ಟು ನಿಸ್ಪೃಹತೆಯು ಅವರಲ್ಲಿ ಉತ್ಪನ್ನವಾಗಲಿಲ್ಲ ; ಅವರು ಸ್ವಾಮಿಗಳ ತಂದೆಯವರಕೈಯಲ್ಲಿ ಪಾತ್ರೆಗಳ ಯಾದಿಯಮಾಡಿಸಿ ಆ ಪಾತ್ರೆಗಳನ್ನು ಕೊಟ್ಟರು. ಬೋಧಶ್ರವಣಮಾತ್ರದಿಂದ, ಅಥವಾ ಪ್ರತ್ಯಕ್ಷ ಕೃತಿನೋಡಿದ ಮಾತ್ರದಿಂದ ಮನುಷ್ಯನ ವೃತ್ತಿಪರಿವರ್ತನವಾಗುವದಿಲ್ಲವೆಂಬಮಾತೇ ಸತ್ಯವಾದದ್ದು ! ಸದ್ಗುರುವಿನ, ಅಥವಾ ಈಶ್ವರನ ಕೃಪೆಯಹೊರತು ವೃತ್ತಿಪರಿವರ್ತನವಾಗುವದಿಲ್ಲ ; ಅಂತೇ “ ಹುಟ್ಟುಗುಣವು ಹುಗಿದರೂ ಹೋಗುವದಿಲ್ಲವೆಂ” ಬ ಗಾದೆಯು ಪ್ರಸಿದ್ಧವಾಗಿರುವದು !

**೬ನೇ ಸಂಕಲ್ಪದ ವಿಫಲತೆ**—ಅಪ್ಪಾಸಾಹೇಬರಿಗೆ ಮೂಲಭುಜಂಗಸ್ವಾಮಿಗಳ ವೃಂದಾವನವು ಅಲ್ಲಾಡುವದೆಂಬ ಮಾತು ಮೊದಲಿಗೆ ವಿಶ್ವಸನೀಯವಾಗಿ ತೋರಲಿಲ್ಲವೆಂದು ಹಿಂದೆ ಹೇಳಿದೆಯಷ್ಟೆ ? ಆದರೆ ಬಾಲಭುಜಂಗಯೋಗಿಗಳು ಪ್ರತಿಒಂದುಸಾರೆ ಮುಸುಕುಹಾಕುವಕಾಲಕ್ಕೆ ಆ ಭುಜಂಗಸ್ವಾಮಿಗಳ ವೃಂದಾವನದಕಡೆಗೆ ದಿಟ್ಟಿಸಿನೋಡಲು, ಆ ವೃಂದಾವನವು ಅಲ್ಲಾಡುವದೆಂಬದನ್ನು ಅಪ್ಪಾಸಾಹೇಬರು ಪ್ರತ್ಯಕ್ಷಮನಗಂಡರು. ಬಾಲಭುಜಂಗಸ್ವಾಮಿಗಳ ಅನುಷ್ಠಾನಕ್ಕಾಗಿ ಮೂಲಭುಜಂಗಸ್ವಾಮಿಗಳು ಆನಂದಪ್ರದರ್ಶನ ಮಾಡುವಂತೆ ಅವರ ವೃಂದಾವನವು ತಲೆದೂಗುವದೆಂದು ಅಪ್ಪಾಸಾಹೇಬರು ಭಾವಿಸಿದರು ! ಹೀಗೆ ವೃಂದಾವನಸ್ಥರಾಗಿದ್ದ ಭುಜಂಗಸ್ವಾಮಿಗಳು ಈಗಲೂ ಜಾಗ್ರತರಾಗಿರುವರೆಂಬ ಭಯವು ಅಪ್ಪಾಸಾಹೇಬರಲ್ಲುಂಟಾದದ್ದರಿಂದ, ಅವರ ಸಮಾಧಿಯಕಟ್ಟೆಯನ್ನು ಸಂಗಮರ

ವರೀಕಲ್ಲಿನಿಂದ ಕಟ್ಟಿಸುವಗೊಡವಿಗೆ ಹೋಗದೆ, ಕೇವಲ ಭಯದಿಂದ ಆ ತಮ್ಮ ಸಂಕಲ್ಪವನ್ನು ವಿಫಲಮಾಡಿಕೊಂಡರು; ಆದ್ದರಿಂದ ಮೊದಲಿನ ಕಲ್ಲುಮಣ್ಣಿನಕಟ್ಟೆಯೇ ಉಳಿಯಿತು! ಮುಂದೆ ಆ ಕಟ್ಟೆಯನ್ನು ಮಠದವರು ಕಲ್ಲಿನಿಂದ ಕಟ್ಟಿಸಿರುವರು; ಆದರೆ ಅದರಿಂದ ವೃಂದಾವನದ ಆಂದೋಲನವು ಇತ್ತ ಇಪ್ಪತ್ತೈದು ವರ್ಷಗಳಿಂದ ಕಣ್ಣಿಗೆ ಬಿದ್ದಿಲ್ಲವೆಂದು ಕೇಳಿದ್ದು ಅಸಮಾಧಾನಕರವಾಗಿರುವದು.

**ಮಹಾರೋಗ ನಿವಾರಣವು** — ಬಾಲಭುಜಂಗಯೋಗಿಗಳು ಮಹಾಮಹಿಮಾಶಾಲಿಗಳೆಂಬ ಸುದ್ದಿಯು, ಲೋಕಾಪುರದ ಹತ್ತರದ ಪಂಚಗಾವಿ ಎಂಬ ಗ್ರಾಮದ ಗೌಡನ ಕಿವಿಗೆ ಮುಟ್ಟಿತು. ಆತನು ಮಹಾರೋಗಪೀಡಿತನಾಗಿದ್ದು, ಎಷ್ಟು ಉಪಾಯ ಮಾಡಿದರೂ ರೋಗಮುಕ್ತನಾಗದೆ ಚಿಂತಾಕ್ರಾಂತನಾಗಿದ್ದನು ಆತನು ತನ್ನ ಮನಸ್ಸಿನಲ್ಲಿ— “ಇಂತಹ ಮಹಿಮಾಶಾಲಿಗಳಿಂದಲೂ ನನ್ನ ರೋಗನಿವಾರಣವಾಗಲಿಕ್ಕಿಲ್ಲವೆ?” ಎಂದು ಯೋಚಿಸುತ್ತ ರಾತ್ರಿ ಮಲಗಿರಲು, ಬಾಲಭುಜಂಗಯೋಗಿಗಳು ಆತನ ಸ್ವಪ್ನದಲ್ಲಿ ಬಂದು—“ಗೌಡಾ, ನಾಳೆನಸಿಕಿನಲ್ಲಿ ನನ್ನ ಬಳಿಗೆ ಬಂದಕೂಡಲೆ, ನನ್ನಿಂದ ದೊರೆತ ಪ್ರಸಾದವನ್ನು ಸ್ವೀಕರಿಸಿದರೆ, ನಿನ್ನ ರೋಗನಿವಾರಣವಾಗುವದು” ಎಂದು ಹೇಳಿದಹಾಗಾಯಿತು. ಗೌಡನು ಎಚ್ಚತ್ತು ಸ್ವಪ್ನದ ಸಂಗತಿಯನ್ನು ಆಲೋಚಿಸಿ ಸಮಾಧಾನಪಟ್ಟು, ಆಗೇ ತನ್ನ ದೊಡ್ಡ ಕುದುರೆಯನ್ನು ಹತ್ತಿಕೊಂಡು ವಿಶ್ವಾಸದಿಂದ ಲೋಕಾಪುರದ ಮಠಕ್ಕೆ ಬಂದನು. ಈ ಮೊದಲೆ ಆತನು ಲೋಕಾಪುರಕ್ಕೆ ಎಂದೂ ಬಂದವನಲ್ಲ, ಭುಜಂಗಸ್ವಾಮಿಗಳನ್ನು ಕಂಡವನಲ್ಲ; ಈ ದಿನವೇ ಭಕ್ತಿಯಿಂದ ಲೋಕಾಪುರದ ಮಠಕ್ಕೆ ಬರಲು, ಸ್ವಾಮಿಗಳು ಕಾವಲಿಗೆ ಸ್ನಾನಕ್ಕೆ ಹೋಗಿರುವರೆಂದು ಮಠದಲ್ಲಿ ಹೇಳಿದರು. ಕೂಡಲೆ ಆತನು ಕುದುರೆ ಇಳಿದು ಧಾವಿಸಿ ಕಾವಲಿಗೆ ಹೋದನು. ಆಗ ಅಪ್ಪಾಸಾಹೇಬರೇ ಮೊದಲಾದವರು ಸ್ವಾಮಿಗಳಸುತ್ತುನೆರೆದಿರಲು, ಗೌಡನು ನೆಟ್ಟಗೆ ಸ್ವಾಮಿಗಳ ಎದುರಿಗೆ ಹೋಗಲಿಕ್ಕೂ, ಇವರು ಕೇಕರಿಸಿ ಉಗುಳಲಿಕ್ಕೂ ಗಂಟೇಬಿದ್ದಿತು. ಕೂಡಲೆ ಆ ಗೌಡನು ಪ್ರಸಾದವೆಂದು ಆ ಉಗು

ಳನ್ನು ಬೊಗಸೆಯಲ್ಲಿ ಹಿಡಿದು, ನಿಃಶಂಕೆಯಿಂದ ಅದನ್ನು ಬಾಯಲ್ಲಿ ಹಾಕಿಕೊಂಡು ಕೈಯನ್ನು ಮೈಗೆ ತಿಕ್ಕಿಕೊಂಡನು! ಬಳಿಕ ಆತನು ಯಾವ ಮಾತನ್ನೂ ಆಡದೆ, ನೆಟ್ಟಗೆ ತನ್ನ ಕುದುರೆಯಬಳಿಗೆ ಹೋಗಿ ಅದನ್ನು ಹತ್ತಿಕೊಂಡು ತನ್ನ ಪಂಚಗಾವಿಯ ಊರಿಗೆ ಹೋಗಿಬಿಟ್ಟನು! ಇದನ್ನು ನೋಡಿ ಅಪ್ಪಾಸಾಹೇಬರೇ ಮೊದಲಾದವರಿಗೆ ಪರಮಾಶ್ಚರ್ಯವಾಯಿತು. ಮುಂದೆ ಬೇಗನೆ ಆ ಗೌಡನ ಮಹಾರೋಗ ನಿವಾರಣವಾಯಿತಂತೆ!

**ಅಪ್ಪಣೆ ಮೀರಿದ್ದರ ದುಷ್ಪರಿಣಾಮ**—ಲಿಂಗೋಪಂತ ಪರಾಂಜಪೆಯೆಂಬವರ ಪರಿಚಯವು ವಾಚಕರಿಗೆ ಇರುವದಷ್ಟೆ? ಅವರು ಅಪ್ಪಾಸಾಹೇಬರ ಅಪ್ಪಣೆಯಂತೆ ಬಾಲಭುಜಂಗಯೋಗಿಗಳ ತಪಶ್ಚರ್ಯವನ್ನು ಪರೀಕ್ಷಿಸುವದಕ್ಕಾಗಿ ಮೂರನೆಯವರ್ಷದ ಆರಂಭದಲ್ಲಿ ಲೋಕಾಪುರಕ್ಕೆ ಬಂದವರು. ಒಮ್ಮೆ ಲಿಂಗೋಪಂತರು ಸ್ವಾಮಿಗಳು ಮುಸುಕುಹಾಕಿಕೊಳ್ಳುವ ಮೊದಲು ಅವರನ್ನು ಕುರಿತು—"ಮಹಾಸ್ವಾಮಿ, ನಾನು ನಾಳೆ ಜಮಖಂಡಿಗೆ ಹೋಗಿ ಬರುತ್ತೇನೆ, ಜರೂರಿಯ ಕೆಲಸವಿದೆ," ಎಂದು ಕೇಳಿದರು. ಆದಕ್ಕೆ ಬಾಲಭುಜಂಗಯೋಗಿಗಳು—"ಲಿಂಗೋಪಂತ, ನಾನು ಮುಸುಗು ತೆಗೆಯುವವರೆಗೆ ನೀವು ಜಮಖಂಡಿಗೆ ಹೋಗಬೇಡಿರಿ" ಎಂದು ಹೇಳಿ, ತಾವು ಮುಸುಕುಹಾಕಿಕೊಂಡರು. ಆಗ ಲಿಂಗೋಪಂತರಿಗೆ ದೊಡ್ಡ ವಿಚಾರವು ಬಿದ್ದಿತು. ಕೆಲಸದ ಜರೂರಿಯು ಇದ್ದದ್ದರಿಂದ, ಅವರು ಜಮಖಂಡಿಗೆ ಹೋಗಲೇಬೇಕಾಗಿತ್ತು. ಇತ್ತ ಸ್ವಾಮಿಗಳಂತು—"ನಾನು ಮುಸುಕುತೆಗೆಯುವವರೆಗೆ ಹೋಗಬೇಡಿರೆಂ" ದು ಹೇಳಿದರು. ಅಂದಬಳಿಕ ಕೆಲಸ ಹೆಚ್ಚಿನದೋ, ಗುರುಗಳ ಅಪ್ಪಣೆ ಹೆಚ್ಚಿನದೋ ಎಂಬ ವಿಚಾರವು ಬಿದ್ದು, ಕಡೆಗೆ ಕೆಲಸವೇ ಹೆಚ್ಚಿನದೆಂದು ನಿಶ್ಚಯಿಸಿಕೊಂಡು ಲಿಂಗೋಪಂತರು ಜಮಖಂಡಿಗೆ ಹೊರಟುನಿಂತರು; ಆದರೆ ಗುರುಗಳ ಅಪ್ಪಣೆಯನ್ನು ಮೀರಿದಹಾಗೂ ಆಗಬಾರದೆಂದು ಅವರು ತಮ್ಮ ಕಾರಕೂನಕೀಯ ಕಸಬು ತೋರಿಸಹೋದರು. ಅವರು ತಮ್ಮ ಮನಸ್ಸಿನಲ್ಲಿ—"ಗುರುಗಳು ತಾವು ಮುಸುಕುತೆಗೆಯುವವರೆಗೆ ಹೋಗಬೇಡೆಂದು ನನಗೆ ಹೇಳಿರುವರು; ಆದರೆ ನಾನು ಈಗ ಜಮಖಂಡಿಗೆ ಹೋಗಿ ಸ್ವಾಮಿಗಳು

ಮುಸುಕುತೆಗೆಯುವದರೊಳಗಾಗಿ ಇಲ್ಲಿ ಇದ್ದರಾಯಿತು ; ದೊಡ್ಡ ಕುದುರೆಯಿದ್ದದ್ದರಿಂದ ಹಾಗೆ ಮಾಡುವದು ನನಗೆ ಅಸಾಧ್ಯವಲ್ಲ " ಎಂದು ಎಣಿಕೆ ಹಾಕಿ, ಬಾಲಭುಜಂಗಯೋಗಿಗಳು ಮುಸುಕುಹಾಕಿಕೊಂಡ ಸ್ವಲ್ಪಹೊತ್ತಿನಲ್ಲಿಯೇ ಲಿಂಗೋಪಂತರು ಜಮಖಂಡಿಗೆ ಹೊರಟುಬಿಟ್ಟರು.

ಲೌಕಿಕ ಗುರುಭಕ್ತಿಯವರ ರೀತಿಯು ಹೀಗೆಯೇ ಸರಿ. ಇಂಥ ಶಿಷ್ಯರು ತಮಗೆ ಅನುಕೂಲವಾದ ಅಪ್ಪಣೆಯನ್ನು ಗುರುಗಳು ಮಾಡಿದರೆ, ಅದನ್ನು ಒಳ್ಳೇ ಭಕ್ತಿಯಿಂದ ನಡಿಸುವರು, ಅದೇ ಗುರುಗಳು ತಮಗೆ ಪ್ರತಿಕೂಲವಾದ ಅಪ್ಪಣೆಯನ್ನು ಮಾಡಿದರೆ ಅದನ್ನು ಲಿಂಗೋಪಂತರಂತೆ ಯುಕ್ತಿಯಿಂದ, ಅಥವಾ ಏನಾದರೊಂದು ನೆವಹೇಳಿ ಮೀರುವರು ! ಲಿಂಗೋಪಂತರು ಲೋಕಾಪುರವನ್ನು ಬಿಟ್ಟು ಮೂರುಮೈಲು ಹೋಗಿರಬಹುದು ; ಅಷ್ಟರಲ್ಲಿ ಅವರಿಗೆ ಮಾರಿಕಾಬೇನೆಯು ಆರಂಭವಾಯಿತು. ಆಗ ಲಿಂಗೋಪಂತರು ಮಂಗೋಪಂತರಾಗಿ ಹೆದರಿದರು. ಮೊದಲೇ ಅವರ ಮನಸ್ಸಿನಲ್ಲಿ—" ನಾನು ಬೆಂಕಿಯಂಥ ಗುರುಗಳ ಆಜ್ಞೆಯನ್ನು ಮೀರಿದೆನಲ್ಲ " ಎಂಬ ಮಾತು ಕಟೆಯುತ್ತಿತ್ತು ; ಅದರಲ್ಲಿ ಮಾರಿಕಾಬೇನೆ ಬಂದ ಬಳಿಕಂತು, ಅವರು ಕೈಕಾಲೇಬಿಟ್ಟರು ! ಆಗ ಅವರು ಮನಸ್ಸಿನಲ್ಲಿ—" ಇನ್ನು ನಾನು ಲೋಕಾಪುರಕ್ಕೆ ಹೋಗಿ ಮಾಡುವದೇನು ? ನಡುವೆಯಂತು ಗುರುಗಳು ಮುಸುಕುತೆಗೆಯುವದು ಅಶಕ್ಯವು ; ಅಂದಬಳಿಕ ಜಮಖಂಡಿಗೆ ಹೋಗಿಬಿಟ್ಟರೆ, ಹೆಂಡಿರುಮಕ್ಕಳನ್ನಾದರೂ ಕೂಡುವೆನು " ಎಂದವರೇ ಕುದುರೆಯನ್ನು ಒತ್ತರದಿಂದ ಹೊಡೆದರು ; ಆದರೆ ಅವರು ಮನೆಗೆ ಹೋದಾಗ ಕುದುರೆಯನ್ನು ಇಳಿಯುವ ತ್ರಾಣವಿದ್ದಿಲ್ಲ. ಅವರನ್ನು ಮನೆಯವರು ಕೆಳಗೆ ಇಳಿಸಿಕೊಳ್ಳಲು, ಮುಂದೆ ಸ್ವಲ್ಪಹೊತ್ತಿನಲ್ಲಿಯೇ ಅವರ ಪ್ರಾಣೋತ್ಕ್ರಮಣವಾಯಿತು !

ನಮ್ಮಂಥ ಸಾಂಸಾರಿಕ ಮೋಹವುಳ್ಳವರಿಗೆ ಹೊಲಮನೆ, ಧನಧಾನ್ಯ, ಹೆಂಡಿರುಮಕ್ಕಳು ಇವರೇ ತಾರಕರೂ, ಗತಿಪ್ರದರೂ ಆಗಿ ತೋರುವರಲ್ಲದೆ, ದೇವರಾಗಲಿ, ಗುರುಗಳಾಗಲಿ ನಮಗೆ ತಾರಕರೂ, ಗತಿಪ್ರದರೂ ಆಗಿ ತೋರುವದಿಲ್ಲ! ಲಿಂಗೋಪಂತರ ಗತಿಯು ಹಾಗೆಯೇ ಆಯಿತು. ಅವರು

ತನುಗೆ ಮಾರಿಕಾಬೇನೆಬಂದ ಕೂಡಲೆ ಲೋಕಾಪುರಕ್ಕೆ ತಿರುಗಿ ಬಂದು ಬಿಟ್ಟಿದ್ದರೆ, ಅವರಿಗೆ ಆರೋಗ್ಯವು ನಿಶ್ಚಯವಾಗಿ ಆಗುತ್ತಿತ್ತು; ಆದರೆ ಅವರ ಆಯುಷ್ಯವೇ ಇಲ್ಲದ್ದರಿಂದ ಅವರಿಗೆ ಆ ಬುದ್ಧಿಯು ಆಗಲಿಲ್ಲವೆಂದು ಹೇಳಬೇಕಾಗುವದು. ಇತ್ತ ಬಾಲಭುಜಂಗಯೋಗಿಗಳು ಮುಸುಕು ತೆಗೆದಕೂಡಲೆ—"ಲಿಂಗೋಪಂತರು ಇರುವರಷ್ಟೆ?" ಎಂದು ಕೇಳಲು, ಬಳಿಯಲ್ಲಿದ್ದವರು—"ಇಲ್ಲ ಮಹಾಸ್ವಾಮಿ, ಜಮಖಂಡಿಗೆ ಹೋಗಿರುವರು" ಎಂದು ಹೇಳಿದರು. ಆಗ ಬಾಲಭುಜಂಗಯೋಗಿಗಳು ವಿಷಾದಪಟ್ಟು—"ಉಪಾಯವಿಲ್ಲ, ಮುತ್ತ್ಯನ ಮನಸ್ಸಿಗೆ ಬರಲಿಲ್ಲ" ಎಂದು ನುಡಿದರು. ಆಗ ಬಳಿಯಲ್ಲಿದ್ದವರು ಆಶ್ಚರ್ಯದಿಂದ—"ಏನಾಯಿತು ಮಹಾಸ್ವಾಮಿ" ಎಂದು ಕೇಳಲು,—"ಈಗ ಹಣ್ಣಿನ ಬುಟ್ಟಿಗಳು ಬರುವವಲ್ಲ, ಏನಾಯಿತೆಂಬದು ಗೊತ್ತಾಗುವದು" ಎಂದು ಹೇಳಿದರು. ಮುಂದೆ ಕೆಲಹೊತ್ತಿನ ಮೇಲೆ ಜಮಖಂಡಿಯಿಂದ ಹಣ್ಣಿನಬುಟ್ಟಿಗಳು ಬರಲು, ಲಿಂಗೋಪಂತರು ಮಾರಿಕಾಬೇನೆಯಿಂದ ಸತ್ತ ಸುದ್ದಿಯು ಗೊತ್ತಾಗಿ ಎಲ್ಲರಿಗೂ ವಿಷಾದವಾಯಿತು! ಮೊದಲೇ ದೊಡ್ಡವರನ್ನು ಕೇಳಬಾರದು, ತಾವು ಮಾಡುವ ಹಾಗೆ ಮಾಡಿದರೆ ಆಗುವಹಾಗೆ ಆಗುತ್ತದೆ; ಆದರೆ ಕೇಳಿದಬಳಿಕ ಅವರು ಹೇಳಿದಂತೆ ನಡೆಯಲೇ ಬೇಕು. ಇಲ್ಲದಿದ್ದರೆ ಆಗುವ ಲಾಭಕ್ಕೆ ಎರವಾಗಿ ಲಿಂಗೋಪಂತರಂತೆ ಹಿಂದಿನಿಂದ ಪಶ್ಚಾತ್ತಾಪಪಡಬೇಕಾಗುತ್ತದೆ.

---

## ೪ ನೆಯ ವರ್ಷದ ತಪಶ್ಚರ್ಯೆ

## ೧೩ನೇ ಅಧ್ಯಾಯ

# ತಪಸ್ಸಿನ ಸ್ವರೂಪವೂ, ಮಹಿಮೆಗಳೂ



ತಪಸ್ಸಿನ ಸ್ವರೂಪ—ಹಿಂದೆ ಮೂರನೆಯ ವರ್ಷದ ತಪಶ್ಚರ್ಯದಲ್ಲಿ ಬಾಲಭುಜಂಗಯೋಗಿಗಳು, ಎರಡು ದಿವಸ ಹಗಲು ರಾತ್ರಿ ಪೂರ್ಣ ಮುಸುಕಿನಲ್ಲಿದ್ದು, ಮೂರನೆಯದಿವಸ ರಾತ್ರಿ ಮುಸುಕುತೆಗೆಯುತ್ತಿದ್ದರೆಂದು ಹೇಳಿರುವದಷ್ಟೆ? ಈ ನಾಲ್ಕನೆಯ ವರ್ಷದಲ್ಲಿ ಮೂರುದಿವಸ ಅಖಂಡ ಹಗಲು ರಾತ್ರಿ ಸಂಪೂರ್ಣ ಮುಸುಕಿನಲ್ಲಿ ಏಕಾಸನದಿಂದ ಕುಳಿತು ಅನುಷ್ಠಾನಮಾಡಿ, ನಾಲ್ಕನೆಯ ದಿವಸ ರಾತ್ರಿ ಮುಸುಗು ತೆಗೆದು ಬೆಳತನಕ ಮಾತುಕಥೆಯಾಡುತ್ತ, ಜನರಿಗೆ ಹಣ್ಣುಗಳನ್ನು ತಿನಿಸುತ್ತ ರಾತ್ರಿಯನ್ನು ಕಳೆಯಹತ್ತಿದರು! ಹೀಗೆ ಉತ್ತರೋತ್ತರ ತಪೋವೃದ್ಧಿಯು ಅವ್ಯಾಹತವಾಗಿ ಹೇಗಾಯಿತೆಂಬದರ ಕಾರ್ಯಕಾರಣಭಾವವನ್ನು ಹೇಳುವದು ಕಠಿಣವು; ಅದರಲ್ಲಿ, ಇಂದು ಉಡಾಳನಾಗಿದ್ದ, ಅಂದರೆ, ಮನಸ್ಸಿನ ಚಾಂಚಲ್ಯದ ಆಗರವಾಗಿದ್ದ, ಹಾಗು ವಿಧಿನಿಷೇಧಗಳನ್ನು ಲಕ್ಷಿಸದೆ ಸ್ವೇಚ್ಛಾಚಾರಿಯಾಗಿದ್ದ ಹದಿನಾಲ್ಕುವರ್ಷದ ಹುಡುಗನು, ಅಕಸ್ಮಾತ್ ಶ್ರೀಭಗವದ್ಗೀತೆಯಲ್ಲಿಯ—"ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ | ವೀತರಾಗ ಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ||" ಎಂಬ ಭಗವದುಕ್ತಿಯಂತೆ, ತನ್ನ ಮನಸ್ಸಿನ ಚಾಂಚಲ್ಯವನ್ನು ತಟ್ಟನೆ ಬಿಟ್ಟುಕೊಟ್ಟು, ವಿಷಯಾಸಕ್ತಿ, ಭಯ, ಕ್ರೋಧ ಇವುಗಳನ್ನು ಪರಿತ್ಯಜಿಸಿ, ಸ್ಥಿರಮನಸ್ಸಿನ ಮುನಿಯು, ಅಂದರೆ ಸ್ಥಿತ ಪ್ರಜ್ಞನು ಹೇಗೆ ಆದನೆಂಬದರ ಗುಟ್ಟನ್ನು ಅರಿತುಕೊಳ್ಳುವದು

ಬಹು ಕಷ್ಟವಾಗಿರುವದೆಂದು ಹೇಳಬಹುದು. ಹೀಗೆಯೇ ಈ ಬಾಲಭುಜಂಗಯೋಗಿಯಂತೆ ಈಗಿನ ಹದಿನಾಲ್ಕು ವರ್ಷಗಳ ವಯಸ್ಸಿನ ಉಡಾಳ ಹುಡುಗರೆಲ್ಲರೂ ಬೇಡ, ಅಲ್ಲಲ್ಲಿ ನೂರಕ್ಕೆ ಒಬ್ಬರು, ಅಥವಾ ಸಹಸ್ರಕ್ಕೆ ಒಬ್ಬರಾದರೂ ಆದರೆ, ಹಿಂದುಸ್ಥಾನದ್ದೇ ಅಲ್ಲ, ಜಗತ್ತಿನ ಕಲ್ಯಾಣವು ಎಷ್ಟು ಸುಗಮವಾಗಿ ಆದೀತಲ್ಲ! ಆದರೆ ಭರತಭೂಮಿಯ ದುರ್ದೈವದಿಂದ ದಿನದಿನಕ್ಕೆ ಸ್ವೇಚ್ಛಾಚಾರಿ ಹುಡುಗರ ಸಂಖ್ಯೆಯು ಭರದಿಂದ ಹೆಚ್ಚುತ್ತಲಿದ್ದದ್ದು, ಭರತಭೂಮಿಯ ನಿಜವಾದ ಕಲ್ಯಾಣದ ನಿರಾಶೆಯ ಲಕ್ಷಣವಾಗಿರುವದರಿಂದ, ವಿವೇಕಿ ದೇಶಾಭಿಮಾನಿಗಳಿಗೆ ದುಃಖವಾಗದೆ ಇರಲಿಕ್ಕಿಲ್ಲ!

ಹೀಗಿರಲು, ಉಡಾಳ ಭುಜಂಗನು ತಟ್ಟನೆ ಸ್ಥಿತಪ್ರಜ್ಞನು ಹೇಗೆ ಆದನು? ಎಂಬ ಪ್ರಶ್ನವು ವಿಚಾರವಂತರಿಗೆ ಮತ್ತೆ ಮತ್ತೆ ಉತ್ಪನ್ನವಾಗದೆ ಇರುವದಿಲ್ಲ; ಆದರೆ ಆ ಪ್ರಶ್ನಕ್ಕೆ ನಾವು ಎರಡು ಬಗೆಯ ಉತ್ತರಗಳನ್ನು ಕೊಡುವೆವು ಬಾಲಭುಜಂಗನು ಜನ್ಮಾಂತರದಲ್ಲಿ ಯೋಗಭ್ರಷ್ಟನಾಗಿದ್ದು, ಈ ಜನ್ಮದಲ್ಲಿ ಶ್ರೀಭಗವದ್ಗೀತೆಯ—"ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ" ಎಂಬ ಭಗವಂತನ ಉಕ್ತಿಯಂತೆ, ಶುಚಿಷ್ಮಂತನೂ, ಶ್ರೀಮಂತನೂ, ಅಲ್ಲದೆ, ಧೀಮಂತನೂ ಆಗಿದ್ದ ಶ್ರೀಪರಮಹಂಸ ತಿರುಮಲ ಗುರುವರನ ಪೀಳಿಗೆಯಲ್ಲಿ ಹುಟ್ಟಿಬಂದವನಾಗಿದ್ದನೆಂಬದು ಒಂದನೆಯ ಕಾರಣವು; ಭುಜಂಗನ ಪ್ರಾರಬ್ಧಭೋಗವು, ಉಡಾಳತನ-ಸ್ವೇಚ್ಛಾಚಾರ ಇವುಗಳ ಯೋಗದಿಂದ ಭೋಗಿಸಿ ತೀರಿದ ಕೂಡಲೆ, ಲೋಕಾಪುರದ ವಿರಾಗಿ ಪೀಠಕ್ಕೆ, ಲೋಕಕಲ್ಯಾಣಕ್ಕಾಗಿ ರಾಗಿ-ವಿರಾಗಿ ಮಿಶ್ರಪೀಠದ ಸ್ವರೂಪವನ್ನು, ಅಂದರೆ, ಧರ್ಮಸ್ಥಾಪನದ ಪೀಠದ ಸ್ವರೂಪವನ್ನು ಉಂಟುಮಾಡುವದಕ್ಕಾಗಿ, ಪರಮಹಂಸರ ಆವೇಶವು ಉಡಾಳಭುಜಂಗನಲ್ಲಿ ಆಯಿತೆಂಬದು ಎರಡನೆಯ ಕಾರಣವು. ಹೀಗೆ ಎರಡು ಕಾರಣಗಳನ್ನು ಬೇರೆಬೇರೆಯಾಗಿ ಊಹಿಸುವದಕ್ಕಿಂತ, ಬಾಲಭುಜಂಗಸ್ವಾಮಿಯ ಸ್ಥಿತಪ್ರಜ್ಞತೆಯ ಪ್ರಾಪ್ತಿಗೆ-ಅವೆರಡೂ ಕಾರಣಗಳ ಸಮುಚ್ಚಯವು ಕಾರಣವಾಗಿರುವದೆಂದು ಹೇಳುವದು ಹೆಚ್ಚು ಸಯುಕ್ತಿಕವಾಗಿ ತೋರುತ್ತದೆ; ಯಾಕಂದರೆ, ಕೇವಲ ಯೋಗಭ್ರಷ್ಟರ ತಪೋವೃ

ದ್ಧಿಯು ಪ್ರತ್ಯಕ್ಷ ಸತ್ಯವಾಗದವಾದ ಹೊರತು ಇಷ್ಟು ಭರದಿಂದ ಅವ್ಯಾಹತವಾಗಿ ಸಾಗುವದು ಶಕ್ಯವಲ್ಲದ್ದರಿಂದ, ಪೀಠದ ಪರಂಪರಾಗತಪದ್ಧತಿಯಂತೆ ಬಾಲಭುಜಂಗನಲ್ಲಿ ಪರಮಹಂಸರ ಆವೇಶವೂ ಆಗಿತ್ತೆಂದು ಹೇಳಬೇಕಾಗುವದು. ಅಥವಾ ಪರಮಹಂಸರೇ ಬಾಲಭುಜಂಗಯೋಗಿಯ ರೂಪದಿಂದ ಅವತರಿಸಿದರೆಂತಲೂ ಮೂರನೇ ಕಾರಣವಾಗಿ ಹೇಳಬಹುದು. ಒಟ್ಟಿಗೆ, ಕಾರಣವು ಯಾವದೇ ಇರಲಿ, ಬಾಲಭುಜಂಗಯೋಗಿಯ ಈ ತಪಸ್ಸಿನ ರೀತಿಯು, ಈ ಕ್ರೈಸ್ತಶಕದ ಇಪ್ಪತ್ತನೇ ಶತಮಾನದಲ್ಲಿ ಅಶ್ರುತವೂ, ಅಪೂರ್ವವೂಎಂದೇ ಹೇಳಬೇಕಾಗುವದು.

## ಮಹಿಮೆಗಳು.

**ಅತಿವೃಷ್ಟಿಯ ನಿವಾರಣ**—ಬಾಲಭುಜಂಗಯೋಗಿಗಳು ಮಳೆಯಿಲ್ಲದಾಗ ಮಳೆ ತರಿಸಿದ ಉದಾಹರಣವನ್ನು ಈಮೊದಲೆ ಹೇಳಿದೆ; ಆದರೆ ಈಗ ಇಲ್ಲಿ ಅತಿವೃಷ್ಟಿಯ ನಿವಾರಣಮಾಡಿದ್ದನ್ನು ಹೇಳುವೆವು. ಒಮ್ಮೆ ಅತಿವೃಷ್ಟಿಯಿಂದ ಪೈರುಗಳು ಕೊಳೆಯಹತ್ತಿದವು. ಆಗ ಲೋಕಾಪುರದವರಿಗೆ ಸ್ವಾಮಿಗಳ ನೆನವಾಯಿತು "ಸಂಕಟಬಂದಾಗ ವೆಂಕಟರಮಣ" ಎಂಬ ಮಾತು ಸುಳ್ಳಲ್ಲ! ಸಂಕಟಬಂದಾಗಲೇ ನಮಗೆ ದೇವರ, ಅಥವಾ ಸತ್ಪುರುಷರ ಸ್ಮರಣವಾಗುವದು. ಅಂತೇ ಮಹಾಭಾರತದಲ್ಲಿ ಕುಂತೀದೇವಿಯು, ತನಗೆ ಶ್ರೀಕೃಷ್ಣ ಪರಮಾತ್ಮನ ಸ್ಮರಣವು ಮೇಲಿ ಮೇಲೆ ಆಗಬೇಕೆಂದು ತಿಳಿದು, ತನ್ನ ಸೋದರಳಿಯನಾದ ಆ ಭಗವಂತನನ್ನು ಕುರಿತು—"ಕೃಷ್ಣಾ, ನಮಗೆ ಮೇಲಿಮೇಲೆ ನಿನ್ನ ಸ್ಮರಣವಾಗುವದಕ್ಕಾಗಿ ನಮಗೆ ಮೇಲೆ ಮೇಲೆ ಸಂಕಟಗಳನ್ನು ಕೊಡು" ಎಂದು ಪ್ರಾರ್ಥಿಸಿರುವಳು! ಆದ್ದರಿಂದ ನಮಗೆ ಕಷ್ಟದ ಪ್ರಸಂಗಗಳು ಒದಗಿದಾಗ—"ಈಗ ಏನು ಮಾಡೋಣ, ಹೇಗೆ ಮಾಡೋಣ" ಎಂಬ ಚಿಂತೆಯಿಂದ ಕೊರಗುತ್ತ ಕುಳಿತುಕೊಳ್ಳದೆ, ಅಥವಾ, "ನಮ್ಮ ಗತಿಯು ಏನಾಯಿತಲ್ಲ!" ಎಂದು ಉಸುರುಹಾಕುತ್ತ ಕುಳಿತುಕೊಳ್ಳದೆ, ಅಥವಾ—"ಈ ಕಷ್ಟನಿವಾರಣಮಾಡಿಕೊಳ್ಳುವದು ನನಗೆ ಈಡೇ? ಕ್ಷಣಮಾತ್ರದಲ್ಲಿ ನಿವಾರಣ

ಮಾಡುವೆನು" ಎಂಬ ದುರಹಂಕಾರಕ್ಕೆ ಒಳಗಾಗಿ, ದಿಕ್ಕುಕಾಣದ ಹೆಗ್ಗಣದಂತೆಗುರುಗುಟ್ಟುತ್ತ ಸಿಕ್ಕಹಾಗೆ ಹರಿದುಹೋಗಿ ಗೋಡೆಗೋಡೆ ಹಾದು ಗಾಸಿಯಾಗದೆ, ಪೌರಾಣಿಕಕಾಲದ ಕುಂತಿಯಂತೆ, ಅಥವಾ ಈಗಿನ ಲೋಕಾಪುರ ಊರ ಸಜ್ಜನರಂತೆ ದೇವರಿಗಾಗಲಿ, ಸಜ್ಜನರಿಗಾಗಲಿ ಶರಣು ಹೋಗಿ ಧರ್ಮವನ್ನು ಆಶ್ರಯಿಸಿ ಕರ್ತವ್ಯತತ್ಪರರಾಗಿರತಕ್ಕದ್ದು! ಅದರಂತೆ, ಈಗ ಲೋಕಾಪುರದ ಜನರು ಬಾಲಭುಜಂಗಯೋಗಿಗಳ ಬಳಿಗೆಬಂದು— "ಮಹಾಸ್ವಾಮಿ, ಅತಿವೃಷ್ಟಿಯಿಂದ ಪೈರುಗಳು ಕೊಳೆಯಹತ್ತಿದವು; ಆದ್ದರಿಂದ ನಮ್ಮ ಕಷ್ಟವು ನಿಮ್ಮಿಂದಲೇ ನಿವಾರಣವಾಗಬೇಕು" ಎಂದು ಪ್ರಾರ್ಥಿಸಿದರು. ಆಗ ಬಾಲಭುಜಂಗಯೋಗಿಗಳು ಮಳೆಯ ನೀರಿನಿಂದಲೇ ಆಚಮನಮಾಡಿ, "ಅಗಸ್ತಿ ಋಷಿಗಳು ಆಚಮನದಿಂದ ಸಮುದ್ರವನ್ನೇ ಶೋಷಿಸಿದಂತೆ" ಅತಿವೃಷ್ಟಿಯ ಶೋಷಣಮಾಡಿ ಜನರನ್ನು ಕುರಿತು—"ಇನ್ನು ಮುತ್ತಯ್ಯನು ನಿಮ್ಮ ಕಲ್ಯಾಣಮಾಡುವನು" ಎಂದು ಹೇಳಿದರು. ಅದರಂತೆ ಮರುದಿವಸದಿಂದ ಮಳೆಯು ಹೊರಸಾಯಿತು.

**ಮುಧೋಳದ ರಾಣಿಯವರಿಗೆ ಮಂತ್ರೋಪದೇಶ—** ಲೋಕಾಪುರವು ಮುಧೋಳ ಸಂಸ್ಥಾನದಲ್ಲಿ ಇರುತ್ತದೆಂದು ಹಿಂದೆ ಹೇಳಿದೆಯಷ್ಟೆ? ಆ ಸಂಸ್ಥಾನಿಕರಾದ ಬಾಳಾಸಾಹೇಬ ಎಂಬವರ ರಾಣಿಯವರು ಲಕ್ಷ್ಮೀಬಾಯಿ ಎಂಬವರು ಅತ್ಯಂತ ಸಾಧ್ವಿಯರಾಗಿದ್ದರು. ಅವರ ಕಿವಿಗೆ ಬಾಲಭುಜಂಗಯೋಗಿಗಳ ಹಲವು ಮಹಿಮೆಗಳು ಮುಟ್ಟಿದ್ದರೂ, ಮತ್ತು ಜಮಖಂಡಿಯಂಥ ಪರಸಂಸ್ಥಾನಿಕನು ಬಾಲಭುಜಂಗಯೋಗಿಗಳ ಶಿಷ್ಯನಾದದ್ದನ್ನು ಅವರು ಕೇಳಿದ್ದರೂ ಪರಿಪಕ್ವಕಾಲವು ಒದಗಿಬಾರದ್ದರಿಂದ, ಆ ಸಾಧ್ವಿಯರು ಈವರೆಗೆ ಲೋಕಾಪುರಕ್ಕೆ ಬಂದಿದ್ದಿಲ್ಲ; ಮತ್ತು ಸ್ವಾಮಿಗಳ ದರ್ಶನ ಮಾಡಿಕೊಂಡಿದ್ದಿಲ್ಲ! ಜಮಖಂಡಿಯ ಅಪ್ಪಾಸಾಹೇಬರು ಪ್ರತಿ ಮುಸುಕು ತೆಗೆದ ಕಾಲಕ್ಕೆ ಹಣ್ಣಿನ ಬುಟ್ಟಿಗಳನ್ನು ಸ್ವಾಮಿಗಳಿಗೆ ಕಳಿಸುತ್ತಿರುವದನ್ನು ಕೇಳಿ, ಆ ರಾಣಿಯವರು ಮನಸ್ಸಿನಲ್ಲಿ— "ನಾನೂ ಸ್ವಾಮಿಗಳ ದರ್ಶನಮಾಡಿಕೊಂಡು ಬರಬೇಕು" ಎಂದು ನಿಶ್ಚಯಿಸಿ, ಲೋಕಾ

ಪುರಕ್ಕೆ ಸ್ವಾಮಿಗಳ ದರ್ಶನಕ್ಕಾಗಿ ಬಂದರು. ಅಲ್ಲಿಯ ಸ್ಥಿತಿಗತಿಗಳನ್ನೂ, ಸ್ವಾಮಿಗಳ ದಿವ್ಯವಾದ ತಪಸ್ತೇಜವನ್ನೂ ನೋಡಿ, ಆ ರಾಣಿಯವರ ಚಿತ್ತ ಹರಣವಾಗಿ ಹೋಗಲು, ಅವರು ಬಾಲಭುಜಂಗಯೋಗಿಗಳ ಶಿಷ್ಯರಾಗಿ, ಅವರಿಂದ ಮಂತ್ರೋಪದೇಶವನ್ನು ಪಡೆದರು! ಈವರೆಗೆ ಕಾಮನಾಪರ ಗಳಾದ ಹಲವು ಚರಿತ್ರಗಳು ಬಂದಿದ್ದರೂ, ಯಾವ ಕಾಮನೆಯೂ ಇಲ್ಲದೆ ಕೇವಲ ಕೃತಾರ್ಥತೆಗಾಗಿ ಮಂತ್ರೋಪದೇಶ ಪಡೆದವರ ಉದಾಹರಣಗಳು ಒಂದೂ ಬಂದಿರುವದಿಲ್ಲ! ಈಗಿನ ರಾಣಿಯವರ ಮಂತ್ರೋಪದೇಶದ ಪ್ರಸಂಗವನ್ನು ಮನಸ್ಸಿನಲ್ಲಿ ತಂದರೆ, ಆ ರಾಣಿಯವರ ಅಧಿಕಾರ ಸಂಪನ್ನ ತೆಗಾಗಿ ಮನಸ್ಸು ಸಮಾಧಾನಪಡುತ್ತಿರುವದು. ಮುಂದೆ ರಾಣಿಯವರು ಬಾಲಭುಜಂಗಯೋಗಿಗಳ ಪ್ರತಿಮುಸುಕು ತೆಗೆಯುವ ಕಾಲಕ್ಕೆ ಒಂಟೆಯ ಮೇಲೆ ಹೇರಿ ಬಾಳೆಯಹಣ್ಣುಗಳನ್ನು ಭಕ್ತಿಯಿಂದ ಕಳಿಸಹತ್ತಿದರು!

**ಪ್ರತಿಗ್ರಹದ ತಿರಸ್ಕಾರ**—ಹೀಗೆ ರಾಣಿಯವರು ಪ್ರತಿಮುಸುಕಿಗೆ ಸ್ವಾಮಿಗಳಿಗಾಗಿ ಹಣ್ಣು ಕಳಿಸಿಕೊಡಹತ್ತಿದರಲ್ಲದೆ, ಗುರುದಕ್ಷಿಣೆಯ ರೂಪದಿಂದ ಮಠಕ್ಕೆ ಒಂದು ಜಮೀನು ಕೊಳ್ಳಬೇಕೆಂದು ನಾವಿರಾರು ರೂಪಾಯಿಗಳನ್ನು ಸ್ವಾಮಿಗಳಿಗೆ ಅರ್ಪಿಸ ಹೋದರು; ಆದರೆ ಸ್ವಾಮಿಗಳು ಆ ರೂಪಾಯಿಗಳನ್ನು ಸ್ವೀಕರಿಸದೆ ರಾಣಿಯವರನ್ನು ಕುರಿತು—"ಅಮ್ಮಾ, ತಾಯಿ, ದುಡ್ಡು ತಕ್ಕೊಂಡು ನಾವು ಮಾಡುವದೇನು? ನೀವೇ ಮಠಕ್ಕೆ ಜಮೀನು ಕೊಡಿಸಿಬಿಡಿರೆಂದರಾಯಿತು." ಎಂದು ಹೇಳಲು, ರಾಣಿಯ ವರು ಬಳಿಯಲ್ಲಿದ್ದ ಪ್ರಮುಖ ಜನರಿಗೆ—"ನೀವು ಒಳ್ಳೆಯ ಜಮೀನು ನೋಡಿ ಸ್ವಾಮಿಗಳಿಗೆ ತಿಳಿಸಿರಿ; ಅವರು ಒಪ್ಪಿದ ಜಮೀನಿಗೆ ಎಷ್ಟು ಬೆಲೆ ಬಿದ್ದರೂ ನಾವು ಬೆಲೆ ಕೊಡುವೆವು" ಎಂದು ಹೇಳಿದರು. ಅದರಂತೆ ಮುಂದೆ ಬೇರೆ ಬೇರೆ ಜನರು ಬೇರೆ ಬೇರೆ ಜಮೀನುಗಳನ್ನು ನೋಡಿ ಸ್ವಾಮಿಗಳಿಗೆ ತಿಳಿಸಲು, ಜಮೀನೇ ಬೇಡಾಗಿದ್ದ ಸ್ವಾಮಿಗಳು, ಅವರಲ್ಲಿ ಒಬ್ಬರಿಗೆ—"ನೀವು ನೋಡಿದ ಜಮೀನು ದೂರವಾಯಿತೆಂ" ತಲೂ, ಮತ್ತೊಬ್ಬರಿಗೆ—"ನೀವು ನೋಡಿಬಂದಿದ್ದ ಜಮೀನಿನಿಂದ ಹಣದ ಬಡ್ಡಿ ತೇಲುವದಿಲ್ಲ ವೆಂ" ತಲೂ, ಇನ್ನೊಬ್ಬರಿಗೆ—"ನೀರೊರೆಯ ಜಮೀನು ಇದ್ದರೆ ನೆಟ್ಟ

ಗೆಂತಲೂ ಹೀಗೆಯೇ ಒಂದಿಲ್ಲೊಂದು ನೆವಹೇಳಿ, ಬಂದಜಮೀನುಗಳನ್ನೆಲ್ಲ ನಿರಾಕರಿಸಿಬಿಟ್ಟರಲ್ಲದೆ, ಕಡೆಗೂ ರಾಣಿಯವರಿಂದ ಜಮೀನು ಸ್ವೀಕರಿಸಲಿಲ್ಲ! ಆ ಮಹಾತ್ಮರು ತಮ್ಮ ಶಿಷ್ಯರ ನಿರ್ಮಲ ಭಕ್ತಿಯೆಂಬ ಸೂಕ್ಷ್ಮ ದಕ್ಷಿಣೆಯಿಂದ ಸಂತುಷ್ಟರಾಗಿರಲು, ಅಭಿಮಾನ ಕಲುಷಿತವಾದ ಜಮೀನಿನ ಜಡವಾದ ದಕ್ಷಿಣೆಯು ಅವರಿಗೆ ಯಾಕೆ ಬೇಕಾಗುವದು ? ಒಟ್ಟಿಗೆ, ಬಾಲಭುಜಂಗಯೋಗಿಗಳು ಪ್ರತಿಗ್ರಹವನ್ನು ಅತ್ಯಂತವಾಗಿ ತಿರಸ್ಕರಿಸುತ್ತಿದ್ದರು. !

ಹೀಗೆ ಬಾಲಭುಜಂಗಯೋಗಿಗಳು ಎಲ್ಲಕ್ಕೂ "ಬೇಡ ಬೇಡ" ಎಂದು ಮುಂದಿಕೊಡುವದಕ್ಕೆ ಕಲ್ಲುಹಾಕುವದನ್ನು ನೋಡಿ, ಸ್ವಾಮಿಗಳ ಆಪ್ತೇಷ್ಟರೂ, ಪರಿವಾರದವರೂ ತಮ್ಮ ಲೌಕಿಕವೃತ್ತಿಗನುಸರಿಸಿ, ಲೋಕರೀತಿಯಂತೆ ಬಾಲಭುಜಂಗಯೋಗಿಗಳನ್ನು ಕುರಿತು ಒಳ್ಳೇಹಿತೋಪದೇಶಮಾಡುವವರಂತೆ—"ಯೋಗಿಶ್ರೇಷ್ಠ, ರಾಣಿಯವರು ಮಠಕ್ಕೆ ಜಮೀನು ಕೊಡುತ್ತೇವೆಂದು ತಾವಾಗಿ ಹೇಳುತ್ತಿರಲು, ನೀವೇಕೆ ನಿರಾಕರಿಸುವಿರಿ? ನೀವೇನು ರಾಣಿಯವರನ್ನು ಜಮೀನು ಕೇಳಲಿಕ್ಕೆ ಹೋಗಿರುವದಿಲ್ಲ; ಅಂದ ಬಳಿಕ ಅಯಾಚಿತವಾಗಿ ಬಂದದ್ದನ್ನು ಸ್ವೀಕರಿಸುವದರಲ್ಲಿ ದೋಷವೇನು? ಕಾಲವು ಹೀಗೆಯೇ ಇರುವದೆಯೆ? ನಿಮ್ಮಂಥ ಮಹಿಮಾಶಾಲಿಗಳೇ ಮಠದಲ್ಲಿ ಯಾವಾಗಲೂ ಆಗುವರೆಯೆ? ಒಂದೊಂದು ಕಾಲಕ್ಕೆ ಒಂದೊಂದು ಅನುಕೂಲತೆಯು ಆಗುತ್ತಿರುವದು. ಆದ್ದರಿಂದ ತಾನಾಗಿ ಬಂದದ್ದನ್ನು ನಿರಾಕರಿಸುತ್ತ ಹೋಗುವದು ಒಳಿತಲ್ಲ! ಮಠದ ದಿನದ ವೆಚ್ಚವಿದೆ, ಆರಾಧನೆಗಳಿವೆ; ಜನರ ಬರಹೋಗುವದಿದೆ; ಅಂದಬಳಿಕ ಇವೆಲ್ಲ ವ್ಯವಹಾರಗಳು ನಡೆಯಲಿಕ್ಕೆ, ಸ್ಥಿರಾಸ್ತಿಯಿದ್ದರೆ ನೆಟ್ಟಗಲ್ಲವೆ? ಜಮಖಂಡಿಯ ಅಪ್ಪಾಸಾಹೇಬರು ಮಠಕಟ್ಟಿಸಬೇಕೆಂದರೆ, ಕಟ್ಟಿಸಗೊಡಲಿಲ್ಲ; ಅವರು ಬೆಳ್ಳಿಯ ಪಾತ್ರೆಗಳನ್ನು ನಿಮಗೇ ಕೊಡಬೇಕೆಂದು ತಂದಿರಲು, ಹಾಗೆ ನಿಮ್ಮ ಮುಂದೆ ಹೇಳಲಿಕ್ಕೆ ಧೈರ್ಯಸಾಲದೆ ಪರಮಹಂಸರ ಹೆಸರು ಹೇಳಿ ಅವರು ಉತ್ಸಾಹಹೀನರಾದರು; ಅವರ ಪಾದಪೂಜೆಯನ್ನು ಸ್ವೀಕರಿಸಿದ್ದರೆ ದೊಡ್ಡಲಾಭವಾಗುವಸಂಭವವಿತ್ತು! ಹೀಗೆ ಕೊಡುವವರಿಗೆ ಉತ್ತೇಜನಕೊಡದೆ

ಎಲ್ಲಕ್ಕೂ ಕಲ್ಲುಹಾಕುತ್ತ ಹೋದರೆ, ಮಠವು ಮುಂದಕ್ಕೆ ಹೇಗೆ ಬರಬೇಕು? ಲೋಕಾಪುರ ಮಠವು ಕಡೆಗೂ ಬೂದಿ ಬಡಕ ಕಂಗಾಲ ಮಠವಾಗಿಯೇ ಇರಬೇಕೆಂದು ಬರಕೊಟ್ಟಿದೆಯೋ ಏನು? ಲೋಕದಲ್ಲಿ ಬೇಕಾದಷ್ಟು ಸುಸಂಪನ್ನ ಮಠಗಳಿವೆ! ನೋಡಿರಿ, ಶ್ರೀಜಗದ್ಗುರು ಶೃಂಗೇರಿ ಸ್ವಾಮಿಗಳ ಮಠವೂ ಪರಮಹಂಸ ಮಠವೇ ಅಲ್ಲವೆ? ಅದಕ್ಕೇಕೆ ಲಕ್ಷಾಂತರ ರೂಪಾಯಿಗಳ ಉತ್ಪನ್ನವಿರಬೇಕು? ಆದ್ದರಿಂದ ಮಹಿಮಾಶಾಲಿಗಳಾದ ನೀವು ಲೋಕಾಪುರ ಮಠವನ್ನು ಮುಂದಕ್ಕೆ ತಂದಕೀರ್ತಿಯನ್ನು ಕಟ್ಟಿಕೊಳ್ಳುವದು ನೆಟ್ಟಗೆಂದು ನಮ್ಮ ಮನಸ್ಸಿಗೆ ತೋರುತ್ತದೆ. ಹೀಗೆ ಸುಮ್ಮನೆ ಮುಸುಕು ಹಾಕಿಕೊಂಡು ಕುಳಿತರೆ ಈಗ ಯಾರು ಕೇಳುವರು?

ಈ ಅರ್ಥದ ಹಲವು ಲೌಕಿಕಗಳಾದ ಮೋಹಕ ವಿಚಾರಗಳಿಂದ ಬಾಲ ಭುಜಂಗಯೋಗಿಗಳನ್ನು ಪ್ರತಿಗ್ರಹಕ್ಷಮರನ್ನಾಗಿ, ಅಂದರೆ ಯಾಚಕರನ್ನಾಗಿ ಮಾಡಬೇಕೆಂದು ಲೌಕಿಕರು ಯತ್ನಿಸಲು, ಮಹಾತ್ಮರಾದ ಬಾಲ ಭುಜಂಗಯೋಗಿಗಳು ನಗೆಮೊಗದಿಂದ ಅವರನ್ನು ಕುರಿತು—“ನೀವು ಹೇಳುವದೆಲ್ಲ ಸರಿ; ನಾನು ಪ್ರತಿಗ್ರಹಮಾಡಿ ಮಠವನ್ನು ಲೌಕಿಕದೃಷ್ಟಿಯಿಂದ ಮುಂದಕ್ಕೆ ತರಲೂಬಹುದು; ಆದರೆ ಮಠದಲ್ಲಿ ದ್ರವ್ಯದ ಅತಿಸಂಚಯವಾಗಿ ಅದು ಬಚ್ಚಲದ ಕಳಕುನೀರಿನಂತೆ ಆಗಲು, ಅದರ ಬಳಿಕೆಯಿಂದ ಮಠದ ಸ್ವಾಮಿಗಳಲ್ಲಿಯೂ, ಅವರ ಪರಿವಾರದಲ್ಲಿಯೂ ದುರ್ವ್ಯಸನ-ದುರಾಚಾರಗಳ ದುಷ್ಟರೋಗವು ಹಬ್ಬಿ, ಆ ರೋಗದ ಬಾಧೆಯಿಂದ ಮಠದ ಲೌಕಿಕಬಾಹ್ಯ ಸಂಪತ್ತಿನೊಡನೆ ಅದರ ಆಧ್ಯಾತ್ಮಿಕ ಅಂತಃಸಂಪತ್ತೂ ನಷ್ಟವಾದರೆ, ಮಠದಿಂದ ಲೋಕಕ್ಕೆ ಪ್ರಯೋಜನವಾದರೂ ಏನಾಗುವದು? ಅತಿಸಂಚಯವೆಂದರೆ, ಸ್ವಪರಹಿತಕ್ಕಾಗಿ ಸಾತು ಉಳಿಯುವ ಹೆಚ್ಚಿನ ತಂಗಳ ದುಡ್ಡು! ಈ ತಂಗಳ ದುಡ್ಡು ಹಳಸತಕ್ಕದ್ದು, ಅಥವಾ ಬಚ್ಚಲನೀರಿನಂತೆ ಕಳಕು ಆಗತಕ್ಕದ್ದು; ಆದ್ದರಿಂದ ನಮ್ಮ ಪೂರ್ವಜರು ತಂಗಳ ದುಡ್ಡು ಕಟ್ಟದೆ, “ತಂಗಳ ದುಡ್ಡು ಕಟ್ಟುವವರ ಗಂಡ” ಎಂಬ ಬಿರುದನ್ನು ಪಡೆದು, ತಮ್ಮ ಅಂತಃಸತ್ವವನ್ನು ಕಾಯ್ದುಕೊಳ್ಳುತ್ತ ಬಂದಿರುವರು. ತಂಗಳ ದುಡ್ಡು ಕಟ್ಟುವದು ನಮ್ಮ ಮುತ್ತಯ್ಯನ ಮನಸ್ಸಿಗೆ

ಬರುವದಿಲ್ಲ; ಆದ್ದರಿಂದಲೇ ನಮ್ಮ ಹಿಂದಿನ ಆರುಜನ ಸ್ವಾಮಿಗಳೂ ಜಮೀನು ಸಂಪಾದಿಸಿರುವದಿಲ್ಲ. ಬಂದ ಆವತ್ತಿನದನ್ನು ಆವತ್ತಿಗೇ ಸತ್ಕಾರ್ಯದಲ್ಲಿಯೋ, ದುರ್ವ್ಯಸನದಲ್ಲಿಯೋ ಹೇಗಾದರೂ ವೆಚ್ಚಮಾಡಿ, ತಮ್ಮ ಅಂತಸ್ತೇಜಸ್ಸನ್ನು ಬೂದಿಮುಚ್ಚಿದ ಕೆಂಡದಂತೆ ಬಚ್ಚಿಟ್ಟುಕೊಂಡು, ಮುಮುಕ್ಷುಗಳಿಗೆ ಕೈವಲ್ಯಪದವಿಯನ್ನು ಒದಗಿಸಿಕೊಡುತ್ತ ಲೋಕವಿಖ್ಯಾತರಾದರು! ಅಂತಹ ನಿಸ್ಪೃಹಿಗಳ ಹೆಸರಿಗೆ ಕಲಂಕವುಂಟಾಗುವಂತೆ ನಾನೇಕೆ ಈಗ ಪ್ರತಿಗ್ರಹಮಾಡಲಿ?

ಇನ್ನು ನೀವು ಶೃಂಗೇರಿಯ ಜಗದ್ಗುರು ಪೀಠದ ಹೆಸರು ಎತ್ತಿದಿರಲ್ಲ, ಅದರ ಸಂಬಂಧದ ಸತ್ಯಸಂಗತಿಯನ್ನು ಹೇಳುವೆನು ಕೇಳಿರಿ. ಜಗದ್ಗುರು ಪೀಠವು ಧರ್ಮರಕ್ಷಕವೂ, ಮುಮುಕ್ಷುಗಳಿಗೆ ಮೋಕ್ಷದಾಯಕವೂ ಆಗಿರುವದರಿಂದ, ಅದು ಅಂತರಂಗದಲ್ಲಿ ನಿಸ್ಪೃಹಿಯೂ, ಸ್ವಾನಂದ ಸಾಮ್ರಾಜ್ಯ ಚಕ್ರವರ್ತಿಯೂ ಆಗಿದ್ದರೂ, ವ್ಯವಹಾರದಲ್ಲಿ ಅದು ಸ್ಪೃಹಿಯೂ, ಕರ್ತವ್ಯನಿಷ್ಠವೂ, ವ್ಯವಹಾರಚತುರವೂ ಆಗಿರಬೇಕಾಗುವದು; ಆದರೆ ಲೋಕಾಪುರಪೀಠವು ಅಂತರಂಗ ಬಹಿರಂಗಗಳೆರಡರಲ್ಲಿಯೂ ನಿಸ್ಪೃಹಿಯಾಗುತ್ತ ಬಂದಿರುವದು! ಭಗವತ್ಪಾದ ಶ್ರೀಶಂಕರಾಚಾರ್ಯರ ಕಾಲದಿಂದ ಶ್ರೀವಿದ್ಯಾರಣ್ಯಸ್ವಾಮಿಗಳ ಕಾಲದವರೆಗಿನ ಸ್ವಾಮಿಗಳು ಪ್ರಾಮುಖ್ಯವಾಗಿ ಬಹಿರಂಗದಲ್ಲಿ ಕೂಡ ನಿಸ್ಪೃಹಿಗಳಿದ್ದರೆಂದೇ ಹೇಳಬೇಕಾಗುವದು; ಆ ಮಹಾತ್ಮರು ಜಗತ್ತನ್ನು ಮಲಭಾಂಡವತ್ ತ್ಯಾಜ್ಯವೆಂದು ತಿಳಿಯುತ್ತಿದ್ದರು; ಆದರೆ ಶ್ರೀವಿದ್ಯಾರಣ್ಯ ಸ್ವಾಮಿಗಳು ವಿಜಯನಗರದ ರಾಜ್ಯವನ್ನು ಸ್ಥಾಪಿಸಿದ್ದರಿಂದ, ಆ ಶೃಂಗೇರಿ ಜಗದ್ಗುರುಪೀಠಕ್ಕೆ—"ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ" ಎಂಬ ಬಿರುದಿನೊಡನೆ, ಅರಸನ ಧರ್ಮಶಾಸನದ ಅಧಿಕಾರವೂದೊರೆಯಲು, ಶೃಂಗೇರಿಯಪೀಠವು ಜಗದ್ಗುರುಪೀಠವಾಗಿ ಅದು ಅಂತರಂಗದಲ್ಲಿ ನಿಸ್ಪೃಹಿಯೂ, ಬಹಿರಂಗದಲ್ಲಿ ಸ್ಪೃಹಿಯೂ ಆಗುವ ತೊಡಕಿಗೆ ಒಳಗಾಗಬೇಕಾಯಿತು; ಆದ್ದರಿಂದ ಲೋಕಾಪುರ ಪೀಠಕ್ಕೆ ಜಗದ್ಗುರು ಪೀಠವನ್ನು ಹೋಲಿಸುವದು ಸರಿಯಲ್ಲ; ಯಾಕಂದರೆ, ಲೋಕಾಪುರಪೀಠವು ಕೇವಲ ವಿರಾಗಿ ಪೀಠವಾಗಿದ್ದರೆ,

ಜಗದ್ಗುರು ಪೀಠವು ರಾಗಿ—ವಿರಾಗಿ ಮಿಶ್ರಪೀಠವಾಗಿರುವದು ; ಆದ್ದರಿಂದ ಶೃಂಗೇರಿ ಪೀಠಕ್ಕೆ ಲಕ್ಷಾಂತರ ರೂಪಾಯಿಗಳ ಉತ್ಪನ್ನವು, ಧರ್ಮರಕ್ಷಣದ ಅಧಿಕಾರ ನಡಿಸುವದಕ್ಕಾಗಿಯೂ, ಲೋಕಸಂಗ್ರಹ ಮಾಡುವದಕ್ಕಾಗಿಯೂ, ಧರ್ಮವನ್ನು ಅಭಿವೃದ್ಧಿಗೊಳಿಸುವ ಧಾರ್ಮಿಕಶಿಕ್ಷಣದ ವ್ಯವಸ್ಥೆ ಇಡುವದಕ್ಕಾಗಿಯೂ ಬೇಕಾಗುವದಲ್ಲದೆ, ಹಾಗೆ ಉತ್ಪನ್ನವಿರುವದು ಅದಕ್ಕೆ ಭೂಷಣವೂ ಆಗಿರುವದು! ಅದರಂತೆ, ಇನ್ನುಮೇಲೆ ಮುತ್ತಯ್ಯನ ಇಚ್ಛೆಯಂತೆ ಲೋಕಾಪುರದ ಮಠವೂ ರಾಗಿ—ವಿರಾಗಿ ಮಿಶ್ರಮಠವಾದರೆ, ಲೋಕಸಂಗ್ರಹಕ್ಕೋಸ್ಕರ, ಹಾಗು ಧರ್ಮದ ಅಭಿವೃದ್ಧಿಗೋಸ್ಕರ ಮುತ್ತಯ್ಯನ ಕೃಪೆಯಿಂದ ಅದಕ್ಕೂ ಉತ್ಪನ್ನದ ಅನುಕೂಲತೆಯಾಗಬಹುದು , ಆದರೆ ನೀವು ಏನು ಹೇಳಿದರೂ ನನ್ನ ಕಾಲದಲ್ಲಿ ಮಾತ್ರ ಯಾವ ಬಗೆಯ ಸಂಪಾದನವೂ ಮಠಕ್ಕೆ ಆಗಲಾರದು !

**ನಿಸ್ಪೃಹತೆಯ ಮತ್ತೊಂದು ಉದಾಹರಣೆ**— ಪರಮಹಂಸರ ಹಿರಿಯ ಮಕ್ಕಳಾದ ಜ್ಞಾನೇಶ್ವರ ಸ್ವಾಮಿಗಳು ಕಾಖಿಂಡಿಕಿಯಲ್ಲಿ ದೇಹ ಬಿಟ್ಟ ಬಳಿಕ, ಅವರ ಪ್ರತಿವರ್ಷದ ಆರಾಧನೆ ಮೊದಲಾದವುಗಳ ವೆಚ್ಚಕ್ಕಾಗಿ, ಭಾವಿಕರಾದ ಹತ್ತು ಜನ ಜಮೇದಾರರು, ಒಬ್ಬೊಬ್ಬರು ಒಂದೊಂದರಂತೆ ಹತ್ತು ಉತ್ತಮ ಜಮೀನುಗಳನ್ನು ಹಾಕಿಕೊಟ್ಟರೆಂದು ಹಿಂದೆ ಜ್ಞಾನೇಶ್ವರ ಸ್ವಾಮಿಗಳ ಚರಿತ್ರೆಬರೆಯುವಾಗ ಬರೆದಿದೆಯಷ್ಟೆ? ಆದರೆ ಆ ಜಮೀನುಗಳು ಅಂದಿನಿಂದ ಬಾಲಭುಜಂಗ ಸ್ವಾಮಿಗಳ ಕಾಲದವರೆಗೆ, ಯಾವ ಸ್ವಾಮಿಗಳೂ ಆರೆಮಾಡದ್ದರಿಂದ ಕಾಖಿಂಡಿಕಿಯ ಕುಲಕರಣಿಯವರ ಉಪಭೋಗದಲ್ಲಿಯೇ ಇದ್ದು, ಆ ಕುಲಕರಣಿಯವರು ಸಮಾಧಿಯ ನಿತ್ಯಪೂಜೆ, ವರ್ಷದ ಸ್ವಾಮಿಗಳ ಆರಾಧನೆ ಇವನ್ನು ಮಾತ್ರ ಮಾಡುತ್ತ ಬರುವರು ಆ ಹತ್ತು ಜಮೀನುಗಳ ಲಾವಣಿಯ ಉತ್ಪನ್ನವು ಸಾವಿರಾರು ರೂಪಾಯಿ ಆಗಬಹುದಂತೆ! ಆದರೆ ಕಾಖಿಂಡಿಕಿಯ ಕುಲಕರಣಿಯವರಾದ ಗೋವಿಂದಪ್ಪನವರು ಬಾಲಭುಜಂಗ ಸ್ವಾಮಿಗಳ ಅಗಾಧವಾದ ತಪಶ್ಚರ್ಯಕ್ಕೆ ಅಂಜಿ, ತಾವಾಗಿ ಸ್ವಾಮಿಗಳ ಬಳಿಗೆಬಂದು ಸ್ವಾಮಿಗಳನ್ನು ನಮಸ್ಕರಿಸಿ ಅವರನ್ನು ಕುರಿತು—"ಮಹಾಸ್ವಾಮಿ, ತಮ್ಮ ಮಠದ

ಜಮೀನುಗಳು ನಮ್ಮ ಕಡೆಗೆ ಇರುವವು; ಆದ್ದರಿಂದ ಈಗ ನಿಮ್ಮ ಜಮೀನುಗಳನ್ನು ನೀವು ತಕ್ಕೊಳ್ಳಬೇಕು" ಎಂದು ಪ್ರಾರ್ಥಿಸಲು, ಬಾಲಭುಜಂಗಯೋಗಿಗಳು ನಿಸ್ಪೃಹತೆಯಿಂದ ಗೋವಿಂದಪ್ಪನವರನ್ನು ಕುರಿತು— "ಗೋವಿಂದಪ್ಪಾ, ಇಲ್ಲಿಯವರೆಗೆ ಇದ್ದಂತೆ ಜಮೀನುಗಳು ನಿಮ್ಮ ಉಪಭೋಗದಲ್ಲಿಯೇ ಇರಲಿ, ಮುಂದೆ ನೋಡೋಣವಂತೆ" ಎಂದು ಹೇಳಿಬಿಟ್ಟರು! ಇಂತಹ ನಿಸ್ಪೃಹವೃತ್ತಿಯು ಈಗಿನಕಾಲದಲ್ಲಿ ಅನ್ಯತ್ರ ಕಣ್ಣಿಗೆ ಬೀಳುವದು ಅಪರೂಪವೇಸರಿ!

---

## ೫ನೆಯ ವರ್ಷದ ತಪಶ್ಚರ್ಯ

## ೧೪ನೇ ಅಧ್ಯಾಯ

# ತಪಸ್ಸಿನ ಸ್ವರೂಪವೂ, ಮಹಿಮೆಗಳೂ.



**ತಪಸ್ಸಿನ ಸ್ವರೂಪ**—ಬಾಲಭುಜಂಗಯೋಗಿಗಳು ನಾಲ್ಕನೆಯವರ್ಷ ಮೂರುದಿವಸ ಅಹೋರಾತ್ರ, ಹಾಗು ನಾಲ್ಕನೆಯ ದಿವಸ ಹಗಲು, ಹೀಗೆ ಎಂಬತ್ತುನಾಲ್ಕು ತಾಸು ಮುಸುಕಿನೊಳಗೆ ಏಕಾಸನದಲ್ಲಿ ಕುಳಿತು ತಪಶ್ಚರ್ಯ ಮಾಡುತ್ತಿದ್ದರೆಂದು ಹಿಂದೆ ಹೇಳಿದೆಯಷ್ಟೆ? ಈಗ ಐದನೆಯವರ್ಷ ನಾಲ್ಕುದಿನ ಅಹೋರಾತ್ರ, ಹಾಗು ಐದನೆಯದಿವಸ ಹಗಲು, ಹೀಗೆ ಸರತಿಗೆ ಒಂದುನೂರಾ ಎಂಟುತಾಸು ಮುಸುಕಿನಲ್ಲಿ ಏಕಾಸನದಿಂದ ಅಖಂಡವಾಗಿ ಕುಳಿತು ಅನುಷ್ಠಾನ ಮಾಡತೊಡಗಿದರು! ಹೀಗೆ ಕ್ರಮವಾಗಿ ಒಂದೊಂದು ವರ್ಷ ಒಂದೊಂದು ದಿನದಂತೆ ಹೆಚ್ಚಾ

ಗುತ್ತಬಂದ ಬಾಲಭುಜಂಗಯೋಗಿಯ ತಪಸ್ಸಿನ ಉತ್ಕರ್ಷವು, ಈ ಐದನೆಯ ವರ್ಷಕ್ಕೆ ಮುಗಿಯಿತು. ಇದರಂತೆ ಮುಂದೆ ಏಳುವರ್ಷ ತಪಶ್ಚರ್ಯ ಮಾಡಿ, ಕಡೆಯ ಎಂಟು ತಿಂಗಳು ಮೊದಲನೆಯವರ್ಷದಂತೆ ತಪಸ್ಸುಮಾಡಿದರು! ಈಗ ಬಾಲಭುಜಂಗ ಯೋಗಿಗಳ ವಯಸ್ಸು ಹತ್ತೊಂಬತ್ತು ವರ್ಷದ್ದಾಗಿತ್ತು. ಈವರೆಗೆ ಅವರು ಮಾಡಿದ ತಪಶ್ಚರ್ಯದ ರೀತಿಯು ಮನಸ್ಸಿನಲ್ಲಿ ಸ್ಥಿರವಾಗುವದಕ್ಕಾಗಿ, ಅದನ್ನು ಇಲ್ಲಿಯೊಮ್ಮೆ ಕ್ರಮವಾಗಿ ಹೇಳುವೆವು. ಬಾಲಭುಜಂಗಯೋಗಿಯು ಮೊದಲನೆಯವರ್ಷ ಪ್ರತಿದಿನ ಒಂದು ಹಗಲು, ಎರಡನೆಯ ವರ್ಷ ಪ್ರತಿಸಾರೆ ಒಂದು ಅಹೋರಾತ್ರ, ಒಂದು ಹಗಲು, ಮೂರನೆಯ ವರ್ಷ ಪ್ರತಿಸಾರೆ ಎರಡು ಅಹೋರಾತ್ರ ಒಂದು ಹಗಲು, ನಾಲ್ಕನೆಯ ವರ್ಷ ಪ್ರತಿಸಾರೆ ಮೂರು ಅಹೋರಾತ್ರ ಒಂದು ಹಗಲು, ಐದನೆಯ ವರ್ಷ ಪ್ರತಿಸಾರೆ ನಾಲ್ಕು ಅಹೋರಾತ್ರ ಒಂದು ಹಗಲು ಅಖಂಡವಾಗಿ ಮುಸುಕಿನಲ್ಲಿ ಅನುಷ್ಠಾನಮಾಡಿ, ಪ್ರತಿಒಂದುಸಾರೆ ಒಂದೊಂದು ರಾತ್ರಿ ಮಾತ್ರ ಮುಸುಕುತೆಗೆದು ಜನರೊಡನೆ ವಿನೋದದಿಂದ ಮಾತುಕಥೆಯಾಡುತ್ತ, ಜನರಿಗೆ ಹಣ್ಣುಗಳನ್ನು ತಮ್ಮ ಕೈಮುಟ್ಟಿಕೊಟ್ಟು ತಿನಿಸುತ್ತ ಘೋರ ತಪಶ್ಚರ್ಯಮಾಡುತ್ತಿರಲು, ಅವರಿಗೆ ನಿದ್ರೆ–ವಿಶ್ರಾಂತಿಗಳ ಸುದ್ದಿಯಿದ್ದಿಲ್ಲ; ಈ ಸಂಗತಿಯನ್ನು ಮನಸ್ಸಿನಲ್ಲಿ ತಂದರೆ, ಮಾನವೀ ವಿಚಾರವು ಕುಂಠಿತವಾಗುವದು!

ಹೀಗೆ ಬಾಲಭುಜಂಗಯೋಗಿಗಳು ಮಾಡಿದ ತಪಸ್ಸಿನ ಒಟ್ಟು ಹನ್ನೆರಡುವರ್ಷ ಎಂಟುತಿಂಗಳ ಅವಧಿಯಲ್ಲಿ, ಆ ಮಹಾತ್ಮರಿಗೆ ಬೇನೆಬೇಸರಿಕೆಗಳು ಬರಲಿಲ್ಲ; ಅವರ ಆ ದೀರ್ಘಕಾಲದ ತಪಸ್ಸಿಗೆ ಕೆಲವು ಸಣ್ಣಪುಟ್ಟ ವಿಘ್ನಗಳು ಬಂದರೂ, ಅವರು ಆಸನಭ್ರಷ್ಟರಾಗಿ ತಮ್ಮ ತಪೋಭಂಗ ಮಾಡಿಕೊಳ್ಳಲಿಲ್ಲ! ಈ ಹೀನವಾದ ಕಲಿಯುಗದಲ್ಲಿ ಬ್ರಾಹ್ಮಣರ ದೇಹದಾರ್ಢ್ಯ–ಮನೋದಾರ್ಢ್ಯಗಳು, ನಿತ್ಯನಿಯಮದಿಂದ ಬಹಳವಾದರೆ ಅರ್ಧತಾಸು ಏಕಾಸನದಲ್ಲಿಕುಳಿತು ಸಂಧ್ಯಾವಂದನೆಮಾಡುವಷ್ಟು ಉಳಿಯದಿರಲು, ಹಾಗು ವರ್ಷದಲ್ಲಿ ಕೆಲವುಸಾರೆ ಸಣ್ಣಪುಟ್ಟ ಬೇನೆಬೇಸರಿಕೆಗಳಿಗೆ

ಒಳಗಾಗಿ, ಅವರು ತಮ್ಮ ಸ್ನಾನಸಂಧ್ಯಾವಂದನೆಗಳನ್ನು ಬಿಡುತ್ತಿರಲು, ಬಾಲಭುಜಂಗಯೋಗಿಗಳು ನಿರಶನವ್ರತದಿಂದ ಮೇಲೆ ಹೇಳಿದಕ್ರಮದಂತೆ ನಿತ್ಯ ತಣ್ಣೀರಸ್ನಾನಮಾಡಿ ಅಖಂಡವಾಗಿ ಹನ್ನೆರಡುವರ್ಷ ಎಂಟುತಿಂಗಳು ತಪಶ್ಚರ್ಯ ಮಾಡುವದೆಂದರೆ, ಅಸತ್ಯಯುಗವೆನಿಸುವ ಈಗಿನ ಕಲಿಯುಗದ ದುರ್ಬಲರಾದ ಕ್ಷುದ್ರ ನರಕೀಟಕಗಳಮುಂದೆ, ಸತ್ಯಯುಗವೆನಿಸುವ ಕೃತ ಯುಗದ ಸತ್ವಶಾಲಿಗಳಾದ ತಪೋಧನ ಋಷಿಶ್ರೇಷ್ಠರ ತಪಸ್ಸಿನ ಮಾದರಿ ಯನ್ನು ತೋರಿಸಿದಂತೆಯೇಸರಿ! ಇಂತಹ ಅಲೌಕಿಕ ಸತ್ವದ ಬಾಲಭು ಜಂಗಯೋಗಿಗಳು, ನಿಶ್ಚಯವಾಗಿಯೂ ಲೋಕವಂದ್ಯರಾದವರೆಂದು ಹೇಳಲು ಬಾಧೆಯಿಲ್ಲವು! ಅಂತೇ ಆ ಮಹಾತ್ಮರಾದ ಬಾಲಭುಜಂಗ ಯೋಗಿಗಳು, ತಮ್ಮ ತೇಜೋವಿಶೇಷದಲ್ಲಿ, ಅಪ್ಪಾಸಾಹೇಬರಂಥ ತೇಜಸ್ವಿ ಸಂಸ್ಥಾನಿಕರ ತೇಜಸ್ಸನ್ನು ಅಡಗಿಸಿಕೊಂಡುಬಿಡುತ್ತಿದ್ದರು!

## ಕೆಲವು ಮಹಿಮೆಗಳು.

**ದುರಭಿಮಾನ ನಿರಸನ**—ಹೀಗೆ ಬಾಲಭುಜಂಗಯೋಗಿಗಳ ಐದ ನೆಯ ವರ್ಷದ ತಪಶ್ಚರ್ಯವು ನಡೆದಿರಲು, ದೂರದೂರದ ಜನರು ಅವರ ದರ್ಶನಕ್ಕಾಗಿ ಬರತೊಡಗಿದರು. ಅದರಂತೆ ಇಳಕಲ್ಲ ಹಣಮಂತಾಚಾರ್ಯ ರೆಂಬವರು ಬಾಲಭುಜಂಗಯೋಗಿಗಳ ತಪಸ್ಸಿನ ಕೀರ್ತಿಯನ್ನು ಕೇಳಿ, ಅವರ ದರ್ಶನಮಾಡಿಕೊಳ್ಳುವದಕ್ಕಾಗಿ ಲೋಕಾಪುರಕ್ಕೆ ಬಂದರು. ಬಾಲ ಭುಜಂಗಯೋಗಿಗಳ ತಪಶ್ಚರ್ಯವನ್ನು ನೋಡಿ ಎಲ್ಲರಂತೆ ಅವರೂ ಆಶ್ಚ ರ್ಯಮಗ್ನರಾದರು. ಹೀಗಿರುವಾಗ ಆ ಆಚಾರ್ಯರ ಮನಸ್ಸಿನಲ್ಲಿ ಪರ ಮಹಂಸರ ವೃಂದಾವನದ ಮಂದಿರದಲ್ಲಿ ಬಾಲಭುಜಂಗಯೋಗಿಗಳು ತಪ ಶ್ಚರ್ಯಕ್ಕೆ ಕುಳಿತಿರುವಾಗಲೇ ಸತ್ಯನಾರಾಯಣವ್ರತವನ್ನು ಮಾಡಬೇ ಕೆಂಬ ವಿಚಾರವು ಬಂದಿತು. ಯಾವನೊಂದು ವ್ರತವನ್ನು ಸಾಮಾನ್ಯಸ್ಥ ಳದಲ್ಲಿ ಮಾಡುವದಕ್ಕಿಂತ, ಮಹಾಕ್ಷೇತ್ರದಲ್ಲಿ ತಪೋಧನರಹತ್ತರ ಮಾಡು ವದು ಮಹಾಫಲದಾಯಕವೆಂಬದು ಸತ್ಯವು. ಅದರಂತೆ ಭಾವಿಸಿಯೇ ಆಚಾರ್ಯರು ಸತ್ಯನಾರಾಯಣವ್ರತಮಾಡಲು ನಿಶ್ಚಯಿಸಿರಬಹುದು. ಮುಂದೆ ಬಾಲಭುಜಂಗಯೋಗಿಗಳು ಮುಸುಕುತೆಗೆಯಲು, ಹಣಮಂ

ತಾಚಾರ್ಯರು ತಮ್ಮ ಸತ್ಯನಾರಾಯಣವ್ರತದ ವಿಷಯವಾಗಿ ಆ ಮಹಾ ಸ್ವಾಮಿಗಳನ್ನು ವಿಚಾರಿಸಿದರು. ಆಗ ಸ್ವಾಮಿಗಳು ಹಣಮಂತಾಚಾರ್ಯರಿಗೆ—"ನೀವು ಅವಶ್ಯವಾಗಿ ಸತ್ಯನಾರಾಯಣವ್ರತವನ್ನು ಮಾಡಬಹುದು; ಆದರೆ ಅದನ್ನು ಈ ಪರಮಹಂಸರ ವೃಂದಾವನದ ಮಂದಿರದಲ್ಲ ಮಾಡದೆ, ಮಠದಲ್ಲಿಮಾಡಿರಿ; ಯಾಕಂದರೆ, ಪರಮಹಂಸರು ಕೇವಲ ಜ್ಞಾನಮಾರ್ಗಿಗಳು, ಅಲ್ಲದೆ ಈ ಸ್ಥಳದಲ್ಲಿ ನೈವೇದ್ಯವಾಗಲಿ ಮೈಲಿಗೆಯು ತಡೆಯುವದಿಲ್ಲ; ಮೇಲಾಗಿ ಜನಸಮ್ಮರ್ದವು ನಮ್ಮ ಅನುಷ್ಠಾನಕ್ಕೆ ಬಾಧಕವಾದೀತು" ಎಂದು ಹೇಳಿ, ತಾವು ಕುಳಿತುಕೊಳ್ಳುವಹಾಗೆ ಮುಸುಕು ಹಾಕಿಕೊಂಡು ಅನುಷ್ಠಾನಕ್ಕೆ ಕುಳಿತರು.

ಸ್ವಾಮಿಗಳು ಹೇಳಿದ್ದು ಆಚಾರ್ಯರ ಮನಸ್ಸಿಗೆ ಬರಲಿಲ್ಲ; ಅವರು ನಾಲ್ಕು ಜನರಮುಂದೆ ತಮ್ಮ ಸತ್ಯನಾರಾಯಣವ್ರತದ ಪ್ರದರ್ಶನಮಾಡಬೇಕಾಗಿತ್ತು. ಆದ್ದರಿಂದ ಸ್ವಾಮಿಗಳು ಹೇಳಿದ್ದರ ಸಮಾಧಾನವನ್ನು ಅವರು ಹೀಗೆ ಮಾಡಿಕೊಂಡರು—"ಪರಮಹಂಸರು ಕೇವಲ ಜ್ಞಾನಮಾರ್ಗಿಗಳೆಂದರೇನು? ಪರಮಾತ್ಮವಿಷಯಕ ಭಕ್ತಿಯಿಲ್ಲದೆ, ಕೇವಲ ಜ್ಞಾನಕ್ಕಾಗಿ ಯತ್ನಿಸುವದೆಂದರೆ, ಬತ್ತದಗೊಳಲಿಯನ್ನು ಕುಟ್ಟಿ ವ್ಯರ್ಥಶ್ರಮಪಟ್ಟಹಾಗೆಯೆಂದು, ಕೆಳಗಿನ—

ಶ್ರೇಯಃ ಸ್ರುತಿಂ ಭಕ್ತಿ ಮುದಸ್ಯತೇ ವಿಭೋ |  
ಕ್ಲಿಶ್ಯಂತಿಯೇ ಕೇವಲ ಬೋಧಲಬ್ಧಯೇ ||  
ತೇಷಾಮಸೌ ಕ್ಲೇಶಲ ಏವಶಿಷ್ಯತೇ |  
ನಾನ್ಯದ್ಯಥಾ ಸ್ಥೂಲತುಷಾವಘಾತಿನಾಂ ||೧||

ಎಂಬಶ್ಲೋಕದಿಂದ ಶ್ರೀಮದ್ಭಾಗವತದಲ್ಲಿಹೇಳಿರುವದರಿಂದ, ಸತ್ಯನಾರಾಯಣ ಪೂಜೆಯುಪರಮಹಂಸರಮನಸ್ಸಿಗೆಬಾರದೆಹೇಗೆಇದ್ದೀತು? ಇನ್ನುಮಡಿಮೈಲಿಗೆಯ ಮಾತಿನ ವಿಚಾರವು! ತ್ರಿಮತಸ್ಥರಲ್ಲಿ ಒಂದೊಂದು ಒಬ್ಬೊಬ್ಬರಲ್ಲಿ ಮುಖ್ಯವಿರುವದು; ಅಂದರೆ, ಸ್ಮಾರ್ತರಲ್ಲಿ ಮಂತ್ರ, ಶ್ರೀವೈಷ್ಣವರಲ್ಲಿ ಮರೆ, ನಮ್ಮ ವೈಷ್ಣವರಲ್ಲಿ ಮಡಿ ಇವು ಮುಖ್ಯವಾಗಿರುವವು; ಅಂದಬಳಿಕ ನಮಗೆ ವೈಷ್ಣವರಿಗೆ ಮಡಿಯವಿಚಾರದಲ್ಲಿ ಸ್ಮಾರ್ತರು ಹೇಳುವ

ದೇನು? ಆದ್ದರಿಂದ ನಮ್ಮ ಮಡಿಯುವಿಷಯದಲ್ಲಿಯೂ ಸಂಶಯಪಡುವ ಕಾರಣವಿಲ್ಲ. ಇನ್ನು ಜನರ ಗದ್ದಲವಾಗುವದೆಂಬದೊಂದು ಮಾತಿನ ವಿಚಾರವು ಉಳಿಯಿತು; ಆದರೆ ಜನರಿಗೆ ಸುಮ್ಮನೆ ಕೂಡಹೇಳಿ, ನಾವು ಮೆಲ್ಲಗೆ ಮಂತ್ರಅಂದು ಪೂಜೆಮಾಡಿ, ಮೆಲ್ಲಗೆ ಕಥೆಯನ್ನು ಓದಿಬಿಟ್ಟ ರಾಯಿತು!

ಹೀಗೆ ಹಣಮಂತಾಚಾರ್ಯರು ಬಾಲಭುಜಂಗಯೋಗಿಗಳ ಮೂರು ಮಾತುಗಳಿಗೆ ಸಪ್ರಮಾಣ ಭಾಷ್ಯಬರೆದು, ಕಡೆಗೆ ತಮ್ಮ ಸತ್ಯನಾರಾಯಣ ವ್ರತದ ಪ್ರದರ್ಶನವನ್ನು ಬಾಲಭುಜಂಗಯೋಗಿಗಳ ಮಾತು ಮೀರಿ, ಪರಮ ಹಂಸರ ಸಮಾಧಿಯ ಮಂದಿರದಲ್ಲಿಯೇ ಹೂಡಿದರು! ಆಚಾರ್ಯರು ತಮ್ಮಭಾಷ್ಯದಲ್ಲಿ, ಮೈಲಿಗೆಯೆಂದರೆ, ಪ್ರಾವರಣ-ದೇಹ-ಕರ್ಮ-ಮನಸ್ಸು ಇವುಗಳ ಮಾಲಿನ್ಯವೆಂದು ತಿಳಿದುಕೊಂಡಂತೆ ತೋರುತ್ತದೆ; ಆದರೆ ಬಾಲ ಭುಜಂಗಯೋಗಿಗಳು ಸೂಚಿಸಿದ ಆತ್ಮನ ಮಾಯಾಮಲದಆವರಕದ ಮೈಲಿ ಗೆಯುಆಚಾರ್ಯರ ಮನಸ್ಸಿನಲ್ಲಿಬಂದಿದ್ದರೆ, ಆವರು ಬಾಲಯೋಗಿಗಳಮಾತು ಮೀರುವ ಸಾಹಸಮಾಡುತ್ತಿದ್ದಿಲ್ಲ; ಅದರಂತೆ, "ಫಲಸ್ಯಕಾರಣಂ ಪುಷ್ಪಂ ಫಲೇ ಪುಷ್ಪ ನಿವಾರಣಂ। ಜ್ಞಾನಸ್ಯಕಾರಣಂ ಕರ್ಮ ಜ್ಞಾನೇಕರ್ಮ ನಿವಾರಣಂ" ಎಂಬ ಉಕ್ತಿಯಂತೆ, ಕೇವಲ ಜ್ಞಾನಾನಂದಾನುಭವದಲ್ಲಿ ಕರ್ಮ-ಭಕ್ತಿಗಳ ಸಾಮರಸ್ಯವಾಗುವದೆಂಬ ಮಾತು ಆಚಾರ್ಯರ ಮನಸ್ಸಿ ನಲ್ಲಿ ಬಂದಿದ್ದರೆ, ಆವರು ಬಾಲಯೋಗಿಗಳ ಮಾತು ಮೀರುತ್ತಿದ್ದಿಲ್ಲ! ಆಚಾ ರ್ಯರ ಭಾವನೆಯೂ, ಕರ್ಮವೂ ಒಳ್ಳೆಯವೆಂಬದರಲ್ಲಿ ಸಂಶಯವಿಲ್ಲ! ಅದರಂತೆ ಭಕ್ತಿಯಿಂದ ಈಶ್ವರಪ್ರಸಾದವನ್ನು ಸಂಪಾದಿಸದೆ, ನಾವು ಕೇವಲ ಜ್ಞಾನದಿಂದ ಮೋಕ್ಷವನ್ನು ಪಡೆಯುವೆವೆಂದು ಹೆಮ್ಮೆಪಡುವ ವರು ವ್ಯರ್ಥಆಯಾಸಪಡುವರೆಂಬದೂ ನಿಶ್ಚಯವು; ಆದರೆ ಆಚಾರ್ಯರು ಬಾಲಭುಜಂಗ ಸ್ವಾಮಿಗಳನ್ನು ಕೇಳದೆ, ಸದ್ಭಾವದಿಂದ ತಮ್ಮ ಮನ ಸ್ಸಿಗೆಬಂದ ಸ್ಥಳದಲ್ಲಿ ಸತ್ಯನಾರಾಯಣನವ್ರತವನ್ನು ಮಾಡಿದ್ದರೆ, ಏನಾ ಗುತ್ತಿತ್ತೋ ಆಗುತ್ತಿತ್ತು. ಹಾಗೆ ಮಾಡುವದನ್ನು ಬಿಟ್ಟು ತಮ್ಮ ಭಕ್ತಿ ವಿಶೇಷವನ್ನು ಸ್ವಾಮಿಗಳ ಮುಂದೆ ತೋರಿಸುವದಕ್ಕಾಗಿ, ಸ್ವಾಮಿಗಳನ್ನು

ಗೌರವಿಸುವಂತೆ ಅವರನ್ನು ಕೇಳಿ, ಅವರು ಹೇಳಿದಂತೆ ಮಾಡದೆ ತಮ್ಮ ಮನಸ್ಸಿಗೆ ಬಂದಂತೆ ಮಾಡಿದ್ದು, ಆಚಾರ್ಯರ ಮಹಾಪರಾಧವಾಯಿತೆಂಬದರಲ್ಲಿ ಸಂಶಯವಿಲ್ಲ! ಯಾವದೊಂದು ಕರ್ಮವನ್ನು ತಮ್ಮ ಮನಸ್ಸಿಗೆ ಬಂದಂತೆ ಮಾಡುವದಕ್ಕಿಂತ, ದೊಡ್ಡವರು ಹೇಳಿದಂತೆ ಮಾಡುವದು ಶ್ರೇಯಸ್ಕರವು. ಹೀಗಿದ್ದು, ಹಣಮಂತಾಚಾರ್ಯರು ತಾವಾಗಿ ದೊಡ್ಡವರನ್ನು ಕೇಳಿ, ಅವರು ಹೇಳಿದಂತೆ ಮಾಡದೆಯಿದ್ದ ತಪ್ಪಿನಫಲವನ್ನು ಭೋಗಿಸದಿದ್ದರೆ ಹೇಗೆ ಬಿಟ್ಟೀತು? ಕರ್ಮಭೋಗವು ಯಾರನ್ನೂ ಬಿಟ್ಟಿದ್ದಲ್ಲ.

ಹಣಮಂತಾಚಾರ್ಯರು ಸತ್ಯನಾರಾಯಣನ ಪೂಜೆಯನ್ನು ಆರಂಭಿಸಿದಕೂಡಲೆ, ಸಂಗಮರವರೀ ಕಟ್ಟೆಯು, ಹಾಗು ಸಂಗಮರವರೀ ಫರಸಿನ ಮಂದಿರದಲ್ಲಿ ಎತ್ತಲಿಂದಲೋ ಕಟ್ಟಿರಿವೆಗಳು ಎದ್ದು, ಮಂದಿರದಲ್ಲೆಲ್ಲ ಹಬ್ಬಿದವು! ಅನುಷ್ಠಾನಕ್ಕೆ ಕುಳಿತಿದ್ದ ಬಾಲಭುಜಂಗಯೋಗಿಗಳ ಮುಸುಕಿನಮೇಲೆ ಕಟ್ಟಿರಿವೆಗಳ ಮತ್ತೊಂದು ಕರಿಯ ಮುಸುಕನ್ನು ಹಾಕಿದಂತಾಯಿತು! ಆದರೆ ಬಾಲಭುಜಂಗಯೋಗಿಗಳು ಸ್ಥಳಬಿಟ್ಟು ಹೋಗುವದಂತು ಇರಲಿ, ಅವರ ದೇಹವು ಕೂಡ ಮಿಸುಕಲಿಲ್ಲ! ಇತ್ತ ಪೂಜೆಯನ್ನು ಆರಂಭಿಸಿದ್ದ ಹಣಮಂತಾಚಾರ್ಯರು, ಕಟ್ಟಿರಿವೆಗಳ ಕಾಟಕ್ಕೆ ತತ್ತರಿಸಿ ತಮ್ಮ ದೇವರನ್ನು ಕಟ್ಟಿಕೊಂಡು ಮಠಕ್ಕೆ ನಡೆದರು. ಪೂಜೆನೋಡಲಿಕ್ಕೆ ಬಂದಿದ್ದ ಜನರಂತು ಮೊದಲೇ ಎದ್ದುಹೋಗಿದ್ದರು. ಹೀಗೆ ಎಲ್ಲರೂ ಎದ್ದು ಹೋದಬಳಿಕ ಮುಂದೆ ಸ್ವಲ್ಪ ಹೊತ್ತಿನಮೇಲೆ ಇರಿವೆಗಳೆಲ್ಲ ಮಾಯವಾಗಿ ಮಂದಿರವು ಶಾಂತವಾಯಿತು! ಇಷ್ಟೆಲ್ಲ ಸ್ಥಿತ್ಯಂತರಗಳು ನಡೆದಿದ್ದರೂ, ಅದರಿಂದ ಬಾಲಭುಜಂಗಯೋಗಿಗಳ ಅನುಷ್ಠಾನಕ್ಕೆ ಚ್ಯುತಿಯುಂಟಾಗಲಿಲ್ಲ ನಿಜವಾದ ಅನುಷ್ಠಾನಕ್ಕೂ, ಅನುಷ್ಠಾನದ ಸೋಗಿಗೂ ಇಷ್ಟು ಅಂತರವಿರುವದು! ನಿಜವಾದ ತಪಸ್ವಿಗಳ ಮೈಮೇಲೆ ಹುತ್ತಬೆಳೆದ ವಾಲ್ಮೀಕಿಋಷಿಗಳಂಥವರ ಉದಾಹರಣಗಳು ನಮ್ಮ ಪ್ರಾಚೀನೇತಿಹಾಸ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟಿರುವವು. ಅವೆಲ್ಲ ಈಗಿನ ಕ್ಷುದ್ರ ಮಾನವಕೀಟಕಗಳಿಗೆ ಕಟ್ಟುಕಥೆಗಳಾಗಿತೋರಿದರೆ ಆಶ್ಚರ್ಯವಲ್ಲ. ಅಂಥವರು, ಮೊನ್ನೆ ಮೊನ್ನೆ ಆಗಿ.

ಹೋಗಿದ್ದ ಈ ಮಹಾತ್ಮರಾದ ಬಾಲಭುಜಂಗಯೋಗಿಗಳ ಪ್ರತ್ಯಕ್ಷವಾಗಿದ್ದ ತಪಸ್ಸಿನಿಂದ ಸ್ವಲ್ಪವಾದರೂ ಬುದ್ಧಿ ಕಲಿಯಬಹುದಾಗಿದೆ; ಆದರೆ ಈಗಿನ ಸ್ವೇಚ್ಛಾಪ್ರವೃತ್ತಿಯ ಕಾಲದಲ್ಲಿ ಬುದ್ಧಿಗಲಿಯುವಇಚ್ಛೆಯು ಎಷ್ಟು ಜನರಿಗಿರುವದೆಂಬದನ್ನು ಹೇಳುವದು ಕಷ್ಟವು!

**ಮಠದ ಚರಿತ್ರಲೇಖನ**—ಹೀಗೆ ಬಾಲಭುಜಂಗಯೋಗಿಗಳ ಐದನೆಯ ವರ್ಷದ ಆಶ್ಚರ್ಯಕಾರಕ ತಪಸ್ಸಿನ ಸುದ್ದಿಯು, ಜನರ ಮುಖಾಂತರವಾಗಿಯೂ, ವರ್ತಮಾನಪತ್ರಗಳ ಮುಖಾಂತರವಾಗಿಯೂ ಲೋಕದಲ್ಲಿ ಹಬ್ಬಿತು. ಈ ಸುದ್ದಿಯನ್ನು ಕೇಳಿ ಮುರಗೋಡದಲ್ಲಿದ್ದ ಕಾಶೀಕರ ಸಾಂಬದೀಕ್ಷಿತರೆಂಬವರು ಸಂತೋಷಪಟ್ಟು, ತಮ್ಮ ಮನೋದಯವು ಬಾಲಭುಜಂಗಯೋಗಿಯ ಕೃಪೆಯಿಂದ ಪೂರ್ಣವಾದೀತೆಂದು ಭಾವಿಸಿ, ಲೋಕಾಪುರಕ್ಕೆ ಬಂದರು. ಅವರು ಹಿಂದಕ್ಕೆ ಮುರಗೋಡದಲ್ಲಿ ಅವತರಿಸಿದ್ದ ಸುಪ್ರಸಿದ್ಧರಾದ ಮಹಾಸ್ವಾಮಿ ಶ್ರೀಚಿದಂಬರದೀಕ್ಷಿತರ ದೌಹಿತ್ರರು. ಅವರು ಬಾಲಭುಜಂಗಯೋಗಿಗಳ ಉಗ್ರತಪಶ್ಚರ್ಯವನ್ನು ಪ್ರತ್ಯಕ್ಷನೋಡಿ ಸಂತೋಷಪಟ್ಟರು. ಮುಂದೆ ಆ ಭುಜಂಗಸ್ವಾಮಿಗಳು ತಮ್ಮ ಅವಧಿಗೆ ಸರಿಯಾಗಿ ಐದನೆಯ ದಿವಸರಾತ್ರಿ ಮುಸಕು ತೆಗೆಯಲು, ಸಾಂಬದೀಕ್ಷಿತರು ಅವರ ದರ್ಶನಮಾಡಿಕೊಂಡು ಅವರಿಗೆ ನಮಸ್ಕಾರಮಾಡಿದರು. ಸಾಂಬದೀಕ್ಷಿತರನ್ನು ನೋಡಿ ಬಾಲಭುಜಂಗಯೋಗಿಗಳಿಗೆ ಬಹಳ ಸಂತೋಷವಾಯಿತು. ಆ ಯೋಗಿಗಳು ಸಾಂಬದೀಕ್ಷಿತರನ್ನು ಕುರಿತು—"ನೀವು ಒಳ್ಳೆಯ ವಿದ್ವಾಂಸರೂ, ಸದಾಚಾರಸಂಪನ್ನರೂ ಇರುವಿರಿ. ಇಂಥವರು ಅನಾಯಾಸವಾಗಿ ನಮ್ಮ ಊರಿಗೆ ಬಂದಿರುವದರಿಂದ, ಸುಯೋಗವು ಒದಗಿದಂತಾಗಿರುತ್ತದೆ; ಆದ್ದರಿಂದ ನಮ್ಮ ಪೀಠದ ಮೂಲ ಪುರುಷರಾದ ಪರಮಹಂಸರ ಚರಿತ್ರವನ್ನು ಸಂಸ್ಕೃತದಲ್ಲಿ ಬರೆಯಿರಿ; ಅಂದರೆ ನಿಮ್ಮ ಹೆಸರು ಉಳಿಯುವದು" ಎಂದು ಹೇಳಲು, ಸಾಂಬದೀಕ್ಷಿತರು ಸಂತೋಷಪಟ್ಟು ಬಾಲಭುಜಂಗ ಸ್ವಾಮಿಗಳನ್ನು ಕುರಿತು—"ಮಹಾಸ್ವಾಮಿ, ತಮ್ಮ ಅಪ್ಪಣೆಯು ಶಿರಸಾಮಾನ್ಯವು; ಮಠದಲ್ಲ ಸ್ವಾಮಿಗಳ ಚರಿತ್ರದ ಸಂಗತಿಗಳನ್ನು ತಾವು ನನಗೆ ಹೇಳಬೇಕು;

ಯಾಕಂದರೆ ನಾನು ಇಲ್ಲಿಗೆ ಎಂದೂ ಬಂದವನಲ್ಲವಾದದ್ದರಿಂದ, ನನಗೆ ಚರಿತ್ರದ ಸಂಗತಿಗಳು ಯಾವವೂ ಗೊತ್ತಿರುವದಿಲ್ಲವು" ಎಂದು ಹೇಳಿದರು. ಹೀಗೆ ಸಾಂಬದೀಕ್ಷಿತರು ಕೇಳಿಕೊಳ್ಳಲು, ಬಾಲಭುಜಂಗಯೋಗಿಗಳು ಸಾಂಬದೀಕ್ಷಿತರಿಗೆ—"ದೀಕ್ಷಿತರೇ, ನಮ್ಮ ಮಠದ ಸ್ವಾಮಿಗಳ ಚರಿತ್ರವು ನನಗೆ ಏನು ಗೊತ್ತಿರುತ್ತದೆಂದು ಹೇಳಲಿ? ನನ್ನ ಬಾಲ್ಯದ ಹದಿನಾಲ್ಕು ವರ್ಷಗಳೆಲ್ಲ ಉಡಾಳತನದಲ್ಲಿ ಕಳೆದುಹೋದವು! ಆಗ ನಾನು ಏನನ್ನೂ ಕಲಿಯಲಿಲ್ಲ, ಏನನ್ನೂ ಕೇಳಲಿಲ್ಲ. ನನ್ನ ಹದಿನಾಲ್ಕು ವರ್ಷಗಳ ವಯಸ್ಸಿನಿಂದ ಈಗ ಐದು ವರ್ಷಗಳು ಅನುಷ್ಠಾನದಲ್ಲಿ ಕಳೆದು ಹೋಗಿರುವವು; ಆದ್ದರಿಂದ ನನಗೆ ಮಠದ ಯಾವಸ್ವಾಮಿಗಳ ಯಾವವೃತ್ತಾಂತವೂ ಗೊತ್ತಿರುವದಿಲ್ಲ. ಇದಲ್ಲದೆ, ನಾನು ಮಠದ ಸ್ವಾಮಿಗಳ ಪ್ರತ್ಯಕ್ಷ ವಂಶದವನಲ್ಲ; ಚಿನ್ನಗುಂಡಿಯ ಮನೆತನದಿಂದ ದತ್ತಕಬಂದವನು, ಆದ್ದರಿಂದ ನೀವು ಮುತ್ತಯ್ಯನನ್ನು ಪ್ರಾರ್ಥಿಸಿ, ಆತನ ವೃಂದಾವನದ ಬಳಿಯಲ್ಲಿ ಮಲಗಿಕೊಂಡು, ಆತನು ಸ್ವಪ್ನದಲ್ಲಿ ಹೇಳಿದಂತೆ ಚರಿತ್ರೆ ಬರೆಯಿರಿ" ಎಂದು, ವರಪ್ರದಾನ ಮಾಡಿದಂತೆ ಹೇಳಿ, ತಮಗೆ ಕೇಳಿ ಗೊತ್ತಿದ್ದಷ್ಟು ಸಂಗತಿಯನ್ನು ಹೇಳಹತ್ತಿದರು. ಅಷ್ಟರಲ್ಲಿ ಬೇರೆ ಜನರು ಬರಲು, ಸ್ವಾಮಿಗಳು ಅವರ ಸಂಗಡ ಮಾತಾಡುವಾಗ, ಚರಿತ್ರ ಹೇಳುವದು ಅಲ್ಲಿಗೇ ನಿಂತಿತು. ಮುಂದೆ ಬೆಳಗಾದಬಳಿಕ ಸ್ವಾಮಿಗಳು ಅನುಷ್ಠಾನಕ್ಕೆ ಕುಳಿತುಕೊಳ್ಳಲು, ಸಾಂಬದೀಕ್ಷಿತರು ಸ್ವಾಮಿಗಳ ಅಪ್ಪಣೆಯಂತೆ ಐದು ದಿವಸ ಪರಮಹಂಸರ ವೃಂದಾವನದ ಬಳಿಯಲ್ಲಿ ಮಲಗಿ, ಸ್ವಪ್ನದಲ್ಲಿ ದೃಷ್ಟಾಂತವಾದದ್ದರ ಮೇಲಿಂದ ಸಂಸ್ಕೃತ ಶ್ಲೋಕಬದ್ಧವಾಗಿ ಪರಮಹಂಸರಿಂದ ಬಾಲಭುಜಂಗಯೋಗಿಗಳವರೆಗಿನ ಎಲ್ಲ ಸ್ವಾಮಿಗಳ ಚರಿತ್ರಗಳನ್ನು ಬರೆದು ಮುಗಿಸಿದರು! ಮುಂದೆ ಸ್ವಾಮಿಗಳು ಮುಸುಕು ತೆಗೆದಬಳಿಕ ತಮ್ಮ ಬಾಯಿಂದ ಪರಮಹಂಸಾದಿಕರ ಚರಿತ್ರವನ್ನು ಹೇಳಲು, ಅದು ಕಾಶೀಕರರು ಬರೆದ ಚರಿತ್ರವೇ ಆಗಿತ್ತು. ಅದನ್ನು ಕೇಳಿ ಕಾಶೀಕರರಿಗೆ ಪರಮಾಶ್ಚರ್ಯವಾಯಿತು. ಸ್ವಾಮಿಗಳು ಸಾಂಬದೀಕ್ಷಿತರು ಬರೆದಿದ್ದ ಚರಿತ್ರಗಳನ್ನು ಓದಿಸಿ ಕೇಳಿ ಸಂತೋಷಪಟ್ಟು, ದೀಕ್ಷಿತರಿಗೆ ಫಲಮಂತ್ರಾಕ್ಷತೆ

ಕೊಡುವಾಗ ಅವರನ್ನು ಕುರಿತು—"ದೀಕ್ಷಿತರೇ, ನಿಮ್ಮ ಅಭೀಷ್ಟವು ಪೂರ್ಣವಾಗುವದು" ಎಂದು ಹೇಳಿ, ಅವರಿಗೆ ಅಪ್ಪಣೆಕೊಟ್ಟು ಕಳಿಸಿದರು. ಮುಂದೆ ಸಾಂಬದೀಕ್ಷಿತರು ಆ ಪುಸ್ತಕವನ್ನು ತಕ್ಕೊಂಡು ಗಲಗಲಿಗೆ ಹೋಗಿ, ಸ್ವಾಮಿಗಳ ಕಕ್ಕಂದಿರ ಮಕ್ಕಳಾದ ಪುಟ್ಟ ದೀಕ್ಷಿತರಿಂದ ಹಲವು ಸಂಗತಿಗಳನ್ನು ತಿಳಕೊಂಡು, ತಮ್ಮ ಆ ಸಂಸ್ಕೃತ ಚರಿತ್ರವನ್ನು ಪೂರ್ಣಮಾಡಿದರು ಆದೀಕ್ಷಿತರ ಆ ಸಂಸ್ಕೃತ ಚರಿತ್ರ ಪುಸ್ತಕವೇ ನಮ್ಮ ಈಕನ್ನಡಚರಿತ್ರದ ಮೂಲಧನವಾಗಿರುವದಲ್ಲದೆ, ಪುಟ್ಟ ದೀಕ್ಷಿತರ ತಮ್ಮಂದಿರಾದ ಕೃಷ್ಣದೀಕ್ಷಿತರು ಹೇಳಿದ ಎಷ್ಟೋ ಸಂಗತಿಗಳಿಂದ ಈ ಕನ್ನಡ ಚರಿತ್ರವು ಪರಿಪುಷ್ಟವಾಗಿರುವದು!

**ಶಿಷ್ಯವಾತ್ಸಲ್ಯ**—ಹೀಗೆ ಬಾಲಭುಜಂಗಯೋಗಿಗಳ ತಪಶ್ಚರ್ಯದ ಕೀರ್ತಿಯು ನಾಲ್ಕೂಕಡೆಗೆ ಹಬ್ಬಲು, ಅಸೂಟಿಯ ಕರ್ಪೂರಗ ಬಾಳಂಭಟ್ಟರೆಂಬವರು, ಲೋಕಾಪುರಕ್ಕೆ ಸ್ವಾಮಿಗಳದರ್ಶನಕ್ಕೆ ಬರಬೇಕೆಂದು ಹೊರಟರು ಅವರು ಕಲಾದಿಗಿಯಿಂದ ಲೋಕಾಪುರಕ್ಕೆ ಬರುವದರೊಳಗಾಗಿ ರಾತ್ರಿಯಾಗಲು, ಕತ್ತಲಲ್ಲಿ ಊರುಗೊತ್ತಾಗದೆ, ಅವರು ಹಾದಿಯು ತಪ್ಪಿ, ಅಡವಿಯಬಿದ್ದರು. ಅವರು ಹಿಡಿದಿದ್ದ ಬಂಡಿಯುದಾರಿಯು ಕಲ್ಲಕಣಿಯ ಗುಡ್ಡಕ್ಕೆ ಹೋಗುತ್ತಿತ್ತು. ಬಾಳಂಭಟ್ಟರು ಬೇಗಬೇಗನಡೆದು ಹೋಗಲು, ಅವರಿಗೆ ಕಲ್ಲಕಣಿಯ ಗುಡ್ಡವು ಹತ್ತಿತು. ಅವರಿಗೆ ಅರಿಯದ ದೇಶವಾದದ್ದರಿಂದ, ಎತ್ತಕಡೆಗೆ ಹೋಗಬೇಕೆಂಬದು ತಿಳಿಯದೆ ಅವರಿಗೆ ದಿಕ್ಕುತಪ್ಪಿದಂತಾಯಿತು! ಆಗ ಅವರು ಬೆಳತನಕ ಈ ಕಣಿಯ ಬಳಿಯಲ್ಲಿ ಇದ್ದು, ಬೆಳಗಾದಬಳಿಕ ಊರಿಗೆ ಹೋಗಬೇಕೆಂದು ಮಾಡಿದರು. ಅಷ್ಟರಲ್ಲಿ ಮಳೆ ಏರಿಬರಲು, ಅವರಿಗೆ ಏನೂತೋಚದಾಯಿತು. ಆಗ ಅವರು ಮನಸ್ಸಿನಲ್ಲಿ ಬಾಲಭುಜಂಗಯೋಗಿಗಳ ಧ್ಯಾನಮಾಡುತ್ತ—"ಸದ್ಗುರುನಾಥಾ, ನಿನ್ನ ದರ್ಶನಕ್ಕಾಗಿ ಬಂದಿರುವ ನನ್ನನ್ನು ನೀನೇ ರಕ್ಷಿಸಬೇಕು." ಎಂದು ಪ್ರಾರ್ಥಿಸುತ್ತಿರಲು, ಅಷ್ಟರಲ್ಲಿ ಒಬ್ಬ ಕಂಬಳಿಯ ಮುಸುಕಿನವನು ಅಲ್ಲಿಗೆ ಬಂದು ಬಾಳಂಭಟ್ಟರಿಗೆ—"ನೀವು ಯಾವ ಊರವರು? ಎಲ್ಲಿಗೆ ಹೋಗುತ್ತೀರಿ? ಈ ಹಾದಿಯು ಗುಡ್ಡಕ್ಕೆ ಹೋಗು

ತ್ತದೆ" ಎಂದು ಹೇಳಲು, ಬಾಳಂಭಟ್ಟರು—"ಮಹಾರಾಯಾ, ನಾವು ಆಸೂಟಿಯವರು ಲೋಕಾಪುರಮಠಕ್ಕೆ ಸ್ವಾಮಿಗಳ ದರ್ಶನಕ್ಕಾಗಿ ಹೋಗುವೆವು. ನಮಗೆ ಹಾದಿಯೇ ಗೊತ್ತಾಗಲೊಲ್ಲದು; ಆದ್ದರಿಂದ ಹಾದಿಯತೋರಿಸಿ ಪುಣ್ಯಕಟ್ಟಿಕೊಳ್ಳಬಾರದೆ?" ಎಂದು ಪ್ರಾರ್ಥಿಸಿದರು.

ಬಾಳಂಭಟ್ಟರ ಈ ಮಾತುಗಳನ್ನು ಕೇಳಿ ಆ ಮನುಷ್ಯನು—"ಸ್ವಾಮಿ, ಹೀಗೆಬರಬೇಕು, ನಾನು ನಿಮ್ಮನ್ನು ಸ್ವಾಮಿಗಳ ಮಠಕ್ಕೇ ಕರ ಕೊಂಡು ಹೋಗುತ್ತೇನೆ." ಎಂದು ಹೇಳಿ, ಮುಂದೆ ಹಾದಿಯಹಿಡಿದು ಸಾಗಿದನು. ಬಾಳಂಭಟ್ಟರೂ ಸುಮ್ಮನೆ ಆತನ ಬೆನ್ನುಹತ್ತಿನಡೆದರು ಇವರ ಮೇಲೆ ಮಳೆಯಾಗದೆ, ಇವರ ಮುಂದೆ ಮುಂದೆ ಮಳೆಯಾಗುತ್ತಲಿತ್ತು! ಕಾಲಲ್ಲಿ ಕೆಸರು, ತಲೆಯಮೇಲೆ ಮಳೆಯಿಲ್ಲ ಇದೊಂದು ಬಾಳಂಭಟ್ಟರಿಗೆ ಕೌತುಕದ ಸಂಗತಿಯಾಗಿಯೇತೋರಿತು! ಆದರೆ ಅವರು ಊರಕಂಡರೆ ಸಾಕೆಂದು ಮುಂದಿನ ಮನುಷ್ಯನ ಬೆನ್ನುಹತ್ತಿ ಸುಮ್ಮನೆ ಸಾಗಿದ್ದರು. ಆ ಮನುಷ್ಯನು ಮಠದಮುಂದೆನಿಂತು ಬಾಳಂಭಟ್ಟರನ್ನು ಕುರಿತು—"ಹೋಗಿರಿ, ಇದೇಮಠವು, ಒಳಗೆ ಹೋಗಿರಿ; ಸ್ವಾಮಿಗಳು ಮುಸುಕು ತೆಗೆದಂತೆ ತೋರುತ್ತದೆ," ಅನ್ನಲು, ಅತ್ತ ಸ್ವಾಮಿಗಳು ಮುಸುಕು ತೆಗೆದಕೂಡಲೆ ಜನರನ್ನು ಕುರಿತು—"ಹೊರಗೆ ಒಬ್ಬರು ಹಾದಿಯತಪ್ಪಿ ದಣಿದು ಬಂದಿದ್ದಾರೆ, ಮೊದಲು ಅವರ ಸಮಾಚಾರ ತಕ್ಕೊಳ್ಳಿರಿ" ಎಂದು ಹೇಳುವದು ಬಾಳಂಭಟ್ಟರ ಕಿವಿಗೆ ಬಿದ್ದಿತು; ಆಗ ಅವರಿಗೆ ಪರಮಾಶ್ಚರ್ಯವಾಗಿ, ತಮ್ಮನ್ನು ಕರಕೊಂಡು ಬಂದವರು ಬಾಲಭುಜಂಗ ಸ್ವಾಮಿಗಳೇ ಎಂಬ ವಿಚಾರವು ಅವರ ಮನಸಿನಲ್ಲಿ ಉತ್ಪನ್ನವಾಗಿ, ಅವರು ಮಠದ ಹೊರಗೆಹೋಗಿ ಆ ಮನುಷ್ಯನನ್ನು ಹುಡುಕಲು, ಅವನು ಅಲ್ಲಿ ಕಾಣಲಿಲ್ಲ! ಆಗ ಬಾಳಂಭಟ್ಟರು ಸ್ವಾಮಿಗಳ ಬಳಿಗೆಬಂದು ಸಾಷ್ಟಾಂಗ ನಮಸ್ಕಾರಮಾಡಿ, ಕೈಜೋಡಿಸಿನಿಂತುಕೊಂಡು, ನಡೆದಸಂಗತಿಯನ್ನು ಹೇಳಿದರು. ಆಗ ಎಲ್ಲರಿಗೂ ಆಶ್ಚರ್ಯವಾಯಿತು.

---

# ೧೫ನೇ ಅಧ್ಯಾಯ

## ತಪಶ್ಚರ್ಯಕ್ಕಾಗಿ ಗವಿಗೆ ಹೋದದ್ದು



ಈ ಮೇರೆಗೆ ಹಲವು ಮಹಿಮೆಗಳನ್ನು ಪ್ರಕಟಿಸುತ್ತ, ಬಾಲ ಭುಂಗಯೋಗಿಗಳು ತಪಶ್ಚರ್ಯಮಾಡುತ್ತಿರಲು, ಐದನೆಯವರ್ಷದ ತಪಶ್ಚರ್ಯವು ನಿರ್ವಿಘ್ನವಾಗಿ ಪೂರ್ಣವಾಯಿತು. ಈ ಐದನೆಯವರ್ಷದಲ್ಲಂತು ಜನಸಮ್ಮರ್ದದ ಮಿತಿಯು ಮೀರಿತು. ಭಾವಿಕರು ಬಾಲಭುಜಂಗಯೋಗಿಗಳ ಸೇವೆಮಾಡಿ ಕೃತಾರ್ಥರಾಗಬೇಕೆಂದು ಇಚ್ಛಿಸಿ, ಪ್ರತಿಗ್ರಹ ಮಾಡಲು ಸ್ವಾಮಿಗಳಿಗೆ ಒತ್ತಾಯಮಾಡತೊಡಗಿದರು. ಸ್ವಾಮಿಗಳು ಎಷ್ಟು ಬೇಡವೆಂದರೂ ಭಾವಿಕಜನರು ಕೇಳದೆಯಿದ್ದದ್ದರಿಂದ, ಸೌಜನ್ಯಕ್ಕನುಸರಿಸಿ ಅವರ ಮಾತನ್ನು ಸ್ವಾಮಿಗಳು ಕೇಳಬೇಕಾಯಿತು. ಅಂತೇ, ಮುನ್ನೂರುವರ್ಷಗಳಿಂದ ಬೈಲಲ್ಲಿ ಇರುತ್ತಿದ್ದ ಪರಮಹಂಸರ ವೃಂದಾವನದಮೇಲೆ, ಜಮುಖಂಡಿಯ ಅಪ್ಪಾನಾಹೇಬರಿಂದ ಅಚ್ಚುಕಟ್ಟಿನ ಸುಂದರ ಮಂದಿರವಾಯಿತು; ಮುಧೋಳಸಂಸ್ಥಾನಿಕರು ಮೊದಲಿನ ಸಣ್ಣಮಠದ ಸ್ಥಳದಲ್ಲಿ ಈಗಿನ ದೊಡ್ಡ ಮಠವನ್ನು ಕಟ್ಟಿಸಿದರು; ಮಠದಲ್ಲಿ ಬೆಳ್ಳಿಯ ಪಾತ್ರೆಗಳಾಗತೊಡಗಿದವು; ಮುಧೋಳದ ರಾಣಿಯವರು ಮಂತ್ರೋಪದೇಶ ಪಡೆದು, ಮಠಕ್ಕೆ ಸ್ಥಿರವಾದ ಆಸ್ತಿಯನ್ನು ಮಾಡಿಕೊಡಲು ಯತ್ನಿಸತೊಡಗಿದರು; ಮಠಕ್ಕೆ ಒಂಟಿಯಮೇಲೆ ಹಣ್ಣುಗಳು ಹೇರಿ ಬರತೊಡಗಿದವು; ಮುಸುಕು ತೆಗೆಯುವ ದಿವಸ ಮಠದ ಮುಂದೆ ಅಂಗಡಿಗಳು ಹೆಚ್ಚಾಗಿ, ಆ ದಿನವು ಒಂದು ಜಾತ್ರೆಯ ದಿನದಂತೆ ಕಾಣಿಸತೊಡಗಿತು; ಕಾಖಂಡಿಕಿಯ ಕುಲಕರಣಿಯು ಸ್ವಾಮಿಗಳಿಗೆ—"ನಿಮ್ಮ ಜಮೀನುಗಳನ್ನು ನೀವು ತಕ್ಕೊಳ್ಳಿರಿ" ಎಂದು, ಎಂದಿಲ್ಲದೆ ಈಗೇ ಹೇಳಿಕೊಳ್ಳಹತ್ತಿ

ದನು; ಸಕಾಮ ಸೇವಕರ ಸಂಖ್ಯೆಯು ಬೆಳೆಯಿತು, ಬಂದವರ ಯೋಗ ಕ್ಷೇಮವ ವಿಚಾರಿಸುವ ಭಾರವು ಮಠದವರನೇಲೆ ಹೆಚ್ಚು ಹೆಚ್ಚು ಬೀಳ ತೊಡಗಿತು; "ಹೀಗೆ ಮುಸುಗು ಹಾಕಿಕೊಂಡು ಕುಳಿತುಬಿಟ್ಟರೆ, ಮಠದ ಖರ್ಚು ಹೇಗೆ ನಡೆಯಬೇಕು? ಇಲ್ಲಿಗೆ ತಪಶ್ಚರ್ಯದ ಪರಿಸಮಾಪ್ತಿ ಯನ್ನು ಮಾಡಿ ಸಂಚಾರಕ್ಕೆ ಹೊರಟು, ಮಠದ ಸಾಂಪತ್ತಿಕಸ್ಥಿತಿ ಯನ್ನು ಹೆಚ್ಚಿಸುವದು ನೆಟ್ಟಗಲ್ಲವೆ?" ಎಂದು ಸ್ವಾಮಿಗಳ ಆಪ್ತೇಷ್ಟರೂ, ಪರಿವಾರದವರೂ ಗುಣಗುಟ್ಟಹತ್ತಿದರು! ಹೀಗೆ ಜನರ ಗದ್ದಲವೂ, ಮಠದ ಆಡಂಬರವೂ, ಆಪ್ತೇಷ್ಟರ ಕಾಟವೂ ಹೆಚ್ಚಹತ್ತಿದ್ದನ್ನು ನೋಡಿ, ಈ ಸ್ಥಿತಿಯು ತಪೋವಿಘಾತಕವೂ, ಸತ್ವನಾಶಕವೂ, ಪುಣ್ಯಕ್ಷಯಕಾರಕವೂ ಆದದ್ದೆಂದು ತಿಳಿದು, ಮಹಾತಪಸ್ವಿಗಳಾದ ಬಾಲಭುಜಂಗಯೋಗಿಗಳು, ಇನ್ನುಳಿದಿದ್ದ ತಮ್ಮ ಏಳುವರ್ಷ-ಎಂಟುತಿಂಗಳ ತಪಶ್ಚರ್ಯವನ್ನು ಮಠದಲ್ಲಿ ಮಾಡದೆ, ಲೋಕಾಪುರದಿಂದ ಮೂರುಮೈಲುಗಳಮೇಲಿರುವ ಚಿತ್ರಭಾನು ಎಂಬಗ್ರಾಮದಬಳಿಯಲ್ಲಿಯ ಗುಹೆಯಹತ್ತರ ಅರಣ್ಯದಲ್ಲಿಮಾಡಬೇಕೆಂದು ನಿಶ್ಚಯಿಸಿ, ತಮ್ಮ ಆ ನಿಶ್ಚಯವನ್ನು ಕೆಲವು ಜನರಮುಂದೆ ಆಡಿತೋರಿಸಿ ದರು! ಯೋಗಿಗಳಿಗೆಏಕಾಂತಶೀಲತೆಯು ಅತ್ಯವಶ್ಯವು. ಅಂತೇಶ್ರೀಶಂಕರಭ ಗವತ್ಪಾದರು ಒಂದುಕಡೆಯಲ್ಲಿ—" ಯೋಗಸ್ಯಪ್ರಥಮದ್ವಾರಂ ವಾಙ್ನಿ ರೋಧೋಽಪರಿಗ್ರಹಃ। ನಿರಿಚ್ಛಾಚ ನಿರೀಹಾಚ ನಿತ್ಯಮೇಕಾಂತಶೀಲತಾ॥" ಎಂದು ಹೇಳಿರುವರು.

ಶ್ರೀಬಾಲಭುಜಂಗಯೋಗಿಗಳು ಹೀಗೆ ಜನರ ಮುಂದೆ ಆಡಿ ತೋರಿ ಸಿದ್ದು ಅಪ್ಪಾಸಾಹೇಬರ ಕಿವಿಗೆಮುಟ್ಟಿ, ಅದರಿಂದ ಅವರಿಗೆ ಬಹಳ ಸಂತೋ ಷವಾಯಿತು, ಯಾಕಂದರೆ, ಲೋಕಾಪುರದ ಮಠವನ್ನು ಉತ್ತಮರೀತಿ ಯಿಂದ ಕಟ್ಟಿಸಬೇಕೆಂಬ ತಮ್ಮ ಸಂಕಲ್ಪಕ್ಕೆ, ಹೊರಗಿನಿಂದ ವಿಘ್ನ ಒದಗಿ ದ್ದರಿಂದ ಅದು ನಿಂತು ಹೋಗಿರಲು, ಈಗ ಗವಿಯ ಬಳಿಯಲ್ಲಿ ಸ್ವಾಮಿ ಗಳಿಗಾಗಿ ಒಂದು ಸುಂದರ ಮಂದಿರವನ್ನೂ, ಬೇರೆ ಅನುಕೂಲತೆಗಳನ್ನೂ ಒದಗಿಸಿಕೊಟ್ಟು ಕೃತಾರ್ಥರಾಗುವ ಕಾಲವು ತಮಗೆ ಒದಗಿಬಂದಿತೆಂದು ಅವರು ಭಾವಿಸಿದರು ಈಭಾವನೆಯ ಆನಂದದಲ್ಲಿ ಅವರು ಬಾಲಭುಜಂಗ

ಯೋಗಿಗಳನ್ನು ಕುರಿತು—“ಮಹಾಸ್ವಾಮಿಗಳೇ, ಗುಹೆಗೆ ಹೊರಡುವ ಸಂಕಲ್ಪವಾಗಿದೆಯೆಂದು ಕೇಳುತ್ತೇನೆ, ನಿಜವೆ? ನಿಜವಿದ್ದರೆ, ಅಲ್ಲಿ ಬೇಕಾದ ಅನುಕೂಲತೆ ಮಾಡಿಕೊಡಲು ಸಿದ್ಧನಿರುವೆನು. ಇಲ್ಲಿ ಲೋಕಾಪುರದಲ್ಲ ಸಾಧಿಸದ ಸೇವೆಯು, ಅಲ್ಲಿ ಗವಿಯ ಬಳಿಯಲ್ಲ ಸಾಧಿಸುವದು” ಅನ್ನಲು, ಶಾಂತವಾದ ಏಕಾಂತಸ್ಥಳದಲ್ಲಿ ತಪಶ್ಚರ್ಯವಮಾಡುವದಕ್ಕಾಗಿ ಗುಡಿಸಿಲಿನಲ್ಲಿರಲು ಇಚ್ಛಿಸುತ್ತಿದ್ದ ಮಹಾತ್ಮನಾದ ಬಾಲಭುಜಂಗಯೋಗಿಗೆ, ಅಪ್ಪಾಸಾಹೇಬರ ಈ ಮಾತುಗಳು ಅಪಥ್ಯಕರವಾಗಿ ತೋರಿದವು; ಆದ್ದರಿಂದ ಆ ತಪೋಧನನು ಅಪ್ಪಾಸಾಹೇಬರಿಗೆ—“ಇಲ್ಲ ಶ್ರೀಮಂತರೇ, ಹಾಗೇನು ನಾನು ನಿಶ್ಚಯಿಸಿರುವದಿಲ್ಲ ಯಾವ ಕೆಲಸಮಾಡಲಿಕ್ಕೂ ನನ್ನ ಸ್ವಾತಂತ್ರ್ಯವೇನಿದೆ? ನಾನು ಅಹಂಕಾರದಿಂದ ನಿಶ್ಚಯಮಾಡಿದರೂ ಅದು ಹೇಗೆ ನಡೆದೀತು? ಎಲ್ಲ ಆಗು-ಹೋಗುಗಳಿಗೂ ಮುತ್ತಯ್ಯನೇ ಕಾರಣನು, ಆತನ ಇಚ್ಛೆಇದ್ದಂತೆ ಆಗುವದು” ಎಂದು ಹಾರಿಸಿ ಮಾತಾಡಿದರು! ಅದರಿಂದ ಅಭಿಮಾನಿಗಳಾದ ಅಪ್ಪಾಸಾಹೇಬರ ಮನಸ್ಸು ನೊಂದಿತು. ಅಪ್ಪಾಸಾಹೇಬರು ಎಂತಹ ಭಾವಿಕರಾಗಿದ್ದರೂ ಅವರಲ್ಲಿ—“ನಾನು ಸಂಸ್ಥಾನಿಕನು, ಸ್ವಾಮಿಗಳಿಗೆ ಬೇಕಾದದ್ದು ಕೊಟ್ಟೇನು, ಬೇಕಾದ ಅನುಕೂಲತೆಗಳನ್ನು ಮಾಡೇನು”/ಎಂಬ ಅಭಿಮಾನವಿದ್ದದ್ದರಿಂದ, ಅವರ ಆ ಭಾವಿಕತನವು ಅಭಿಮಾನ ಕಲಂಕಿತವಾಗಿತ್ತು; ಆದ್ದರಿಂದ ಕೇವಲ ನಿರಭಿಮಾನಪ್ರಿಯರಾಗಿದ್ದ ಬಾಲಭುಜಂಗಯೋಗಿಗಳಿಗೆ, ಅಪ್ಪಾಸಾಹೇಬರಂಥ ರಾಗಪ್ರಧಾನರಾದ ಸಂಸ್ಥಾನಿಕರ ವಿಚಾರಗಳು ಸಮ್ಮತವಾಗದಿದ್ದರೆ ಆಶ್ಚರ್ಯವೇನು? “ಸರ್ವತೋಮುಖದಿಂದ ನನ್ನ ಗುರುನಾಥನೇ ಸರ್ವಶ್ರೇಷ್ಠನು, ಕೊಡಲು ಕೊಳ್ಳಲು ಆತನೇ ಸಮರ್ಥನು, ಸರ್ವ ಕಾರಣನು ಆತನೇ; ಆತನ ಇಚ್ಛೆಯೇ ನನ್ನ ಇಚ್ಛೆಯು, ಆತನ ಸಂತೋಷವೇ ನನ್ನ ಸಂತೋಷವು, ಆತನ ಆಜ್ಞೆಯೇ ನನಗೆ ಪಾಮರನಿಗೆ ವೇದವು ನಾನು ಪಾಮರನು ಆತನಿಗೆ ಕೊಡುವದೇನು?” ಎಂಬಿವೇ ಮೊದಲಾದ ನಿರಭಿಮಾನದ ಗುರುತಾದಾತ್ಮ್ಯಭಾವವು, ಪಾಪ! ಅಪ್ಪಾಸಾಹೇಬರಂಥ ರಾಜಸಗುಣಪ್ರಧಾನರಾದ ರಾಜರಿಗೆ ಒಮ್ಮೆಲೆ ಹೇಗೆಉತ್ಪನ್ನವಾಗಬೇಕು?

ಬಾಲಭುಜಂಗಯೋಗಿಗಳು ಹೀಗೆ ಅಪ್ಪಾಸಾಹೇಬರ ಮನೋದಯ ಗಳನ್ನು ಪೂರ್ಣಮಾಡದೆಯಿರುವದಕ್ಕೆ, ಆ ಸಂಸ್ಥಾನಿಕರ ತಪೋವಿಘಾತ ಕಗಳಾದ ರಾಜಸಾಹಂಕಾರದ ವಿಚಾರಗಳೇ ಕಾರಣವೆಂದು ಮೇಲೆ ಹೇಳಿದೆ; ಆದರೆ ಈ ಮಾತನ್ನು ಇನ್ನಿಷ್ಟು ಸ್ಪಷ್ಟವಾಗಿ ಹೇಳಿದರೆ, ನಮ್ಮಂಥ ರಾಜಸ-ತಾಮಸಾಹಂಕಾರಿಗಳಿಗೆ ಬುದ್ಧಿ ಬಂದೀತೆಂದು ತೋರುತ್ತದೆ. ಅಹಂಕಾರದಲ್ಲಿ ಸಾತ್ವಿಕಾಹಂಕಾರ, ರಾಜಸಾಹಂಕಾರ, ತಾಮಸಾಹಂಕಾರ ಎಂದು ಮೂರು ವಿಧಗಳಿರುವವು. ದೇವರ, ಅಥವಾ ಗುರುಹಿರಿಯರ, ಪ್ರಭಾವದಿಂದಲೇ ಕಾರ್ಯವಾಗುವದೆಂಬ ತಿಳುವಳಿಕೆಯು ಅಹಂಕಾರ-ಮಮಕಾರರಹಿತವಾದ ಮನೋವೃತ್ತಿಯು ಸಾತ್ವಿಕಾಹಂಕಾರವೆನಿಸುವದು; ದೇವರ, ಅಥವಾ ಗುರುಹಿರಿಯರ, ಅಥವಾ ಧರ್ಮದ ಆಜ್ಞೆಯಂತೆ ನಡೆ ಯುವೆನೆಂಬ ತಿಳುವಳಿಕೆಯು ಅಹಂಕಾರ-ಮಮಕಾರಯುಕ್ತವಾದ ಮನೋವೃತ್ತಿಯು ರಾಜಸಾಹಂಕಾರವೆನಿಸುವದು; ಯಾರ, ಅಥವಾ ಯಾತರಹಂಗೂಇಲ್ಲದೆ, ಕೇವಲ ವಿಷಯಾಂಧತೆಯಅಹಂಕಾರ-ಮಮಕಾರ ಮಯವಾಗಿ ನಡೆಯುವ ಮನೋವೃತ್ತಿಯು ತಾಮಸಾಹಂಕಾರ ವೆನಿ ಸುವದು. ಈದೃಷ್ಟಿಯಿಂದವಿಚಾರಮಾಡಿದರೆ, ಅಪ್ಪಾಸಾಹೇಬರು ಪುರಾಣ ಕಾಲದ ಬಲಿಚಕ್ರವರ್ತಿಯಂತೆ, ರಾಜಸಾಹಂಕಾರಿಗಳಾಗಿದ್ದರೆಂದು ಹೇಳಬೇ ಕಾಗುವದು; ಯಾಕಂದರೆ ಅವರು, ಮಹಾತ್ಮರಾದ ಬಾಲಭುಜಂಗಯೋಗಿ ಗಳ ಸೇವೆಮಾಡುವಾಗ, "ತಾವುಧರ್ಮಿಷ್ಠರು" ಎಂಬಅಹಂಕಾರವುಳ್ಳವರೂ, "ಜಮಖಂಡಿಯ ಸಂಸ್ಥಾನವು ನನ್ನದು" ಎಂಬ ಮಮಕಾರವುಳ್ಳವರೂ ಆಗಿದ್ದರೆಂಬದು, ವಿಚಾರದಿಂದ ಗೊತ್ತಾಗುವ ಹಾಗಿರುವದು. ಶಿಷ್ಯರಲ್ಲಿಯ ಈ ಅಹಂಕಾರ-ಮಮಕಾರಗಳನ್ನು ನಷ್ಟಪಡಿಸಿ ಅವರ ಕಲ್ಯಾಣಮಾಡು ವದು, ಸದ್ಗುರುಗಳ ವಾತ್ಸಲ್ಯದ ಕರ್ತವ್ಯವಾದದ್ದರಿಂದ, ಬಾಲಭುಜಂಗ ಯೋಗಿಗಳು ಅಪ್ಪಾಸಾಹೇಬ ರರಾಜಸಾಹಂಕಾರ-ಮಮಕಾರ ಯುಕ್ತಗ ಳಾಗಿದ್ದ ಅವರ ಆರುಸಂಕಲ್ಪಗಳಲ್ಲಿ, ಸಮಾಧಿಯಮಂದಿರ ಕಟ್ಟಿಸುವ ಒಂದು ಸಂಕಲ್ಪವನ್ನು ಮಾತ್ರ ಸಫಲಗೊಳಿಸಿ, ಉಳಿದ ಅವರ ಐದು ಸಂಕಲ್ಪ ಗಳನ್ನು ವಿಫಲಗೊಳಿಸಿದರು! ಇದರಿಂದ ಭುಜಂಗಯೋಗಿಗಳ ನಿಃಸ್ವಾ ರ್ಥಬುದ್ಧಿಯ ಶಿಷ್ಯವಾತ್ಸಲ್ಯವು ಚನ್ನಾಗಿ ವ್ಯಕ್ತವಾಗುವದು.

ಮೇಲೆ ಅಪ್ಪಾಸಾಹೇಬರಿಗೆ ಹೋಲಿಸಿರುವ ಭಾಗ್ಯವಂತನಾದ ಬಲಿ ಚಕ್ರವರ್ತಿಯ ಚರಿತ್ರ-ತಾತ್ಪರ್ಯವನ್ನು ಇಲ್ಲಿ ವಿಚಾರಿಸೋಣ; ಶ್ರೀವಿಷ್ಣುವಿನ ಅವತಾರವಾದ ವಾಮನಮೂರ್ತಿಯು, ಆ ಧರ್ಮಿಷ್ಠ ಚಕ್ರವರ್ತಿಯ ಅಹಂಕಾರ-ಮಮಕಾರಗಳಲ್ಲಿ, ಮೊದಲು ಆತನ ಮಮಕಾರವನ್ನು ನಷ್ಟಪಡಿಸಬೇಕೆಂದು, ತಾನು ಆತನಿಂದ ಮೊದಲು ಮೂರು ಪಾದ ಭೂಮಿಯ ದಾನಕೇಳಿಕೊಂಡಂತೆ, ತನ್ನ ಪುಟ್ಟ ಎರಡು ಪಾದಗಳಿಂದ ಆ ಚಕ್ರವರ್ತಿಯ ಆಧಿಪತ್ಯದ ತ್ರಿಲೋಕಗಳನ್ನು ಅಳೆದು ತಕ್ಕೊಂಡು ಬಿಟ್ಟು "ತ್ರಿಲೋಕಗಳು ನನ್ನವು" ಎಂಬ ಆತನ ಸ್ಥೂಲ ಮಮಕಾರವನ್ನು ನಷ್ಟಪಡಿಸಿದನು. ಬಳಿಕ ತನ್ನ ಪುಟ್ಟ ಮೂರನೆಯ ಪಾದವನ್ನು ಆ ಚಕ್ರವರ್ತಿಯ ತಲೆಯಮೇಲಿಟ್ಟು ಆತನನ್ನು ಪಾತಾಳಕ್ಕೆ ಮೆಟ್ಟಿ, "ದೇಹವು ನನ್ನದು" ಎಂಬ ಆತನ ಸೂಕ್ಷ್ಮ ಮಮಕಾರವನ್ನು ನಷ್ಟಪಡಿಸಿದನು ಹೀಗೆ ಬಲಿಚಕ್ರವರ್ತಿಯ ಸ್ಥೂಲ-ಸೂಕ್ಷ್ಮ ಮಮಕಾರಗಳೆರಡನ್ನೂ ನಷ್ಟಪಡಿಸಿದ ಬಳಿಕ, ಆ ಚಕ್ರವರ್ತಿಯ ಹೆಂಡತಿಯ ಪ್ರಾರ್ಥನೆಯಂತೆ ಆತನ ಅಹಂಕಾರವನ್ನು, ಅಂದರೆ, "ನಾನು ಮಹಾ ಧರ್ಮಿಷ್ಠನು" ಎಂಬ ಆತನ ಅಹಂಭಾವವನ್ನು ತನ್ನ ಕೃಪಾವಿಶೇಷದಿಂದ ನಷ್ಟಪಡಿಸಿ, ಆಮೇಲೆ ಆತನಿಗೆ ಪಾತಾಳಲೋಕದ ಆಧಿಪತ್ಯವನ್ನೂ, ಸ್ಥಿರ ಜೀವಿತ್ವವನ್ನೂ, ದೃಢಭಕ್ತಿಯನ್ನೂ ಕೊಟ್ಟದ್ದಲ್ಲದೆ, ತಾನು ಆತನ ಆಳಾಗಿ ಈಗಲೂ ಆ ಚಕ್ರವರ್ತಿಯ ಮನೆಯ ಬಾಗಿಲು ಕಾಯುತ್ತಿರುವನು! ಹೀಗೆ ಭಗವದವತಾರವಾಗಿದ್ದ ವಾಮನಮೂರ್ತಿಯು—"ಯಸ್ಯಾನುಗ್ರಹಮಿಚ್ಛಾಮಿ ತಸ್ಯವಿತ್ತಂ ಹರಾಮ್ಯಹಂ" ಎಂಬ ತನ್ನ ಪ್ರತಿಜ್ಞೆಯಂತೆ, ತಾನು ಯಾಚಕನಾಗಿ ಬಲಿಚಕ್ರವರ್ತಿಯ ಸರ್ವಸ್ವವನ್ನು ಹರಣಮಾಡಿ, ಆಮೇಲೆ ಆತನನ್ನು ಅನುಗ್ರಹಿಸಿದನು; ಆದರೆ ಬಾಲಭುಜಂಗಯೋಗಿಯ ಮಾತು ಹಾಗಲ್ಲ, ಆತನು ವಾಮನನಂತೆ ಯಾಚಕನಾಗಿ ಅಪ್ಪಾಸಾಹೇಬರ ಸರ್ವಸ್ವವನ್ನು ಹರಣಮಾಡದೆ, ತನ್ನ ಉಜ್ವಲ ನಿಸ್ಪೃಹವೃತ್ತಿಯಿಂದ, ಅಪ್ಪಾಸಾಹೇಬರ ಅಹಂಕಾರ-ಮಮಕಾರಗಳ ದಾತೃತ್ವದ ಗೌರವವನ್ನು ನಷ್ಟಪಡಿಸಿಬಿಡಲು, ಆ ಧರ್ಮಿಷ್ಠ ಅಪ್ಪಾಸಾ

ಂಬರು ಅಸಮಾಧಾನಪಟ್ಟು—"ಯೋಗಿಗಳು ನನ್ನ ಸಂಕಲ್ಪಗಳನ್ನು
್ಯರ್ಥ ಮಾಡಿದರಲ್ಲ, " ಎಂದು ಮನಸ್ಸಿನಲ್ಲಿ ನೊಂದುಕೊಳ್ಳುವಾಗ, ಅವರ
ಹಂಕಾರ-ಮಮಕಾರಗಳ ಕಸುವು ತಾನೇ ಕಡಿಮೆಯಾಗತೊಡಗಿತು! ಈ
ರಡೂ ಸುಪ್ರಸಂಗಗಳ ಯೋಗ್ಯತೆಯನ್ನು ತೂಗಿನೋಡಿ, ಭಗವಂತನ
ಕ್ಷೋದ್ಧಾರಕ್ರಮವು ಶ್ರೇಷ್ಠವಾದದ್ದೋ, ಅಥವಾ ಸದ್ಗುರುವಿನ
ಷ್ಯೋದ್ಧಾರಕ್ರಮವು ಶ್ರೇಷ್ಠವಾದದ್ದೋ ಎಂಬದನ್ನು, ವಾಚಕರು ಅವ
ವಾಗಿ ನಿರ್ಣಯಿಸಿಕೊಳ್ಳತಕ್ಕದ್ದು ಹೀಗೆ ನಿರ್ಣಯಿಸಿಕೊಳ್ಳುವಾಗ
ಮಗೆ—"ನಗುರೋ ರಧಿಕಂ ನಗುರೋ ರಧಿಕಂ ನಗುರೋ ರಧಿಕಂ ಶಿವ
ಾಸನತಃ" ಎಂಬ ಉಕ್ತಿಯು ಸ್ಮರಣಕ್ಕೆ ಬರುವದು! ಇರಲಿ, ಇನ್ನು ಚರಿತ್ರ
್ರಸಂಗವನ್ನು ಮುಂದಕ್ಕೆ ಸಾಗಿಸುವಾ!

ಬಾಲಭುಜಂಗಯೋಗಿಯು ಗವಿಗೆಹೋಗುವ ತನ್ನ ಮನಸ್ಸಿನ
ಶ್ಚಯವನ್ನು ಅಪ್ಪಾಸಾಹೇಬರಿಗೆ ತಿಳಿಸದೆ, ಹಾರಿಸಿ ಮಾತಾಡಿದರೆಂದು
ಮೊದಲೆ ಹೇಳಿದೆಯಷ್ಟೆ? ಆದರೆ ಐದನೆಯವರ್ಷದ ತಪಶ್ಚರ್ಯೆಯವು
ುಗಿದ ದಿವಸ, ಅಂದರೆ, ಶಕೆ ೧೭೯೦ನೇ ಸರ್ವಧಾರಿ ಸಂವತ್ಸರದ ಕಾರ್ತಿಕ
ುದ್ಧ ದ್ವಾದಶಿಯ ಗುರುವಾರದದಿವಸ, ಅಂದರೆ ಸನ್ ೧೮೬೮ನೇ ನವಂಬರ
೫ನೇ ತಾರೀಖಿನದಿವಸ ಬೆಳಗುಮುಂಜಾನೆ, ಯಾರಿಗೂ ಹೇಳದೆ, ಆ ಬಾಲ
ಯೋಗಿಯು ಅಕಸ್ಮಾತ್ ಗವಿಗೆ ಹೊರಡಲು ಸಿದ್ಧನಾದನು! ಅದನ್ನು
ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು, ಆದರೆ ಪ್ರತಿ ಒಂದು ಕೆಲಸವನ್ನು
ಮತ್ತಯ್ಯನ ಅಪ್ಪಣೆಯಂತೆ ಮಾಡುತ್ತಿರುವ ಬಾಲಭುಜಂಗಯೋಗಿಗಳಿಗೆ,
"ಗುಹೆಗೆ ಹೋಗಬೇಡಿರಿ" ಎಂದು ಹೇಳುವ ಧೈರ್ಯವು ಯಾರಿಗೂ
ಾಗಲಿಲ್ಲ! ಹೀಗೆ ಬಾಲಭುಜಂಗಯೋಗಿಯು ಗುಹೆಗೆ ಹೊರಡಲು ಸಿದ್ಧ
ಾದ ಕೂಡಲೆ, ಎಲ್ಲ ಪರಿವಾರವೂ ಆತನ ಬೆನ್ನಹತ್ತಲು ಸಿದ್ಧವಾಯಿತು
ಮಹಾತ್ಮನು ಗುಹೆಗೆ ಹೋಗಿಯೇ ತನ್ನ ಆರನೆಯವರ್ಷದ ತಪಶ್ಚರ್ಯೆ
ುನ್ನು ಆರಂಭಿಸಬೇಕಾಗಿತ್ತು; ಆದ್ದರಿಂದ, ಮುಮುಕ್ಷುವು ಸರ್ವಸಂಗ
ಪರಿತ್ಯಾಗ ಮಾಡಿ ತಟ್ಟನೆ ಮನೆಬಿಟ್ಟು ಹೊರಬೀಳುವಂತೆ, ಏಕಾಂತದ
ತಪಃಕಾಂಕ್ಷೆಯ ಬಾಲಭುಜಂಗಯೋಗಿಗಳು, ತಡಮಾಡದೆ ಮಠವನ್ನು

ಬಿಟ್ಟು ಹೊರಡಲುದ್ಯುಕ್ತರಾದರು ! ಯಾವ ಉಪಾಧಿಯ ಬಂಧನಕ್ಕೂ ಒಳಗಾಗದೆ ತಟಸ್ಥವೃತ್ತಿಯಿಂದ ಇದ್ದ ಆ ಮಹಾತ್ಮರಿಗೆ, ಅವರ ಮಠವಾಗಲಿ, ತಪಶ್ಚರ್ಯದ ಹೊಸಸುಂದರ ಮಂದಿರವಾಗಲಿ, ಆಪ್ತೇಷ್ಟರ ಪರಿವಾರವಾಗಲಿ, ಗುರು-ಪರಮಗುರು-ಪರಾತ್ಪರಗುರು ಮೊದಲಾದ ಪೂಜ್ಯರ ವೃಂದಾವನಗಳಾಗಲಿ ಪ್ರತಿಬಂಧಕಗಳಾಗಲಿಲ್ಲ! ಧರ್ಮಶಾಲೆಯಿಂದ ಹೊರಡಲು ಗಂಟುಕಟ್ಟಿಕೊಂಡು ಕುಳಿತು ಕಾಲನಿರೀಕ್ಷಣ ಮಾಡುತ್ತಿದ್ದ ಪ್ರಯಾಣಿಕನಿಗೆ, ಧರ್ಮಶಾಲೆಯಿಂದ ಹೊರಡುವಾಗ ಯಾವ ಉಪಾಧಿಗಳ ಬಾಧೆ ತಟ್ಟೀತು ?

ಹೀಗೆ ಬಾಲಭುಜಂಗಯೋಗಿಯು ಸಪರಿವಾರ ಗುಹೆಗೆ ಹೊರಡಲು ಸಿದ್ಧವಾದ ಕಾಲವು ಪ್ರೇಕ್ಷಣೀಯವೂ, ಅರ್ಥಪೂರ್ಣವಾದದ್ದೂ ಆಗಿತ್ತೆಂಬದರಲ್ಲಿ ಸಂಶಯವಿಲ್ಲವು.!ಅದು ಉಷಃಕಾಲದ ಸಮಯವು ; ಚಂಡರಶ್ಮಿಯು ತನ್ನ ಮುಂಬೆಳಗನ್ನು ಪಸರಿಸುತ್ತ, ಬಾಲಭುಜಂಗಯೋಗಿಯ ಪ್ರಯಾಣ ಸಮಾರಂಭವನ್ನು ನೋಡಲಿಕ್ಕೆ ಬರುವವನಂತೆ ಆತುರದಿಂದ ಆಕಾಶದಲ್ಲಿ ಮೇಲಿಕ್ಕೇರಿ ಬರತೊಡಗಿರುತ್ತಾನೆ; ಅದು ಶರದೃತುವಿನ ಕಾರ್ತಿಕಮಾಸವಾದದ್ದರಿಂದ, ಆಕಾಶವು ನಿರಭ್ರವಾಗಿದ್ದು ದಿಕ್ಕುಗಳು ಪ್ರಸನ್ನವಾಗಿವೆ; ಪಕ್ಷಿಗಳು ಅವೇ ಗೂಡುಗಳೊಳಗಿಂದ ಎದ್ದು ನೈಕೊಡವಿ ಕಿಲಿಬಿಲಿ ಶಬ್ದ ಮಾಡುತ್ತಿರಲು, ಅರಣ್ಯೋನ್ಮುಖನಾಗಿದ್ದ ತಪಸ್ವಿ ಬಾಲಭುಜಂಗಯೋಗಿಯ ಅಭಿನಂದನ ಮಾಡುವ ತಪಸ್ವಿಜನರ ರೀತಿಯು ವ್ಯಕ್ತವಾಗುತ್ತಲಿದೆ; ಸಂಸಾರ ರೂಪವಾದ ಕಾಳರಾತ್ರಿಯಲ್ಲಿ ಎಚ್ಚತ್ತು, ಸ್ವಸ್ವರೂಪಜ್ಞಾನದ ಹಗಲನ್ನು ಕಾಣುವದಕ್ಕಾಗಿ ಯತ್ನಿಸುವ ವಿವೇಕಿಗಳ ವಿರಲತೆಯನ್ನು ತೋರಿಸುತ್ತಿರುವಂತೆ, ಆಕಾಶದಲ್ಲಿ ನಕ್ಷತ್ರಗಳು ಅಲ್ಲೊಂದು ಇಲ್ಲೊಂದು ಮಿನುಗುತ್ತಲಿವೆ; “ ಓಹೋ ! ಬಾಲಭುಜಂಗಯೋಗಿಯು ಮಠಬಿಟ್ಟು ಅರಣ್ಯಕ್ಕೆ ಹೋಗುವದರಿಂದ, ನಮಗೆ ಸತ್ಸಮಾಗಮದ ಯೋಗವು ತಪ್ಪುವದಲ್ಲ” ಎಂದು ಮರಗುವ ಸುಜನರ ಕಲಕಲಧ್ವನಿಯಂತೆ, ಭಾವಿಕರ ಪ್ರಾತಃಸ್ಮರಣಾದಿ ಧಾರ್ಮಿಕ ಸತ್ಕೃತಿಗಳ ಸಂಕಲಿತಧ್ವನಿಯು ಕಿವಿಗೆ ಬೀಳುತ್ತಲಿದೆ! “ ಯಾರು ಇದ್ದರೇನು, ಯಾರು ಹೋದರೇನು. ನಮ್ಮ

ಂಸಾರವು ನಮ್ಮ ಬೆನ್ನು ಬಿಟ್ಟದ್ದಲ್ಲ" ಎಂಬ ನಿಶ್ಚಯವಿದ್ದ ಸಂಸಾರಾಸಕ್ತ ಾಗಿದ್ದ ಚಟವಟಿಕೆಯ ಜನರಲ್ಲಿ, ಕೆಲವರು ತಮ್ಮ ಬೇಸಾಯದ ದನಗಳನ್ನು ುಟ್ಟಿಕೊಂಡು ಹೊಲಗೆಲಸಕ್ಕಾಗಿ ಹೊರಬೀಳತೊಡಗಿದ್ದಾರೆ; ಕೆಲವರು ಣ್ಣುಮಕ್ಕಳು, "ಮನೆ ಗೆಲಸವು ಒಟ್ಟಿದೆ" ಎಂದು ಒಟಗುಟ್ಟುತ್ತ, ಮಲಗಿ ವರನ್ನು ಕೂಗಿಕೂಗಿ ಎಬ್ಬಿಸುತ್ತ ಸರಬರನೆ ಭರದಿಂದ ಮಜ್ಜಿಗೆಯನ್ನು ಡೆಯುತ್ತಲಿದ್ದಾರೆ; ಆಲಸ್ಯಸ್ವಭಾವದವರು ತಮ್ಮ ಮುಸುಗು ತೆಗೆದು ಗೆದು ನೋಡುತ್ತ, "ಇನ್ನೂ ಕತ್ತಲಿದೆ" ಎಂದು ಮತ್ತೆ ಮತ್ತೆ ಮುಸುಕು ಾಕುತ್ತಿರಲು, ಅವರ ಹಿತೈಷಿಗಳು— "ಏಳಿರಿ, ಬೆಳಗಾಯಿತು, ಸೂರ್ಯೋ ಯ ಕಾಲದಲ್ಲಿ ಮುಸುಕು ಹಾಕಿ ಮಲಗಿಕೊಂಡು ಭಾಗ್ಯಹೀನರಾಗ ೀಡಿರಿ" ಎಂದು ಕೂಗಿ ಎಬ್ಬಿಸುತ್ತಿರಲು, ಅವರ ಆ ಎಬ್ಬಿಸುವ ಪ್ರಯ ್ಕೆ ಸಹಾಯ ಮಾಡುವದಕ್ಕಾಗಿಯೋ ಅನ್ನುವಂತೆ, ಕೂಸುಗಳ ಅಳುವ ್ವನಿಯೂ ಕಾಗೆಗಳ ಕಾ ಕಾ ಎಂಬ ಕರ್ಕಶಧ್ವನಿಯೂ ಕೇಳಿಸುತ್ತಲಿದೆ.

ಇಂತಹ ಹಲವು ಸಲಕ್ಷಣ–ವಿಲಕ್ಷಣ ವ್ಯವಹಾರಗಳ ವೈಚಿತ್ರ್ಯವು, ತ್ಯದ ಬೆಳಗಿನೊಡನೆ ನಿತ್ಯವೂ ನಡೆಯುತ್ತಿರುವಂತೆ ಅಂದೂ ನಡೆಯು ್ತಿರಲು, ಬಾಲಭುಜಂಗಯೋಗಿಯು ಕರ್ಮಸಾಕ್ಷಿಯಾದ ಶ್ರೀ ಸೂರ್ಯ ಾರಾಯಣನನ್ನು ಭಕ್ತಿಯಿಂದ ನಮಸ್ಕರಿಸಲು ಮುಂದುವರಿಯುತ್ತಿರು ನೋ ಅನ್ನುವಹಾಗೆ, ಸಾಂಸಾರಿಕ ಪರಿವಾರವನ್ನು ತನ್ನ ಹಿಂದುಗಡೆ ುಂಮಾಡಿಕೊಂಡು ಮೆಲ್ಲಮೆಲ್ಲನೆ ಹೆಜ್ಜೆಗಳನ್ನಿಡುತ್ತ ಮಠದಿಂದ ಹೊರಟು ಪೂರ್ವಾಭಿಮುಖವಾಗಿ ಮುಂದಕ್ಕೆ ಸಾಗಿದನು ಆಗ ಉದಯೋನ್ಮುಖ ಾದ ಬಾಲಸೂರ್ಯನು, ತನ್ನ ಭಕ್ತನಾದ ಆ ಬಾಲಭುಜಂಗಯೋಗಿಯ ್ರಸನ್ನ ಮುಖದ ಬ್ರಹ್ಮತೇಜಃಕಿರಣಗಳನ್ನು ತನ್ನ ದಿವ್ಯತೇಜಃಕಿರಣಗ ಿಂದ ಎದುರ್ಗೊಂಡು ಆದರಿಸಲು ಮುಂಬರಿದು ಧಾವಿಸಿ ಬರುತ್ತಿರುವಂತೆ, ನ್ನ ಶತ್ರುವಾದ ಕತ್ತಲೆಯು ತನ್ನ ಬೆನ್ನಟ್ಟಿ ಬರುತ್ತಿರುವದರ ಎಚ್ಚ ವಿಲ್ಲದೆ ಆಕಾಶಮಂಡಲದಲ್ಲಿ ಸಾಗಿಬರತೊಡಗಿದನು. ಆ ಸುಪ್ರಸಂ ಗವನ್ನು ನೋಡುತ್ತಿರುವ ರಸಿಕರಮನಸ್ಸಿನಲ್ಲಿ—"ಅಹಾ! ಇದೇನ್ ುಚಿತ್ರವು! ಮುಂದುಗಡೆಯಲ್ಲಿ ಬಾಲರವಿಯು ಉದಯವಾಗಿರಲು,

ಮತ್ತು ಹಿಂದುಗಡೆಯಲ್ಲಿ ಜಟಾರಾಹುವು ತನ್ನನ್ನು ನುಂಗತೊಡಗಿರಲು, ತಪಸ್ವಿಬಾಲಭುಜಂಗಯೋಗಿಯ ಮುಖಚಂದ್ರಮನು ತನ್ನ ಕಾಂತಿವಿಘಾತಕಗಳಾದ ಆ ಎರಡು ಕಾರಣಗಳಿಂದ ಮಸುಳಾಗದೆ ಪ್ರಕಾಶಿಸುತ್ತಲೇ ಇರುವನಲ್ಲ" ಎಂಬ ಕೌತುಕಭಾವವು ಉಂಟಾಗುತ್ತಲಿತ್ತು! ಆ ಬಾಲಭುಜಂಗಯೋಗಿಯ ಆಗಿನ ಹತ್ತೊಂಬತ್ತುವರ್ಷದ ಚಿಕ್ಕವಯಸ್ಸು, ಆ ಚಿಕ್ಕವಯಸ್ಸನ್ನು ಅಲಂಕರಿಸುವ ಆತನ ಸೌಂದರ್ಯ, ಆ ಸೌಂದರ್ಯವನ್ನು ಬೆಳಗುವ ಆತನ ತಪಸ್ತೇಜ, ಆ ತಪಸ್ತೇಜಕ್ಕೆ ಭೂಷಣವಾದ ಆತನ ಸೌಮ್ಯಮುದ್ರೆಯ ನಗೆಮೊಗ, ಆ ನಗೆಮೊಗಕ್ಕೆ ಒಪ್ಪುವ ಆತನ ಕರುಣಾಶಾಲಿತ್ವ, ಆ ಕರುಣಾಶಾಲಿತ್ವವನ್ನು ಸಫಲಗೊಳಿಸುವ ಆತನಮಹಾಮಹಿಮೆ ಇವನ್ನೆಲ್ಲಒಟ್ಟುಗೂಡಿಸಿನೋಡುವವರಿಗೆ, ಈತನೇನು ಲೋಕಮಾತೆ ಪಾರ್ವತಿಯ ಸತ್ವಪರೀಕ್ಷೆಗಾಗಿ ಬ್ರಹ್ಮಚಾರಿಯ ರೂಪದಿಂದ ಸಾಗುತ್ತಿರುವ ಸಾಕ್ಷಾತ್ ಪರಶಿವಮೂರ್ತಿಯೋ, ಅಥವಾ ತಂದೆಯಾದ ಭಗವಾನ್ ವೇದವ್ಯಾಸರು—"ಪುತ್ರಾ ಪುತ್ರಾ" ಎಂದು ಕೂಗುತ್ತ ಹಿಂಬಾಲಿಸಿ ಬರುತ್ತಿರಲು, ಸ್ವಚ್ಛಂದವಾಗಿ ಸಾಗಿರುವ ಶ್ರೀಶುಕಮುನಿಯೋ ಎಂಬಂತೆ ಕಾಣುತ್ತಿರಲು, ಗವಿಗೆ ಸಾಗಿರುವ ಆ ಬಾಲಭುಜಂಗಯೋಗಿಗೆ ಎದುರಾದ ಜನರ ಕೈಗಳು ಭಕ್ತಿವಿಶೇಷದಿಂದ ತಾವಾಗಿ ಮುಗಿಯುತ್ತಲಿದ್ದವು! ಹೀಗೆ ಲೋಕಪೂಜ್ಯರಾದ ಬಾಲಭುಜಂಗಯೋಗಿಗಳು ಚಿತ್ರಭವನಹಳ್ಳಿಯ ಹತ್ತರದ ಗವಿಗೆಹೋಗಿ, ಆ ಗುಹಾಪ್ರದೇಶದ ಧರ್ಮಶಾಲೆಯಲ್ಲಿ ೬ನೆಯ ವರ್ಷದ ತಪಶ್ಚರ್ಯವನ್ನು ಆರಂಭಿಸಿದರು!



### ೬ನೇ ವರ್ಷದಿಂದ ೧೨ನೇ ವರ್ಷದವರೆಗಿನ ತಪಶ್ಚರ್ಯ.

## ೧೬ನೇ ಅಧ್ಯಾಯ

## ಕ್ರಿಯಾವಂತ ಶಿಷ್ಯನ ಪ್ರಭಾವ.



೭೧ಗೆ ಬಾಲಭುಜಂಗಯೋಗಿಗಳು ಲೋಕಾಪುರ ಮಠದಲ್ಲಿ ಐದುವರ್ಷ ತಪಶ್ಚರ್ಯಮಾಡಿ, ಗುಹಾಪ್ರದೇಶದ ಧರ್ಮಶಾಲೆಯಲ್ಲಿ ಆರನೆಯವರ್ಷದ ತಪಶ್ಚರ್ಯವನ್ನು ಆರಂಭಿಸಿದರೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿದೆ; ಅದರಂತೆ, ಅವರು ಐದನೆಯವರ್ಷದ ತಪಶ್ಚರ್ಯದಲ್ಲಿ ನಾಲ್ಕುದಿನ ಅಹೋರಾತ್ರಿ, ಹಾಗು ಐದನೆಯದಿವಸ ಪೂರ್ಣಹಗಲು, ಹೀಗೆ ಒಟ್ಟು ೧೦೮ತಾಸು ಅಖಂಡವಾಗಿ ಏಕಾಸನದಲ್ಲಿ ಮುಸುಕಿನೊಳಗೆ ಕುಳಿತು ಅನುಷ್ಠಾನಮಾಡಿ, ಆಮೇಲೆ ಐದನೆಯದಿವಸರಾತ್ರಿ ಮುಸಕು ತೆಗೆದು ತಮ್ಮ ನಿಯಮದಂತೆ ಸ್ವಲ್ಪ ಹಾಲು ಹಣ್ಣು ತಕ್ಕೊಳ್ಳುತ್ತಿದ್ದರೆಂತಲೂ ಹಿಂದೆ ಹೇಳಿರುತ್ತದೆ; ಆದರೆ ಇನ್ನು ಆರನೆಯವರ್ಷದಿಂದ ಹನ್ನೆರಡನೆಯವರ್ಷದವರೆಗಿನ ಏಳುವರ್ಷಗಳ ತಪಶ್ಚರ್ಯದಲ್ಲಿಯೂ ಅವರು ಈ ಐದನೆಯವರ್ಷದ ಕ್ರಮವನ್ನೇ ಅನುಸರಿಸಿ ಗುಹಾಪ್ರದೇಶದಲ್ಲಿಯ ಧರ್ಮಶಾಲೆಯಲ್ಲಿ ತಪಶ್ಚರ್ಯಮಾಡಿದರು. ಅಲ್ಲಿ ತಪಶ್ಚರ್ಯವನ್ನು ಆರಂಭಿಸಿದಾಗ ಸ್ವಾಮಿಗಳ ವಯಸ್ಸು ಹತ್ತೊಂಬತ್ತುವರ್ಷದ್ದಾಗಿದ್ದದ್ದರಿಂದ, ಅವರು ಬಾಲ್ಯಕೌಮಾರದೆಸೆಗಳನ್ನು ಕ್ರಮಿಸಿ, ಪ್ರೌಢದೆಸೆಯಲ್ಲಿ ಕಾಲಿಟ್ಟಂತಾಗಿತ್ತು. ಮಠದಲ್ಲಿ ಬರಹೋಗುವ ಜನರ ದಟ್ಟಣೆಯಾದದ್ದು ತಪಸ್ಸಿಗೆ ಬಾಧಕವೆಂದು ಅವರು ಮಠವನ್ನು ಬಿಟ್ಟು ಗುಹೆಗೆ ಬಂದಿದ್ದರಷ್ಟೆ? ಆದರೆ "ಸೆಟ್ಟಿ ಇಳಿದಲ್ಲಿ ಪಟ್ಟಣ" ಎಂಬ ಲೋಕೋಕ್ತಿಯಂತೆ, ಅಲ್ಲಿಯೂ ಜನರ ಗದ್ದಲವು ಹೆಚ್ಚುತ್ತಲೇಹೋಯಿತು.

ಕೀರ್ತಿಕಾಮುಕರಾಗಿಯಾಗಲಿ, ಲೋಕಸಂಗ್ರಹಾಪೇಕ್ಷಿಗಳಾಗಿಯಾಗಲಿ ತಪಶ್ಚರ್ಯಮಾಡುವವರಿಗೆ, ಲೋಕಸಂಗ್ರಹವಾದಷ್ಟು ಸಂತೋಷವು; ಆದರೆ ಬಾಲಭುಜಂಗಯೋಗಿಗಳಂಥ ಕಾಮನಾರಹಿತರಾದ ತಪಸ್ವಿಗಳು ಏಕಾಂತವಾಸಕ್ಕೆ ಮೆಚ್ಚಿದವರಾಗಿರುವರು; ಬಾಲಭುಜಂಗಯೋಗಿಗಳು ತಪಶ್ಚರ್ಯಕ್ಕಾಗಿಯೇ ತಪಶ್ಚರ್ಯಮಾಡುತ್ತಿದ್ದರಲ್ಲದೆ, ಬೇರೆ ಯಾವದೊಂದು ಉದ್ದೇಶದಿಂದ ತಪಶ್ಚರ್ಯಮಾಡುತ್ತಿದ್ದಿಲ್ಲ. ಕಾಮನಾಪರರಾಗಿ ತಪಶ್ಚರ್ಯಮಾಡುವವರ ಕಾಮನೆಗಳು ಈಶ್ವರಕೃಪೆಯಿಂದ ಪೂರ್ಣವಾದರೆ, ನಿಷ್ಕಾಮರಾಗಿ ತಪಶ್ಚರ್ಯಮಾಡುವವರಿಗೆ ಈಶ್ವರಪ್ರಾಪ್ತಿಯೇ ಆಗುವದು; ಆದ್ದರಿಂದ ಸಕಾಮತಪಸ್ಸಿಗಿಂತ ನಿಷ್ಕಾಮತಪಸ್ಸು ಶ್ರೇಷ್ಠವೂ, ಪವಿತ್ರತರವೂ ಆಗಿರುವದೆಂಬದನ್ನು ಬರೆಯಲವಶ್ಯವಿಲ್ಲ. ಇಂತಹ ಶ್ರೇಷ್ಠ ಪವಿತ್ರತರ ತಪಸ್ವಿಗಳಾದ ಲೋಕಾಪುರಸ್ವಾಮಿಗಳ ಕ್ರಿಯಾವಂತ ನಿಜವಾದ ಶಿಷ್ಯರುಕೂಡ, ಎಂತಹನಿಸ್ಪೃಹಿಗಳೂ, ಮಹಿಮಾಶಾಲಿಗಳೂ ಆಗುತ್ತಿದ್ದರೆಂಬದನ್ನು ತಿಳಿಸುವದಕ್ಕಾಗಿ,ಮಠದ ಬಾಗಿಲುಕಾಯುವ ನಾಯಿಯಾಗಿ ಸೇವೆಮಾಡಿದ್ದ ಒಬ್ಬ ಕ್ರಿಯಾವಂತಶಿಷ್ಯನ ಬೋಧಪ್ರದವಾದ ಚರಿತ್ರವನ್ನು ಈ ಅಧ್ಯಾಯದಲ್ಲಿ ಬುದ್ಧಿಪೂರ್ವಕವಾಗಿಕೊಡುವೆವು; ಯಾಕಂದರೆ, ನುಡಿಗೆ ನಡೆಯಸಾಕ್ಷಿಯು ಅವಶ್ಯವಾಗಿ ಬೇಕಾಗುವದು!

## ಮಠದ ನಾಯಿಯಾದ ಅಪ್ಪಣ್ಣನು.

ಮೇಲೆ ಹೇಳಿದಂತೆ ಭುಜಂಗಸ್ವಾಮಿಗಳು ಮಠದಿಂದ ಹೊರಟು ಗುಹೆಗೆಬರಲು, ಗುಹೆಯಬಳಿಯಲ್ಲಿ ಜನರ ಗದ್ದಲವು ಹೆಚ್ಚಾಗಿ, ಇತ್ತ ಮಠದಲ್ಲಿ ಜನರಗದ್ದಲವುಕಡಿಮೆಯಾಯಿತು; ಯಾಕಂದರೆ ಬಾಲಭುಜಂಗಸ್ವಾಮಿಗಳು ಮಠವನ್ನುಬಿಟ್ಟು ಹೋದಕೂಡಲೆ, ಬಹುತರ ಮಠದ ಜನರೆಲ್ಲ ಅವರ ಬೆನ್ನುಹತ್ತಿಹೋದರು; ಮತ್ತು ಮಠಕ್ಕೆ ಹೊರಗಿನಜನರು ಬರುವದೂ ಕಡಿಮೆಯಾಯಿತು; ಆದ್ದರಿಂದ ಗುಹೆಯ ಪ್ರದೇಶವು ಗಜಬಜಿಸುವ ಊರುಆಗಿ, ಪರಮಹಂಸರ ಸ್ಥಾನವಾದ ಲೋಕಾಪುರದ ಮಠವು ಶಾಂತ ತಪೋಭೂಮಿಯಾಯಿತು! ಹಿಂದಕ್ಕೆ ಪ್ರಭು ಶ್ರೀರಾಮ

ಚಂದ್ರನು ಅಯೋಧ್ಯೆಯನ್ನು ಬಿಟ್ಟು ಅರಣ್ಯಕ್ಕೆ ಹೋಗಲು, ಅರಣ್ಯವು ಅಯೋಧ್ಯೆಯೂ, ಅಯೋಧ್ಯೆಯು ಅರಣ್ಯವೂ ಆಯಿತೆಂಬ ಕೌತುಕದ ಸಂಗತಿಯನ್ನು ರಾಮಾಯಣದಲ್ಲಿ ಕೇಳಿರುವೆವಷ್ಟೆ? ಅದೇ ಸ್ಥಿತಿಯು ಬಾಲಭುಜಂಗಯೋಗಿಯ ಸಂಬಂಧದಿಂದ ಈಗೂ ಆಯಿತು; ಆದರೆ ಮಠವನ್ನು ಕಾಯುತ್ತಿದ್ದ ಕ್ರಿಯಾವಂತನಾಯಿಯು, ಏನಾದರೂ ಮಠವನ್ನು ಬಿಟ್ಟುಹೋಗದೆ ಮಠಕಾಯುತ್ತಲೇ ಇರುವಂತೆ, ಮಠದ ಸ್ವಾಭಿಮಾನಿಯಾದ ಅಪ್ಪಣ್ಣನೆಂಬ ಶಿಷ್ಯನು, ತಾನು ಮಠಕಾಯುವನಾಯಿಯೆಂದು ತಿಳಿದುಕೊಂಡದ್ದರಿಂದ, ಆತನು ಭುಜಂಗಸ್ವಾಮಿಗಳ ಬೆನ್ನ ಹತ್ತಿ ಹೋಗದೆ, ಮಠದಲ್ಲಿಯೇ ಉಳಿದುಕೊಂಡನು.

ಅಪ್ಪಣ್ಣನು ಲೋಕಾಪುರದ ದೇಸಾಯರ ದಾಯಾದ್ಯರೊಳಗಿನವನು. ಆತನಿಗೆ ಬಾಲ್ಯದಲ್ಲಿ ಮಹಾರೋಗದ ಬಾಧೆಯಾದದ್ದರಿಂದ, ಹಿಂದಿನ ೨ನೇ ಜ್ಞಾನೇಶ್ವರಸ್ವಾಮಿಗಳ, ಅಂದರೆ ೬ಳಹಲ್ಲುಗಳ ಜ್ಞಾನೇಶ್ವರಸ್ವಾಮಿಗಳ ಕಾಲದಲ್ಲಿ ಪರಮಹಂಸರ ಸೇವೆಗಾಗಿ ಮಠದಲ್ಲಿ ಬಂದು ನಿಂತಿದ್ದನು ಅಂದಿನಿಂದ, ಅಂದರೆ ೨ನೇ ಜ್ಞಾನೇಶ್ವರಸ್ವಾಮಿಗಳಕಾಲದಿಂದ, ರಾಮಚಂದ್ರಸ್ವಾಮಿಗಳು, ಬಾಲಭುಜಂಗಸ್ವಾಮಿಗಳು, ೮ನೇ ತಲೆಯ ೩ನೇ ಜ್ಞಾನೇಶ್ವರಸ್ವಾಮಿಗಳು ಹೀಗೆ ನಾಲ್ಕು ಜನ ಸ್ವಾಮಿಗಳ ಕಾಲಕ್ಕೂ ಆತನು ನಾಯಿಯಂತೆ ಮಠವನ್ನು ಕಾಯುತ್ತ ಮಠದಲ್ಲಯೇ ಇರುತ್ತ ಬಂದವನು. ಇಂತಹೆ ಆ ಏಕನಿಷ್ಠ ಶಿಷ್ಯನ ಮಹಾರೋಗವು ಎಂದೋ ನಿವಾರಣವಾಗಿ ಹೋದದ್ದು ಆಶ್ಚರ್ಯವಲ್ಲ! ಅಪ್ಪಣ್ಣನು ಮಿತಿಮೀರಿ ಸೆರೆಕುಡಿಯುತ್ತಿದ್ದನು; ತೆರಪಿಲ್ಲದೆ ಭಂಗಿಯುಸೇದುತ್ತಿದ್ದನು! ಮಠದಮುಂದಿನ ಅಗ್ನಿಕುಂಡದಮೇಲೆ ತನ್ನ ಸಂಗಡಿಗರಾದ ಕುಡುಕರೊಡನೆ ಕುಡಿದು, ಸೇದುವರೊಡನೆ ಸೇದಿ, ಅಮಲಾಗಿ ಅವರೊಡನೆ ಗುದುಮುರಿಗೆ ಹಾಕುವದು ಈತನ ನಿತ್ಯಕ್ರಮವಾಗಿತ್ತು! ಹೀಗೆ ಈತನು ಗೊಂದಲ ಹಾಕುತ್ತಿರುವಾಗ, ಒಬ್ಬರು ಆತನನ್ನು ಕುರಿತು ನಾವು ಈ ಮೊದಲೆ ಒಂದುಕಡೆಯಲ್ಲಿ ಹೇಳಿರುವಂತೆ—“ ಏನೋ ಅಪ್ಪಣ್ಣಾ, ನೀವು ಹೀಗೆ ಕುಡಿದಿಹಾಕುವದರೊಳಗೆ ಎಲ್ಲಿಯಾದರೂ ಬೆಂಕಿಯಕುಣಿಯಲ್ಲಿಬಿದ್ದು ಮೈಸುಟ್ಟುಕೊಂಡೀರಿ ” ಅನ್ನಲು,

ಆದಕ್ಕೆ ಅಪ್ಪಣ್ಣನು ಅಮಲಿನಲ್ಲಿ—" ಯಪ್ಪಾ, ನಾವು ಹೇಳಿಕೇಳಿ ಸೆರೆ ಗುಡಕರು, ಭಂಗಿಮುಕ್ಕರು, ಎಂಬದು ಎಲ್ಲರಿಗೂಗೊತ್ತಿದೆ. ಅಂದಬಳಿಕ ಸಾವು ಏನಾದರೇನು? ನಮ್ಮಲ್ಲಿ ಯಾರಾದರೂ ಬೆಂಕಿಯಲ್ಲಿ ಬಿದ್ದು ಸುಟ್ಟು ಕೊಂಡುಸತ್ತರೆ, ಅವರನ್ನು ಸುಡಬೇಕೋ, ಹುಗಿಯಬೇಕೋ ಎಂಬದರ ನಿರ್ಣಯವನ್ನಷ್ಟು ನೀನು ಹೇಳಿಬಿಡೆಂದರಾಯಿತು!" ಎಂದು ವಿನೋದ ದಿಂದ ನುಡಿದನು! ಹೀಗೆ ಅಮಲಿನ ವಿನೋದದಿಂದಾಡಿದ ಮಾತಿನ ಲ್ಲಿಯೂ ಅಪ್ಪಣ್ಣನ ನಿಸ್ಪೃಹವೃತ್ತಿಯು ಎಷ್ಟು ಇರುವದೆಂಬ ಸಂಗತಿಯು ಮನನಮಾಡತಕ್ಕದ್ದಾಗಿದೆ!

ಅಪ್ಪಣ್ಣನನ್ನು ಕಂಡರೆ ಎಲ್ಲರೂ ಅಂಜುತ್ತಿದ್ದರು; ಯಾಕಂದರೆ ಆತನು ವಾಕ್‌ಸಿದ್ಧಿಯುಳ್ಳವನಿದ್ದನು, ಅಂದರೆ ಆತನಬಾಯಿಂದ ಹೊರಟ ಮಾತುಗಳು ಸುಳ್ಳಾಗುತ್ತಿದ್ದಿಲ್ಲ! ಆತನಿಗೆ ಹೆಂಡದಮುಟ್ಟಿಗೆ ರೊಕ್ಕಸಿಕ್ಕರಾ ಯಿತು, ಹೆಚ್ಚಿನದು ಬೇಕಾಗುತ್ತಿದ್ದಿಲ್ಲ. ಆತನು ಯಾರನ್ನು ದುಡ್ಡು ಕೇಳಿದರೂ ಅವರು ಇಲ್ಲವೆನ್ನದೆ, ದುಡ್ಡೆರಡುದುಡ್ಡು ಕೊಟ್ಟೇಕೊಡುತ್ತಿ ದ್ದರು. ಹೀಗೆ ಆತನು ನಿಸ್ಪೃಹಿಯಿದ್ದಂತೆ, ನಿರ್ಭಯನೂ ಇದ್ದನು. ಅಪ್ಪಾಸಾಹೇಬರ ಬೆನ್ನಮೇಲೆ ದೊಡ್ಡ ವಾಳವಿದ್ದದ್ದನ್ನು ಹಿಂದೆ ಹೇಳಿದೆ ಯಷ್ಟೆ? ಆರುಲಕ್ಷದ ಉತ್ಪನ್ನದ ಸಂಸ್ಥಾನದ ಆ ತೇಜಸ್ವಿ ಯಜಮಾನನ ಭಯವೂ ಆತನಿಗಿದ್ದಿಲ್ಲ; ಯಾಕಂದರೆ ಅಪ್ಪಾಸಾಹೇಬರು ಒಮ್ಮೆ ಸಹಜ ವಾಗಿ ಹೋಗುತ್ತಿರಲು, ಅಪ್ಪಣ್ಣನು ಹಿಂದಿನಿಂದ ಹೋಗಿ ಅವರ ಆ ವಾಳದಮೇಲೆ ಕೈಯಾಡಿಸಿದನು! ಆಗ ಅಪ್ಪಾಸಾಹೇಬರು ಬೆದರಿ ಹಿಂದಿ ರುಗಿ ಅಪ್ಪಣ್ಣನನ್ನು ನೋಡಿ—" ಇವರು ಯಾರು?" ಎಂದು ಕೇಳಲು, ಬಳಿಯಲ್ಲಿದ್ದವರು—" ಮಠದಶಿಷ್ಯನು" ಎಂದು ಹೇಳಿದರು. ಆಗ ಅಪ್ಪಾ ಸಾಹೇಬರು ಎರಡು ರೂಪಾಯಿಗಳನ್ನು ಕಿಸೆಯೊಳಗಿಂದ ತೆಗೆದು ಅಪ್ಪಣ್ಣ ನಿಗೆಕೊಟ್ಟರು! ಆಗ ಅಪ್ಪಣ್ಣನು ಪರಮಾನಂದಪಟ್ಟು, ಸಂಗಡಿಗರೊಡನೆ ಗಡಂಗಕ್ಕೆಹೋಗಿ ಯಥೇಚ್ಛ ಹೆಂಡಕುಡಿದು ಆ ಎರಡು ರೂಪಾಯಿಗ ಳನ್ನು ಗೊತ್ತಿಗೆಹಚ್ಚಿದನು! ನಿಸ್ಪೃಹವೃತ್ತಿಯವರರೀತಿಯು ಹೀಗೇಯೇ ಸರಿ! ಅವರ ನಿತ್ಯದ-ವ್ಯವಹಾರಸಾಗಿನರಾಯಿತು, ಅವರಿಗೆ ದುಡ್ಡಿನ ಮಹತ್ವವಿರುವದಿಲ್ಲ!

**ಮಳೆಯ ಭವಿಷ್ಯ**—ಒಮ್ಮೆ ಅಪ್ಪಣ್ಣನು ಲೋಕಾಪುರದ ಹಳ್ಳದ ಪೂಲಿನಮೇಲೆ ಬರುತ್ತಿದ್ದನು. ಆಗ ಕುದುರೆಹತ್ತಿಕೊಂಡು ಬೇಟೆಗೆ ಹೊರಟಿದ್ದ ಮುಧೋಳದ ಸಂಸ್ಥಾನಿಕ ಬಾಳಾಸಾಹೇಬಘೋರಪಡೆಯವರು ಅಪ್ಪಣ್ಣನಿಗೆ ಇದಿರಾದರು. ಆಗ ಆ ಸಂಸ್ಥಾನಿಕರು ಅಪ್ಪಣ್ಣನನ್ನು ಕುರಿತು—" ಅಪ್ಪಣ್ಣಾ, ಮಳೆಹೋಗಿಬಿಟ್ಟಿತು, ಪೈರು ಒಣಗುತ್ತಿರುವವು; ಆದರೆ ಮಳೆಯು ಎಂದಾಗುವದು ಹೇಳು" ಎಂದು ಕೇಳಲು, ಅಪ್ಪಣ್ಣನು—" ಮಳೆಯ ಚಿಂತೆಯಾಕೆ? ಇಂದು ಮಳೆಯಲ್ಲಿ ನೀನೊತ್ತಟ್ಟಿಗೆ, ನಿನ್ನ ಕುದುರೆಯೊತ್ತಟ್ಟಿಗೆ ಆಗಿ ಬರುತ್ತೀಹೋಗು" ಎಂದು ಹೇಳಿದನು! ಅದರಂತೆ ಆ ಸಂಸ್ಥಾನಿಕರು ಬೇಟೆಗೆಹೋದಾಗ ಮಿತಿಮೀರಿ ಮಳೆಯುಹೊಡೆಯಲು, ಅವರು ದಿಕ್ಕುಗೆಟ್ಟು ಕಂಗಾಲಾಗಿ ತೋಯಿಸಿಕೊಂಡು ಮನೆಗೆಬಂದರು! ಆಗ ಆ ಸಂಸ್ಥಾನಿಕರು ಅಪ್ಪಣ್ಣನ್ನು ಕರೆಸಿ, ಆತನ ಕೈಯಲ್ಲಿ ಎರಡುರೂಪಾಯಿಹಾಕಿ, ಆತನನ್ನು ಕುರಿತು—" ಅಪ್ಪಣ್ಣಾ, ನನ್ನ ಮುಕ್ಕಾಮು ಈ ಊರಲ್ಲಿ ಇರುವತನಕ, ನೀನು ದಿನಾಲು ಮುಂಜಾನೆ ಬಂದು ನನ್ನಿಂದ ಒಂದು ರೂಪಾಯಿ, ನನ್ನ ಹೆಂಡತಿಯಿಂದ ಎಂಟು ಆಣೆ, ನನ್ನ ಮಗನಿಂದ ಎಂಟು ಆಣೆ ಹೀಗೆ ದಿನಾಲು ಎರಡು ರೂಪಾಯಿಗಳನ್ನು ಇಸಕೊಂಡುಹೋಗು" ಎಂದು ಹೇಳಿದರು. ಅಪ್ಪಣ್ಣನು ಬದುಕಿ ಇರುವವರೆಗೆ, ಯಜಮಾನರ ಮುಕ್ಕಾಮು ಲೋಕಾಪುರದಲ್ಲಿರುವತನಕ ಈ ನೇಮಣೂಕು ನಡೆಯಿತು! ಹೀಗಿರುವಾಗ, ಮತ್ತೊಂದು ದಿವಸ ಕರ್ಮ-ಧರ್ಮಸಂಯೋಗದಿಂದ ಅಪ್ಪಣ್ಣನ, ಹಾಗು ಆ ಸಂಸ್ಥಾನಿಕರ ಭೆಟ್ಟಿಯು, ಅದೇ ಪೂಲಿನಮೇಲೆ, ಆ ಸಂಸ್ಥಾನಿಕರು ಬೇಟೆಗೆ ಹೊರಟಿದ್ದಾಗೇ ಆಯಿತು. ಆಗೂ ಮಳೆಯು ಹೋಗಿತ್ತು! ಆಗ ಆ ಸಂಸ್ಥಾನಿಕರು ಅಪ್ಪಣ್ಣನಿಗೆ—" ಅಪ್ಪಣ್ಣಾ, ನೀನು ಹಿಂದಕ್ಕೆ ಮಳೆಯ ಭವಿಷ್ಯಹೇಳಿದ್ದು ನಿಜವಾಯಿತು; ಆದರೆ ಈಸಾರೆ ಮಳೆ ಎಂದಾಗುತ್ತದೆ ಹೇಳು" ಎಂದು ಕೇಳಲು, ಅದಕ್ಕೆ ಸ್ವೇಚ್ಛಾಪ್ರವತ್ತಿಯ ಅಪ್ಪಣ್ಣನು—" ಮೇಲ್ಮೇಲೆ ಹೇಳಲಿಕ್ಕೇನು ಅದು ಹಾದಿಯಮೇಲೆ ಬಿದ್ದಿದೆಯೆ? ಆ ಸಾರೆ ನಾನು ಹೇಳಿದೆನು, ಈಸಾರೆ ನೀನು ಹೇಳು, ನೀನು

ವಿಷ್ಣುಸ್ವರೂಪನಲ್ಲವೆ" ಎಂದು ಕೇಳಲು, ಸಂಸ್ಥಾನಿಕರು ನಗುತ್ತ ತಮ್ಮ ಕುದುರೆಯನ್ನು ಮುಂದಕ್ಕೆ ನೂಕಿದರು! ಜ್ಞಾನದ ಉಪಯೋಗವು ದುಡ್ಡುಗಳಿಸುವದಕ್ಕೆ, ಅಥವಾ ಪ್ರತಿಷ್ಠೆಪಡೆಯುವದಕ್ಕೆ ಅಲ್ಲ, ಆತ್ಮ ಶಾಂತಿಗಾಗಿ!

ಇಂತಹ ನಿಸ್ಪೃಹಿಯೂ, ನಿರ್ಭಯನೂ ಆದ ಅಪ್ಪಣ್ಣನು, ಮೇಲೆ ಹೇಳಿದಂತೆ ನಾಲ್ಕುಜನ ಸ್ವಾಮಿಗಳ ಕಾಲದಲ್ಲಿ, ಅಂದರೆ, ಶಾಂತವೃತ್ತಿಯು ಳ್ಳವರಾದ ೬೪ ಹಲ್ಲುಗಳ ಜ್ಞಾನೇಶ್ವರಸ್ವಾಮಿಗಳು, ಸ್ವೇಚ್ಛಾಚಾರಿಗಳಾದ ರಾಮಚಂದ್ರಸ್ವಾಮಿಗಳು, ಮಹಾ ತಪಸ್ವಿಗಳಾದ ಬಾಲಭುಜಂಗಸ್ವಾಮಿಗಳು, ಇದೇಗತಿಸಿರುವ ಸದಾಚಾರಿಗಳಾದ ಸುವ್ಯವಸ್ಥೆಯ ೩ನೇ ಜ್ಞಾನೇಶ್ವರಸ್ವಾಮಿಗಳು ಇವರ ಕಾಲದಲ್ಲಿ ಮಠದ ಬಾಗಿಲು ಕಾಯ್ದುಕೊಂಡಿದ್ದು, ಅವರೆಲ್ಲರ ಚರಿತ್ರಗಳನ್ನು ಕಣ್ಣಾರೆಕಂಡವನಾಗಿದ್ದನು. ಆತನ ಕೆಲಸವೆಂದರೆ, ಮೇಲೆ ಹೇಳಿದಂತೆ ಮಠದ ಬಾಗಿಲುಕಾಯುವದು, ಮತ್ತು ಸ್ವಾಮಿಗಳು ಹೊರಗೆ ಹೊರಟಾಗ ನಿಶಾನೆ ಹಿಡಿಯುವದು! ಆತನ ವಯಸ್ಸು ಎಂಬತ್ತು ತೊಂಬತ್ತು ವರ್ಷದ್ದಾಗಿರಬಹುದು. ಆಗ ಬಾಲಭುಜಂಗಸ್ವಾಮಿಗಳು ಮಠವನ್ನುಬಿಟ್ಟು ತಪಶ್ಚರ್ಯಕ್ಕಾಗಿ ಅರಣ್ಯಕ್ಕೆ ಹೋಗಲು, ಎಲ್ಲರಂತೆ ಅಪ್ಪಣ್ಣನು ಅವರ ಬೆನ್ನುಹತ್ತಿ ಹೋಗದೆ, ಮಠದಲ್ಲಿಯೇ ಇರುವದನ್ನು ನೋಡಿ ಒಬ್ಬರು ಸಹಜವಾಗಿ ಆತನನ್ನು ಕುರಿತು—"ಯಾಕೆ ಅಪ್ಪಣ್ಣಾ, ನೀನು ಸ್ವಾಮಿಗಳ ಸಂಗಡ ಗವಿಗೆ ಹೋಗಲಿಲ್ಲವಲ್ಲ?" ಎಂದು ಕೇಳಲು, ಅದಕ್ಕೆ ಅಪ್ಪಣ್ಣನು—"ನಾನೇಕೆ ಗವಿಗೆ ಹೋಗಲಿ? ನನ್ನ ಗುರುವು ಇಲ್ಲಿಯೇ ಇರುತ್ತಾನೆ. ನಡುವೆ ಬಂದಿದ್ದಸ್ವಾಮಿಯು ಮಠಬಿಟ್ಟುಹೋದರೆ, ನಾನೇಕೆ ಆತನ ಬೆನ್ನು ಹತ್ತಬೇಕು? ಎಂದಿನಂತೆ ನನ್ನ ಗುರುನಾಥನ ಸ್ಥಾನವನ್ನು ಕಾಯುತ್ತ, ನಾಯಿಯಂತೆ ಮಠದ ಬಾಗಿಲಲ್ಲಿ ಬಿದ್ದಿದ್ದರಾಯಿತು!" ಎಂದು ಹೇಳಿದನು! ಕ್ರಿಯಾವಂತರ ಮಾತು ಹೀಗೆಯೇ ಸರಿ! ಅವರು ಆಶೆಬುರುಕತನದಿಂದ ಸಿಕ್ಕಲ್ಲಿ ಅಲೆದಾಡತಕ್ಕವರಲ್ಲ!

**ಗುರುಗಳ ಮುಂದೆಯೂ ನಿಸ್ಪೃಹತೆ**—ಬಾಲಭುಜಂಗ ಸ್ವಾಮಿಗಳ ಶಿಷ್ಯನೊಬ್ಬನು, ಮರಾಠಾಜಾತಿಯ ನಾರಾಯಣನೆಂಬ ಹೆಸ

ರಿನವನು ಇದ್ದನೆಂದು ಹಿಂದೆ ಹೇಳಿರುವದು ವಾಚಕರ ಸ್ಮರಣದಲ್ಲಿರಬಹುದು; ಆತನು, ಮಠದ ಅಂಗಳ ಕಸಬಳಿಯುವಾಗ ಎರಡೂ ಕಣ್ಣು ಕಳಕೊಂಡಿದ್ದ ರಾಜಿ ಎಂಬ ಮುಸಲ್ಮಾನ ಜಾತಿಯ ಹುಡುಗೆಯ ತಂದೆಯು! ಆ ನಾರಾಯಣನೂ ಅಪ್ಪಣ್ಣನಂತೆ ಮಿತಿಮೀರಿ ಸೆರೆಕುಡಿಯುತ್ತಿದ್ದನು! ಒಮ್ಮೆ ನಾರಾಯಣನೂ, ಅಪ್ಪಣ್ಣನೂ ಇಬ್ಬರೂ ಭುಜಂಗಸ್ವಾಮಿಗಳ ಮುಂದೆ ಕುಳಿತಿದ್ದರು. ಆಗ ಸ್ವಾಮಿಗಳು ಅವರಿಬ್ಬರ ಯೋಗ್ಯತೆಯ ಪರೀಕ್ಷೆಗಾಗಿ ಅವರಿಬ್ಬರನ್ನು ಕುರಿತು—"ನೀವಿಬ್ಬರೂ ಸೆರೆಕುಡಿಯುವದನ್ನು ಬಿಟ್ಟರೆ, ನಿಮಗೊಂದೊಂದು ಶಾಟಿಯನ್ನು ಕೊಡುವೆನು" ಎಂದು ಹೇಳಿದರು. ಅದನ್ನು ಕೇಳಿ ನಾರಾಯಣಪ್ಪನು ತಟ್ಟನೆ ಸ್ವಾಮಿಗಳನ್ನು ಕುರಿತು—"ಅಪ್ಪಾ, ನಿನ್ನ ಮನಸ್ಸಿಗೆ ಬಾರದ್ದು ನನಗೇತಕ್ಕೆ? ನಿನ್ನ ಪಾದಸಾಕ್ಷಿಯಾಗಿ ಸೆರೆಕುಡಿಯುವದನ್ನು ಇಂದಿನಿಂದ ಬಿಟ್ಟುಬಿಟ್ಟೆನು" ಎಂದು ಹೇಳಿದನು! ಅದನ್ನು ಕೇಳಿ ಸ್ವಾಮಿಗಳು ಸಂತೋಷಪಟ್ಟು ತಮ್ಮ ಮೈಮೇಲಿನ ಶಾಟಿಯನ್ನು ಆತನಿಗೆ ಕೊಟ್ಟರು; ಆದರೆ ಅಪ್ಪಣ್ಣನು ಈ ಮೋಜುನೋಡುತ್ತ ಸುಮ್ಮನೆ ಕುಳಿತಿದ್ದನಲ್ಲದೆ, ಪಿಟ್ಟೆಂದು ಮಾತಾಡಲಿಲ್ಲ!

ಆಗ ಸ್ವಾಮಿಗಳು ಅಪ್ಪಣ್ಣನಿಗೆ—"ಯಾಕೆ ಅಪ್ಪಣ್ಣಾ, ಏನೂ ಮಾತಾಡಲೊಲ್ಲೆ? ಹೆಂಡಕುಡಕತನ ಬಿಡುವದು ನಿನ್ನ ಮನಸ್ಸಿಗೆ ಬರುವದಿಲ್ಲವೆ?" ಎಂದು ಕೇಳಲು, ಅಪ್ಪಣ್ಣನು—"ಅಪ್ಪಾ, ನಿನ್ನ ಶಾಟಿಯ ಆಶೆಯಿಂದ ಬಿಡುತ್ತೇನೆಂದು ಹೇಳಿದ್ದು ಸೋಗುಆಗುವದು ನೋಡು! ಅದು ಮೂರು ದಿವಸ ನಡೆಯುವದಿಲ್ಲ! ಕಲಿತ ಗುಣವು ಕಾಶಿಗೆಹೋದರೂ ಹೋಗುವದಿಲ್ಲ, ಹುಟ್ಟಗುಣವು ಹುಗಿದಗೂ ಹೋಗುವದಿಲ್ಲ" ಎಂದು ಗಾದೆಯಿರಲು, "ನಾನು ಸೆರೆಕುಡಿಯುವದು ಬಿಡುತ್ತೇನೆಂದು" ಹೇಳಿ ನಾನು ಹೇಗೆ ಸೋಗು ಮಾಡೇನು? ಸೆರೆಗುಡಕತನವು ನನ್ನ ಕಲಿತ ಗುಣವಾಗಿದ್ದು, ಅಭ್ಯಾಸದಿಂದ ಅದು ನನ್ನ ಹುಟ್ಟಗುಣವೂ ಆಗಿ ಹೋಗಿರುವದು! ಅಂದಬಳಿಕ ನನ್ನಲ್ಲಿರುವ ಹಲವು ದುರ್ಗುಣಗಳೊಡನೆ ಅದೂ ನನ್ನಲ್ಲಿರಲೊಲ್ಲದೇಕೆ! ನಾಳೆ ನನ್ನ ದೇಹವು ಸುಡುವಾಗ ನನ್ನ ಹಲವು

ದುರ್ಗುಣಗಳೊಡನೆ ನನ್ನ ಆ ಸೆರೆಗುಡಕತವೂ ಸುಟ್ಟುಹೋಗಬೇಕು ನೋಡು! ನಿನ್ನಂಥಸದ್ಗುರುವಿನಶಿಷ್ಯರಿಗೆ ಸದ್ಗುಣ—ದುರ್ಗುಣ, ಸದಾಚಾರ—ದುರಾಚಾರಗಳ ಹಂಗೇನು? ನಾನುಕುಡುಕತನವನ್ನು ಬಿಟ್ಟರೆ ಅದುನನ್ನನ್ನು ಬಿಡುವದೆಯೆ? ಬೇಕಾಗಿದ್ದರೆ ಸಮರ್ಥ ಸದ್ಗುರುನಾಥನು ನೀನು, ನನ್ನ ಆ ದುರಾಚಾರವನ್ನು ಬಿಡಿಸು.'' ಎಂದು ಹೇಳಿದನು! ಆಗ ಭುಜಂಗ ಸ್ವಾಮಿಗಳು ಅಪ್ಪಣ್ಣನ ಯಥಾರ್ಥ ಮಾತುಗಳಿಗಾಗಿ ತಲೆದೂಗಿ ನಗುತ್ತ ನಾರಾಯಣಪ್ಪನ ಕಡೆಗೆ ನೋಡಿದರು! ಆ ನಾರಾಯಣಪ್ಪನ ಸೋಗಿನ ಪ್ರತಿಜ್ಞೆಯು ಮೂರು ದಿವಸವೂ ನಡೆಯದೆ, ಆತನು ಮೊದಲಿಗಿಂತಲೂ ಹೆಚ್ಚು ಸೆರೆಕುಡಿಯಹತ್ತಿದನು! ವಾಚಕರೇ, ನಾರಾಯಣಪ್ಪನೆಂಬ ಶಿಷ್ಯನ ಸೋಗೆತ್ತ? ಅಪ್ಪಣ್ಣನ ಅಚ್ಚಳಿಯದ ಕ್ರಿಯಾವಂತೆಗೆಯೆತ್ತ? ಒಟ್ಟಿಗೆ, ಆಧ್ಯಾತ್ಮದ ರಹಸ್ಯವು ಗಹನವಾದದ್ದು!

**ಅಪ್ಪಣ್ಣನ ಶರಣತ್ವಪರೀಕ್ಷೆ**—ಹೀಗೆ ಜಗತ್ತಿನ ಲಕ್ಷವಿಲ್ಲದೆ ತಾನೇ ತಾನಾಗಿದ್ದ ಅಪ್ಪಣ್ಣನು, ತನ್ನ ಗುರುನಾಥನ ದ್ವಾರರಕ್ಷಕ ಸೇವೆಯಲ್ಲಿ ತತ್ಪರನಾಗಿ ಇರುತ್ತಿರಲು, ಬಾಲಭುಜಂಗಯೋಗಿಗಳು ದೇಹವಿಟ್ಟ ಬಳಿಕ, ತೀರ ಚಿಕ್ಕ ವಯಸ್ಸಿನವರಾಗಿದ್ದ ಮೊನ್ನೆಮೊನ್ನೆಗತಿಸಿದ ೩ನೇ ಜ್ಞಾನೇಶ್ವರಸ್ವಾಮಿಗಳು ಪೀಠಸ್ಥರಾದರು. ಹೀಗೆ ಕೆಲವುಕಾಲ ಕ್ರಮಿಸುತ್ತಿರಲು, ಒಂದುದಿನ ಮೂರನೇ ಜ್ಞಾನೇಶ್ವರಸ್ವಾಮಿಗಳು ಮಠದ ಆರಾಧನೆಯ ಸಂಬಂಧದ ಕಾರ್ಯದಲ್ಲಿ ನಿಶಾನೆ ಹಿಡಿಯುವದಕ್ಕಾಗಿ ಅಪ್ಪಣ್ಣನನ್ನು ಕರೆಯಲು, ಅದಕ್ಕೆ ಅಪ್ಪಣ್ಣನು ಸ್ವಾಮಿಗಳಿಗೆ—''ಅಪ್ಪಾ, ಇನ್ನು ಅಪ್ಪಣ್ಣನ ನಿಶಾನೆ ಹಿಡಿಯುವ ಕೆಲಸವು ಮುಗಿಯಿತು; ಈ ವರ್ಷದ ಆರಾಧನೆಗೆ ಅಪ್ಪಣ್ಣನು ಇರುವದಿಲ್ಲ; ಆದ್ದರಿಂದ ಬೇರೊಬ್ಬರ ಕೈಯಿಂದ ನಿಶಾನೆಯನ್ನು ಹಿಡಿಸಬೇಕು'' ಎಂದು ಹೇಳಿದನು! ಅದರಂತೆ ಮುಂದೆ ಕೆಲವು ದಿವಸಗಳಮೇಲೆ ಅಪ್ಪಣ್ಣನ ದೇಹವು ಅಸ್ವಸ್ಥವಾಯಿತು. ಆದರೂ ಆತನು ಮಠದಲ್ಲಿಯೇ ಇದ್ದನು. ಮುಂದೆ ಬರಬರುತ್ತ ಅಪ್ಪಣ್ಣನಬೇನೆ ಹೆಚ್ಚಾಗಲು, ಮಠದವರಿಗೆ ತೊಂದರೆಯಾಗುವದೆಂದು ತಿಳಿದು, ಅಪ್ಪಣ್ಣನ ಮನೆಯವರು ಅಪ್ಪಣ್ಣನ ಬಳಿಗೆ ಬಂದು—''ಅಪ್ಪಣ್ಣಾ, ನಿನ್ನ

ಬೇನೆಯು ಹೆಚ್ಚಾಯಿತು, ಇನ್ನು ಮನೆಗೆ ಬಾ, ಮಠದಲ್ಲಿ ಯಾಕೆ ಇರುತ್ತೀ'' ಎಂದು ಕರೆದರು. ಅದಕ್ಕೆ ಅಪ್ಪಣ್ಣನು—''ನಾನು ಅಪ್ಪಣ್ಣನು" ಎಂಬ ಎಚ್ಚರವು ನನಗೆ ಇರುವತನಕ, ಈ ದೇಹವು ಈ ಮಠದಲ್ಲಿ ಬಿದ್ದಿರತಕ್ಕದ್ದೇ ಸರಿ! ಮುಂದೆ ನನ್ನ ಮೈಮೇಲಿನ ಎಚ್ಚರವು ತಪ್ಪಿದರೆ, ಬೇಕಾದವರು ಬೇಕಾದತ್ತ ಈ ದೇಹವನ್ನು ಒಯ್ಯಿರಿ" ಎಂದು ಹೇಳಿದನು!

ಮುಂದೆ ಅಪ್ಪಣ್ಣನ ಬೇನೆಯು ಮತ್ತೂ ಹೆಚ್ಚಾಯಿತು, ಅಪ್ಪಣ್ಣನ ದೇಹಬಿಡುವ ದಿವಸವೂ ಬಂದೊದಗಿತು. ಆಗ ಆತನ ಬಳಿಯಲ್ಲಿ ಮೂರು ದುಡ್ಡುಗಳು ಮಾತ್ರ ಇದ್ದವು! ಆಗ ಅಪ್ಪಣ್ಣನು ತನ್ನ ಬಳಿಯಲ್ಲಿಯ ಒಬ್ಬನನ್ನು ಕುರಿತು—''ಎಲೇ, ಹೋಗು, ಬೇಗನೆ ಈ ಮೂರುದುಡ್ಡಿನ ಹೆಂಡವನ್ನು ತಕ್ಕೊಂಡು ಬಾ.'' ಎಂದು ಹೇಳಿ, ಆತನನ್ನು ಹೆಂಡ ತರಲಿಕ್ಕೆ ಕಳಿಸಿದನು. ಆ ಮನುಷ್ಯನು ಅತ್ತ ಹೆಂಡತರಲಿಕ್ಕೆ ಹೋಗಲು, ಇತ್ತ ಒಬ್ಬ ವೈದ್ಯನು ಅಪ್ಪಣ್ಣನನ್ನು ಕುರಿತು—''ಅಪ್ಪಣ್ಣಾ, ಔಷಧ ಕೊಡುತ್ತೇನೆ, ತೆಗೆದುಕೋ'' ಎಂದು ಹೇಳಲು, ಅದಕ್ಕೆ ಅಪ್ಪಣ್ಣನು—''ಇಂದು ಸಂಜೆಯೊಳಗೇ ಕತ್ತಲಾಗುವಹಾಗೆ ಕಾಣುತ್ತದೆ; ಹಾಗಾಗದಿದ್ದರೆ ಔಷಧಕೊಡುವೆಯಂತೆ'' ಎಂದು ಹೇಳಿ, ಎದ್ದು ಕುಳಿತು, ತನ್ನ ವಾಡಿಕೆಯ ಪದ್ಧತಿಯಂತೆ ಕನ್ನಡಿಸೋಡಿ, ತನ್ನ ಮಡಿಕೆಯ ಕರವಸ್ತ್ರದಿಂದ ಮೀಸೆ ತಿದ್ದಿಕೊಳ್ಳುತ್ತ, ಮೋರೆ ಒರಸಿಕೊಳ್ಳುತ್ತ ಕುಳಿತಿರಲು, ಹೆಂಡ ತರಹೋದವನು ಹೆಂಡವನ್ನು ತಕ್ಕೊಂಡು ಬಂದನು. ಆಗ ಅಪ್ಪಣ್ಣನು ಹೆಂಡ ತಕ್ಕೊಂಡು ಬಂದವನಿಗೆ—''ಎಲೇ, ನೀನು ಈ ಹೆಂಡವನ್ನು ಕುಡಿ, ನೋಡಿ ಸಂತೋಷಪಟ್ಟು ನಾನು ಪ್ರಾಣವನ್ನು ಬಿಡುವೆನು, ನನಗೆ ಕುಡಿಯುವ ತ್ರಾಣವಿಲ್ಲ" ಎಂದು ಹೇಳಲು, ಆ ಹೆಂಡ ತಂದವನು ಹೆಂಡವನ್ನು ಕುಡಿದನು. ಆಗ ಅಪ್ಪಣ್ಣನು ಮತ್ತೆ ಕೈಯಲ್ಲಿ ಕನ್ನಡಿಯನ್ನು ತಕ್ಕೊಂಡು, ತನ್ನ ಮಡಿಕೆಯ ಕರವಸ್ತ್ರದಿಂದ ಮೋರೆ ಒರಸಿಕೊಳ್ಳುತ್ತ, ತನ್ನ ಗಡ್ಡ ಮೀಸೆಗಳನ್ನು ಸರಿಮಾಡಿಕೊಳ್ಳುತ್ತ, ಬಳಿಯಲ್ಲಿ ಕುಳಿತಿರುವವರನ್ನು ಕುರಿತು—''ಎಲೇ, ಇನ್ನು

ಅಪ್ಪಣ್ಣನು ಹೊರಟನು. ಆತನ ಈ ದೇಹವನ್ನು ಸುಡುವಲ್ಲಿ ಸುಟ್ಟು ಆತನ ಗುರುತಿಗಾಗಿ ಈ ಮಠದ ಹೊರಗಿನ ಬೇವಿನಮರದ ಬುಡದಲ್ಲಿ ಆತನ ಹೆಸರಿನ ಸಮಾಧಿಯನ್ನು ಕಟ್ಟಿಸಿರಿ; ಅಥವಾ ನಿಮ್ಮಿಂದ ಆಗದಿದ್ದರೆ, ಈ ಊರ ದೇಸಾಯಿಗೆ ಹೇಳಿರಿ, ಆತನು ಕಟ್ಟಿಸುವನು" ಎಂದು ಹೇಳಿ, ಮಾತಾಡುತ್ತ ದೇಹವನ್ನು ಬಿಟ್ಟನು! "ಶರಣರ ಪರೀಕ್ಷೆಯನ್ನು ಮರಣದಲ್ಲಿ ಮಾಡೆಂ"ದು ಹೇಳುವದು ಸುಳ್ಳಲ್ಲ! ಈಗ ಕಟ್ಟಿಸಿರುವ ಅಪ್ಪಣ್ಣನ ಸಮಾಧಿಗೆ, ಪ್ರದಕ್ಷಿಣೆಮಾಡಿದರೆ, ಚೇಳಿನ ವಿಷವು ಇಳಿಯುತ್ತಿರುವದಂತೆ! ಪ್ರಿಯವಾಚಕರೇ, ಅಪ್ಪಣ್ಣನು ದುರಾಚಾರಿಯೋ ಸದಾಚಾರಿಯೋ ನೀವೇ ಹೇಳಿರಿ; ನಮ್ಮಿಂದಂತು ಈ ಕಗ್ಗಂಟು ಬಿಚ್ಚುವದು ಆಗದು!

---

## ೧೭ನೇ ಅಧ್ಯಾಯ,

## ಮಹಿಮೆಗಳ ಸಾತ್ವಿಕತೆಯು.



ಬಾಲಭುಜಂಗಸ್ವಾಮಿಗಳು ಮಹಾಮಹಿಮರೆಂಬ ಮಾತು ಗೊತ್ತಾಗಿದೆಯಷ್ಟೆ? ಬಾಲ್ಯದಲ್ಲಿ ಅವರ ಹಲವು ಮಹಿಮೆಗಳು ಪ್ರಕಟವಾದವು; ಕೌಮಾರ್ಯದಲ್ಲಿ ಅವರು ಹಲವು ಮಹಿಮೆಗಳನ್ನು ಪ್ರಕಟಮಾಡಿದರು; ಆದರೆ ಈಗ ಅವರ ಪ್ರೌಢದೆಸೆಯು ಪ್ರಾಪ್ತವಾಗುತ್ತಿರಲು, ಅವರು ತಮ್ಮ ಮಹಿಮಾಶಾಲಿತ್ವವನ್ನು ಪ್ರಕಟಗೊಳಿಸದಾದರು; ಯಾಕಂದರೆ, ಪರಿಶುದ್ಧ ನಿಷ್ಕಾಮ ತಪಸ್ವಿಗಳಾಗಿದ್ದ ಅವರ ತಪಸ್ಸಿನ ಅಭಿವೃದ್ಧಿಯಾದಂತೆ,

ಅವರ ಆ ಪರಿಶುದ್ಧ ತಪಸ್ಸಿನ ಪ್ರಭಾವದಿಂದ ಅವರ ವೃತ್ತಿಯು ಅಂತರ್ಮುಖವಾಗುತ್ತ ಬಂದಿತು; ಅಂತೇ ಅವರು ಮಠವನ್ನು ಬಿಟ್ಟು ಅರಣ್ಯಕ್ಕೆ ತೆರಳಿದರು! ಹೀಗೆಯೇ ಸ್ವಾಮಿಗಳು ಪ್ರೌಢದೆಸೆಯಿಂದ ಪರಿಪಕ್ವದೆಸೆಗೆ ಬಂದಿದ್ದರೆ, ಅವರು ತಪಶ್ಚರ್ಯಕ್ಕಾಗಿ ಗುಹಾಪ್ರವೇಶವನ್ನು ಮಾಡತಕ್ಕವರೇ ; ಆದರೆ ಪರಮಹಂಸರ ಸಂಕೇತವು ಹಾಗೆ ಇದ್ದಿಲ್ಲ; ತಮ್ಮ ಉಳಿದಿದ್ದ ಹನ್ನೆರಡು ವರ್ಷಗಳ ತಪಸ್ಸನ್ನಷ್ಟು ಪೂರ್ಣಮಾಡಬೇಕೆಂದು ಪರಮಹಂಸರು ಬಾಲಭುಜಂಗಯೋಗಿಗಳನ್ನು ಪ್ರೇರೇಪಿಸಿದ್ದರು; ಆದ್ದರಿಂದ ಆ ಭುಜಂಗಸ್ವಾಮಿಗಳಿಗೆ ಗುಹಾಪ್ರವೇಶಮಾಡುವ ಪ್ರಸಂಗವು ಬರಲಿಲ್ಲವೆಂದು ಊಹಿಸಬೇಕಾಗುತ್ತದೆ. ಒಟ್ಟಿಗೆ, ಇನ್ನುಮುಂದೆ ಮಾಡಿರುವ ಏಳುವರ್ಷಗಳ ಆರಣ್ಯಕ ತಪಶ್ಚರ್ಯದ ಅಂತರ್ಮುಖವೃತ್ತಿಯಲ್ಲಿ, ಬಾಲಭುಜಂಗಯೋಗಿಗಳ ಮಹಿಮೆಗಳು ವಿಶೇಷ ಪ್ರಕಟವಾಗಿರುವದಿಲ್ಲ; ಮಹಿಮೆಗಳನ್ನು ತೋರಿಸಿ ಲೋಕಸಂಗ್ರಹಮಾಡುವದು, ಸುಡುಗಾಡಸಿದ್ಧರ ಆಟತೋರಿಸಿ ಜನರನ್ನು ನೆರಿಸುವಂತೆ ಇರುತ್ತದೆ; ಅದರಿಂದ ಜನರ ಕಾಮನಾಪರಂಪರೆಗೆ ಉತ್ತೇಜನಕೊಟ್ಟಂತಾಗುವದು! ಹೀಗೆ ಜನರ ಕಾಮನೆಗಳನ್ನು ಹೆಚ್ಚಿಸುವದು ಸದ್ಗುರುಗಳ ಮುಖ್ಯ ಕಾರ್ಯವಲ್ಲ, ಅಡ್ಡಹಾದಿಯ ಹಿಡಿದವರನ್ನು ಹಾದಿಗೆ ಹಚ್ಚುವದೇ ಸದ್ಗುರುಗಳ ಮುಖ್ಯ ಕೆಲಸವು; ಆದ್ದರಿಂದ ಈ ಏಳುವರ್ಷಗಳ ತಪಸ್ಸಿನಲ್ಲಿ ಬಾಲಭುಜಂಗಯೋಗಿಗಳ ಲೋಕಸಂಗ್ರಹಕಾರಕ ಮಹಿಮೆಗಳು ಪ್ರಕಟವಾಗದೆ, ತಪೋರಕ್ಷಕ ಮಹಿಮೆಗಳು ಮಾತ್ರ ಪ್ರಕಟವಾಗಿರುವವು; ಅಂಥ ಒಂದೆರಡು ಮಹಿಮೆಗಳನ್ನು ಮಾತ್ರ ಕೆಳಗೆ ಬರೆಯುವೆವು.

## ಅರಣ್ಯದಲ್ಲಿಯ ಸಾತ್ವಿಕ ಮಹಿಮೆಗಳು.

**ಅರಣ್ಯಕ ಬಾಧೆಗಳು—** ಗುಹಾಪ್ರದೇಶವು ಅರಣ್ಯವಾದದ್ದರಿಂದ, ಅಲ್ಲಿ ಸರ್ಪಗಳು ವಿಶೇಷವಾಗಿ ಇರುವದು ಸ್ವಾಭಾವಿಕವು. ಒಂದು ದಿನ ರಾತ್ರಿ ಸ್ವಾಮಿಗಳು ಮುಸುಕು ಹಾಕಿಕೊಂಡು ಅನುಷ್ಠಾನಕ್ಕೆ ಕುಳಿತಿದ್ದಾಗ, ಒಂದು ಘಟಸರ್ಪವು ಅವರನ್ನು ಸುತ್ತುವರಿದು ಹೋಯಿತು; ಆದರೆ ಭುಜಂಗ ಸ್ವಾಮಿಗಳು ಆಸನದಿಂದ ಚಲಿಸಲಿಲ್ಲವು! ಮತ್ತೊಂದು ಸಾರೆ

ಯಂತು ಒಂದು ಸರ್ಪವು ಭುಜಂಗಸ್ವಾಮಿಗಳು ಕುಳಿತಿದ್ದ ಮಣೆಯು ಬುಡದಲ್ಲಿ ಸೇರಿಕೊಂಡು, ಸ್ವಾಮಿಗಳು ಮುಸುಕು ತೆಗೆಯುವವರೆಗೆ ಮಣೆಯ ಬುಡದಲ್ಲಿಯೇ ಇದ್ದು, ಆಗಾಗ್ಗೆ ತನ್ನ ಹೆಡೆಯಿಂದ ಮಣೆಯನ್ನು "ಪಟ್ ಪಟ್" ಎಂದು ಬಡಿಯುತ್ತಲಿತ್ತಂತೆ; ಆದರೂ ಸ್ವಾಮಿಗಳು ಆಸನ ಬಿಟ್ಟು ಕದಲಲಿಲ್ಲ! ಮುಂದೆ ಸ್ವಾಮಿಗಳು ಮುಸುಕು ತೆಗೆದ ಬಳಿಕ ಹತ್ತಿರಿದ್ದವರಿಗೆ—"ಮಣೆಯ ಬುಡದಲ್ಲಿ ಏನಿದೆ ನೋಡಿರಿ" ಅನ್ನಲು, ಜನರು ಮಣೆ ಎತ್ತಿ ನೋಡಿದಾಗ, ಹಾವು ಸಳ ಸಳ ಹರಿದು ಹೋಯಿ ತಂತೆ! ಒಮ್ಮೆ ರಾತ್ರಿ ಸ್ವಾಮಿಗಳ ಅನುಷ್ಠಾನದ ಕೋಣೆಯ ಬಾಗಿಲು ಇಕ್ಕದೆ ಮರೆತು, ಜನರು ಹಾಗೆಯೇ ಮಲಗಿರಲು, ಒಂದು ಏದು ಕೋಣೆ ಯನ್ನು ಹೊಕ್ಕು ತನ್ನ ಮೈ ಮುಳ್ಳುಗಳನ್ನು ಕೋಣೆಯಲ್ಲಿ ಕೆಡವಿತ್ತಂತೆ; ಆದರೆ ಸ್ವಾಮಿಗಳ ಮೈಗೆ ಮಾತ್ರ ಒಂದು ಮುಳ್ಳೂ ಬಡಿದಿದ್ದಿಲ್ಲವಂತೆ! ಹೀಗೆ ಏಳುವರ್ಷದ ತಪಸ್ಸಿನಲ್ಲಿ, ಜನರಿಗೆ ಕಂಡು, ಜನರಿಗೆ ಕಾಣದೆವಿಘ್ನಗಳು ಎಷ್ಟು ಒದಗಿದರೂ ಸ್ವಾಮಿಗಳು ಆಸನಭ್ರಷ್ಟರಾಗದೆ ಅಖಂಡವಾಗಿ ತಪಶ್ಚ ರ್ಯವನ್ನು ಸಾಗಿಸುತ್ತ ಬಂದದ್ದು ಆಶ್ಚರ್ಯದ ಸಂಗತಿಯೇ ಸರಿ!

**ಭವಿಷ್ಯಕಥನ**— ಒಮ್ಮೆ ಮಾಚಕನೂರ ಘೋರಪಡೆ ಸರಕಾರ ದಾಜೀಸಾಹೇಬರೆಂಬ ಸಂಸ್ಥಾನಿಕರು, ತಮ್ಮ ಹೆಂಡತಿಯ ರೋಗ ನಿವಾರ ಣಕ್ಕಾಗಿ ಅಂಗಾರವನ್ನು ಕೇಳಲಿಕ್ಕೆ ಭುಜಂಗ ಸ್ವಾಮಿಗಳ ಬಳಿಗೆ ಸ್ವತಃ ಬಂದರು ಆಗ ಸ್ವಾಮಿಗಳು ತಮ್ಮ ಶಿಷ್ಯನಾದ ನಾರಾಯಣನಿಗೆ ಅಂಗಾರ ಕೊಡೆಂದು ಹೇಳಲು, ದಾಜೀಸಾಹೇಬರು—"ಮಹಾಸ್ವಾಮಿ, ನಾನು ನಾರಾಯಣನ ಕಡೆಯಿಂದ ಅಂಗಾರ ತಕ್ಕೊಂಡು ಹೋಗಲಿಕ್ಕೆ ಬಂದಿರುವ ದಿಲ್ಲ; ಕೊಡುವಹಾಗಿದ್ದರೆ ತಾವು ಕೈಮುಟ್ಟಿ ಅಂಗಾರವನ್ನು ಕೊಡಬೇಕು" ಎಂದು ಕೇಳಿಕೊಂಡರು. ಅದಕ್ಕೆ ಸ್ವಾಮಿಗಳು—"ದಾಜೀಸಾಹೇಬ, ನಾವು ಕೈಮುಟ್ಟಿ ಅಂಗಾರ ಕೊಡಲಿಕ್ಕೆ ಬರುವದಿಲ್ಲ, ಆಗ್ರಹ ಮಾಡಬಾರದು" ಎಂದು ಹೇಳಿದರು. ಅದನ್ನು ಕೇಳಿ ದಾಜೀಸಾಹೇಬರಿಗೆ ಅಸಮಾಧಾನ ವಾಗಿ, ಅವರು ಅಂಗಾರ ತಕ್ಕೊಳ್ಳದೆ ಹಾಗೆಯೇ ಬರಿಗೈಯಿಂದ ಹೋದರು! ಅವರು ಅತ್ತ ಹೋದ ಬಳಿಕ ಬಳಿಯಲ್ಲಿದ್ದವರು ಸ್ವಾಮಿಗಳಿಗೆ—"ಅಪ್ಪಾ,

ದೊಡ್ಡವರ ಕೆಲಸ, ಅಂಗಾರ ಕೊಟ್ಟುಬಿಟ್ಟಿದ್ದರೆ ನೆಟ್ಟಗಾಗುತ್ತಿತ್ತಲ್ಲವೆ?" ಎಂದು ಕೇಳಲು, ಅದಕ್ಕೆ ಸ್ವಾಮಿಗಳು—"ನಾಳೆ ಒಂಬತ್ತು ತಾಸಿಗೆ ಆ ರೋಗಿಯು ಸಾಯುತ್ತಿರಲು, ನಾನು ಅಂಗಾರಕೊಡುವದು ಹೇಗೆ? ರೋಗಿಯು ಬದುಕುವ ಯೋಗವೇ ಇಲ್ಲದಿರಲು, ಮುತ್ಯಯ್ಯನಾದರೂ ನನಗೆ ಅಂಗಾರವನ್ನು ಕೊಡಲಿಕ್ಕೆ ಹೇಗೆ ಪ್ರೇರಿಸುವನು?" ಎಂದು ಕೇಳಿದರು ಸ್ವಾಮಿಗಳ ಭವಿಷ್ಯದಂತೆಯೇ ಮರುದಿವಸ ಒಂಬತ್ತು ತಾಸಿಗೆ ಆ ರೋಗಿಯ ಅಂತವಾಯಿತು. ಇಂತಹ ಸಣ್ಣ ದೊಡ್ಡ ಮಹಿಮಾ ಸಂಗತಿಗಳು ಹಲವು ಆಗಿದ್ದರೂ, ಗ್ರಂಥವು ವಿಸ್ತಾರವಾಗಬಾರದೆಂದು ಅವನ್ನು ಸಂಗ್ರಹಿಸುವ ಗೊಡವಿಗೆ ಹೋಗಿರುವದಿಲ್ಲ. ಬಾಲಭುಜಂಗಯೋಗಿಗಳು ಮಹಿಮಾಶಾಲಿಗಳಾದ ಮಹಾತಪಸ್ವಿಗಳೂ, ನಿಗ್ರಹಾನುಗ್ರಹಶಕ್ತಿಯುಳ್ಳ ಸಿದ್ಧ ಪುರುಷರೂ ಇದ್ದರೆಂಬದಕ್ಕೆ, ಈವರೆಗೆ ಕೊಟ್ಟಷ್ಟು ಅವರ ಮಹಿಮೆಗಳ ವರ್ಣನವು ಸಾಕಾಗಿರುವದು.

**ಅಪೂರ್ವ ಪಾದಪೂಜೆ**—ಬಾಲಭುಜಂಗಯೋಗಿಗಳ ಪಾದಪೂಜೆಯನ್ನು ಈ ವರೆಗೆ ಯಾರೂ ಮಾಡಲಿಲ್ಲವಷ್ಟೆ? ಜಮುಖಂಡಿಯ ಅಪ್ಪಾಸಾಹೇಬರೂ ಈ ವಿಷಯದಲ್ಲಿ ಅಸಮಾಧಾನ ಪಟ್ಟದ್ದು ವಾಚಕರಸ್ಮರಣದಲ್ಲಿರಬಹುದು, ಆದರೆ ಇಂತಹ ದುರ್ಲಭವಾದ ಪಾದಪೂಜೆಯಯೋಗವು, ಬಾಳಂಭಟ್ಟರೆಂಬವರಿಗೆ ಒದಗಿಬಂದದ್ದು, ಅವರ ಬಲವತ್ತರ ಪುಣ್ಯವನ್ನು ತೋರಿಸುತ್ತಿರುವದು ಇಂತಹ ಪುಣ್ಯವಂತರ ಪರಿಚಯುವನ್ನು ಮಾಡಿಕೊಡುವದು ಅವಶ್ಯವಾಗಿರುತ್ತದೆ. ಧಾರವಾಡ ಜಿಲ್ಲೆಯೊಳಗಿನ ರಾಣೇಬೆನ್ನೂರ ತಾಲೂಕಿನಲ್ಲಿ ಬ್ಯಾಡಿಗಿ ಎಂಬ ಹೆಸರಿನದೊಂದು ಗ್ರಾಮವಿರುವದು ಅಲ್ಲಿ "ಬಾಳಂಭಟ್ಟ ಶಿವಪೂಜಿ" ಎಂಬ ಹೆಸರಿನ ಒಬ್ಬ ಕಣ್ವಶಾಖೆಯ ಬ್ರಾಹ್ಮಣರು, ಹರಿಕೀರ್ತನದ ವ್ಯವಸಾಯದಿಂದ ಸುಪ್ರಸಿದ್ಧರಾದವರಿರುವರು ಅವರು ಬ್ಯಾಡಿಗಿಯಲ್ಲಿ ಶ್ರೀರಾಮದೇವರ ಪ್ರತಿಷ್ಠಾಪನೆ ಮಾಡಿಸಿ, ಎರಡು ತಪಗಟ್ಟಲೆ ಶ್ರೀರಾಮನವಮಿಯಉತ್ಸವವನ್ನು ಮಾಡುತ್ತಬಂದಿರುವರು! ಈ ಸತ್ಕಾರ್ಯ ಪ್ರವೃತ್ತಿಯು ಅವರಿಗೆ ಉಂಟಾಗಲಿಕ್ಕೂ, ಅವರು ಕೀರ್ತನಕಾರರೆಂದು ಪ್ರಸಿದ್ಧರಾಗಲಿಕ್ಕೂ ಅವರಿಗಾಗಿರುವ ದೊಡ್ಡ

ದೊಡ್ಡ ಸತ್ಪುರುಷರ ಅನುಗ್ರಹವೇ ಕಾರಣವಾಗಿರುವದು! ಅವರು ಮೊದಲು ಶ್ರೀಗಾಣಗಾಪುರದಲ್ಲಿ ಅನುಷ್ಠಾನಮಾಡಿ, ಶ್ರೀದತ್ತಾತ್ರೇಯನ ಪ್ರಸನ್ನತೆಪಡೆದರು ; ಆ ಮೇಲೆ ಲೋಕಾಪುರದ ಪರಮಹಂಸರ, ಹಾಗು ಬಾಲಭುಜಂಗಯೋಗಿಗಳ ಸೇವೆಮಾಡಿ, ಅವರಿಂದ ಅನುಗ್ರಹೀತರಾಗಿ ಅನ್ನದಾನದಯೋಗವನ್ನು ಪಡೆದರು ; ಬಳಿಕ ಹರಿಹರದ ಪರಮಹಂಸರ ಸೇವೆಯಿಂದ ಕೃತಾರ್ಥರಾದರು! ಹೀಗೆ ಮೂವರು ಮಹಾತ್ಮರ ಸೇವೆಯ ಅಮೋಘ ಪುಣ್ಯದಬಲದಿಂದಲೇ ಬಾಳಂಭಟ್ಟರಿಗೆ ಶ್ರೀಬಾಲಭುಜಂಗ ಯೋಗಿಗಳ ಪಾದಪೂಜೆಯಯೋಗವು ಕೆಳಗೆ ವರ್ಣಿಸಿರುವಂತೆ ಒದಗಿತು !

ಬಾಲಭುಜಂಗಯೋಗಿಗಳ ಪಾದಪೂಜೆಮಾಡುವ ಇಚ್ಛೆಯು ತಮಗೆ ಪ್ರಬಲವಾಗಿದ್ದರೂ, ಅದು ಸಾಧಿಸುವ ಸಂಭವವಿಲ್ಲವೆಂದು ಬಾಳಂಭಟ್ಟರಿಗೆ ಸಂಪೂರ್ಣವಾಗಿ ಗೊತ್ತಿತ್ತು ; ಆದರೂ ಆ ಭಾವಿಕರು ತಮ್ಮ ಇಷ್ಟಾರ್ಥವನ್ನು ಹೇಗಾದರೂ ಮಾಡಿ ಸಾಧಿಸಿಕೊಳ್ಳಬೇಕೆಂದು ಹೊಂಚುಹಾಕಿ ಕಾಲನಿರೀಕ್ಷಣ ಮಾಡುತ್ತಲಿದ್ದರು. ಹೀಗಿರುವಾಗ ಬಾಲಭುಜಂಗಯೋಗಿಗಳು ಗುಹೆಯ ಪ್ರದೇಶದಲ್ಲಿ ತಪಶ್ಚರ್ಯ ಮಾಡುತ್ತಿರುವಾಗ, ಒಂದು ರಾತ್ರಿ ಮುಸುಗು ತೆಗೆದು ಕಿಡಕಿಯಲ್ಲಿ ಕುಳಿತು ಕಾಲು ಇಳಿಬಿಟ್ಟುಕೊಂಡು ಹೊರಗೆ ಏನೋ ನೋಡುತ್ತ ಕುಳಿತಿರಲು, ಧೈರ್ಯಶಾಲಿಗಳಾದ ಬಾಳಂಭಟ್ಟರು ಒಂದು ತಂಬಿಗೆ ನೀರು ಸ್ವಾಮಿಗಳ ಪಾದಗಳ ಮೇಲೆ ಹಾಕಿ, ಪಾದಸ್ಪರ್ಶಮಾಡಿದರು! ಆಗ ಸ್ವಾಮಿಗಳು ತಟ್ಟನೆ ಹಿಂದಿರುಗಿ ಪುಣ್ಯಶಾಲಿಗಳಾದ ಬಾಳಂಭಟ್ಟರನ್ನು ನೋಡಿನಗುತ್ತ -- "ನಿಮ್ಮ ಇಚ್ಛೆಯು ಪೂರ್ಣವಾಯಿತೇ?" ಎಂದು ಪ್ರಶ್ನಮಾಡಲು, ಬಾಳಂಭಟ್ಟರು ಭಕ್ತಿಯಿಂದ ಕೈಜೋಡಿಸಿ -- "ಆಯಿತು ಮಹಾಸ್ವಾಮಿ, ತಮ್ಮ ಕೃಪೆಯಿಂದ ನನ್ನ ಇಚ್ಛೆಯು ಪೂರ್ಣವಾಯಿತು!" ಎಂದು ಹೇಳಿದರು ! ಸದ್ಭಾವದ ಬಲವೇ ಅಷ್ಟು ಗೌರವಶಾಲಿಯಾದದ್ದು! ಅಂತಹಬಲವು ಭಾವನಾಹೀನರಿಗೆ ಸರ್ವಥಾ ಉಂಟಾಗಲಾರದು. ಹನ್ನೆರಡುವರ್ಷ ಎಂಟು ತಿಂಗಳ ತಪಶ್ಚರ್ಯದಲ್ಲಿ ಅನ್ಯರು ಸ್ವಾಮಿಗಳ ಸ್ಪರ್ಶಮಾಡಿದ್ದು ಇದು ಎರಡನೆಯ ಸಾರೆಯೆಂದು ಹಿಂದೆ ಹೇಳಿದೆ.

**ತಪಶ್ಚರ್ಯದ ಸಾಂಗತೆಯು**—ಹೀಗೆ ಬಾಲಭುಜಂಗಯೋಗಿಗಳು ಅಂತರ್ಮುಖರಾಗಿ ಗವಿಯಪ್ರದೇಶದಲ್ಲಿ ಏಳುವರ್ಷತಪಶ್ಚರ್ಯ ಮಾಡಿ, ಒಟ್ಟಿಗೆ ತಮ್ಮ ಹನ್ನೆರಡುವರ್ಷಗಳ ತಪಶ್ಚರ್ಯವನ್ನು ಪೂರ್ಣ ಮಾಡಿದರು! ಆದರೆ ಆ ತಪಶ್ಚರ್ಯದ ಸಾಂಗತೆಗಾಗಿ ಅನ್ನಸಂತರ್ಪಣೆಯಾಗುವದು ಉಳಿಯಿತು, ಅವರು ಹಾಗೆ ಬ್ರಾಹ್ಮಣಸಂತರ್ಪಣ ಮಾಡಿಸಿ ತಪಶ್ಚರ್ಯದ ಸಾಂಗತೆಮಾಡದೆ, ಪುನಃ ತಪಶ್ಚರ್ಯವನ್ನು ಆರಂಭಿಸಿದರು! ತಪಸ್ಸು ಮುಗಿಸುವ ಪ್ರಸಂಗವಿದ್ದಲ್ಲಿ ಸಾಂಗತೆಯು; ಆದರೆ ತಪಸ್ಸು ಮುಗಿಸುವ ಇಚ್ಛೆಯೇ ಇಲ್ಲದಿರುವಾಗ ಅವರು ಸಾಂಗತೆಯನ್ನಾದರೂ ಯಾಕೆ ಮಾಡಬೇಕು? ಅಥವಾ ಅವರು ತಪಸ್ಸು ಮಾಡುತ್ತಿರುವಾಗಲೇ ಒಂದು ವಿಧದಿಂದ ಆಗಾಗ್ಗೆ ಭೂತತೃಪ್ತಿಯನ್ನು, ವಿಶೇಷವಾಗಿಬ್ರಾಹ್ಮಣಸಂತರ್ಪಣವನ್ನು ಮಾಡುತ್ತಬಂದಿದ್ದರೆಂದು ಹೇಳಬಹುದು. ಭುಜಂಗಸ್ವಾಮಿಗಳು ಮುಸುಕುತೆಗೆದು ಏಳುವದಿವಸ, ಮುಧೋಳದ ರಾಣಿಯವರಿಂದ ಒಂಟೆಯಮೇಲೆಹೇರಿ ಬಾಳೆಯಹಣ್ಣುಗಳು ಬರುತ್ತಿರುವದನ್ನು ಹಿಂದೆ ಹೇಳಿರುತ್ತದೆ; ಅದರಂತೆ ಜಮುಖಂಡಿಯ ಅಪ್ಪಾಸಾಹೇಬರೂ ಹಣ್ಣುಗಳನ್ನು ಕಳಿಸುತ್ತಲೇ ಇದ್ದರು. ಆ ಇಬ್ಬರು ಸಂಸ್ಥಾನಿಕರು ಕಳಿಸಿದ ಹಣ್ಣುಗಳನ್ನು ಸ್ವಾಮಿಗಳು ರಾತ್ರಿಯಲ್ಲ ಕೈಮುಟ್ಟಿಸುಲಿದು ಜನರಿಗೆ ತಿನಿಸುತ್ತ, ವಿನೋದದ ಮಾತುಗಳನ್ನು ಆಡುತ್ತ ರಾತ್ರಿಯನ್ನು ಕಳೆಯುತ್ತಲಿದ್ದರು! ಬ್ರಾಹ್ಮಣರು ಎಷ್ಟು ಹಣ್ಣು ತಿಂದರೂ ಸ್ವಾಮಿಗಳಿಗೆ ತೃಪ್ತಿಯಾಗದೆ, ಅವರು ಜುಲುಮೆಯಿಂದ ಹಣ್ಣುಗಳನ್ನು ತಿನಿಸುವಾಗ ಸಂತೋಷಪಡುತ್ತಿದ್ದರು! ಹೀಗೆ ಯಥೇಚ್ಛವಾಗಿ ಬ್ರಾಹ್ಮಣರು ಹಣ್ಣು ತಿಂದು ತೃಪ್ತರಾಗುವದೇ ಬ್ರಾಹ್ಮಣಸಂತರ್ಪಣೆಯೆಂತಲೂ, ಅದೇ ತಪಸ್ಸಿನ ಸಾಂಗತೆಯೆಂತಲೂ ಹೇಳಬಹುದು!

ಹೀಗೆ ಬಾಲಭುಜಂಗಯೋಗಿಗಳು ಮಾಡಿಸುತ್ತಬಂದಿದ್ದ ಫಲಸಂತರ್ಪಣೆಯೇ, ಆರಣ್ಯಕ ಪವಿತ್ರಬ್ರಾಹ್ಮಣರ ಪವಿತ್ರಸಂತರ್ಪಣವೆಂದು ಹೇಳತಕ್ಕದ್ದು; ಯಾಕಂದರೆ, ಆರಣ್ಯಕ ಬ್ರಾಹ್ಮಣರಪವಿತ್ರಾಹಾರವು ಕಂದಮೂಲಫಲಗಳು! ಅದೇ ಆಹಾರವನ್ನು ಆರಣ್ಯಕ ಪವಿತ್ರಬ್ರಾಹ್ಮಣರಾದ

ಬಾಲಭುಜಂಗಸ್ವಾಮಿಗಳು ತಾವು ಗ್ರಹಿಸುತ್ತಿದ್ದು, ಭಗವದ್ಗೀತೆಯಲ್ಲಿಯು– “ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ | ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ|| ” ಎಂಬ ಉಕ್ತಿಯಂತೆ, ತಾವು ಗ್ರಹಿಸುತ್ತಿದ್ದ ಫಲಗಳನ್ನೇ ಬ್ರಾಹ್ಮಣರಿಗೆ ಅರ್ಪಿಸಿ, ತಾವು ಸ್ವೀಕರಿಸುತ್ತಿದ್ದರು! ಅಂದಬಳಿಕ ಅದರಿಂದ ಈಶ್ವರತೃಪ್ತಿಯೂ, ಬ್ರಾಹ್ಮಣತೃಪ್ತಿಯೂ ಆಗುತ್ತಿರಲು, ಸ್ವಾಮಿಗಳು ಮಾಡುತ್ತಬಂದಿದ್ದ ಫಲಸಂತರ್ಪಣದಿಂದಲೇ ಅನುಷ್ಠಾನದ ಸಾಂಗತೆಯಾಗುತ್ತಲಿತ್ತೆಂದು ಶಾಸ್ತ್ರತಃ ತಿಳಿಯುಲಿಕ್ಕೆ ಬಾಧಕವೇನು? ಇನ್ನು ಬಾಲಭುಜಂಗಯೋಗಿಗಳು ಅನ್ನಸಂತರ್ಪಣಮಾಡದೆ ತಾವು ಅನ್ನಗ್ರಹಣಮಾಡಿದ್ದರೆ, ಅವರಿಗೆ ಒಂದುಬಗೆಯ ದೋಷವು ಬರಬಹುದಾಗಿತ್ತು; ಆದರೆ ಬಾಲಭುಜಂಗಯೋಗಿಗಳು ಅನ್ನಗ್ರಹಣಮಾಡದೆ ಕೇವಲ ಋಷಿಗಳ ಆಹಾರದಿಂದಲೇ ದೇಹವಿರುವತನಕ ತಪಶ್ಚರ್ಯಮಾಡಿ, ಕಡೆಗೆ ದೇಹತ್ಯಾಗಮಾಡಬೇಕೆಂದು ನಿಶ್ಚಯಿಸಿದ್ದರೆ, ಅವರು ಅನ್ನಸಂತರ್ಪಣೆಮಾಡುವಗೊಡವಿಗೆ ಹೋಗದಿರುವದರಲ್ಲಿ ಅಪರಾಧವೇನು? ಅಥವಾ ಆ ಬಾಲಯೋಗಿಗಳು ಉಪೋಷಣಮಾಡಿ ಪಾರಣೆಮಾಡದೆ ದೇಹವಿಡಲು ನಿಶ್ಚಯಿಸಿದ್ದನ್ನು ನೋಡಿದರೆ, ಅವರು ಲೋಕಕಲ್ಯಾಣಕ್ಕಾಗಿ ಪುನಃ ಜನ್ಮತಾಳುವ ನಿಶ್ಚಯಮಾಡಿರುವರೆಂದು ಹೇಳಿದರೂ ಹೇಳಬಹುದು.

---

## ೧೩ನೇ ವರ್ಷದ ತಪಶ್ಚರ್ಯವು.

# ೧೮ನೇ ಅಧ್ಯಾಯ

# ತಪಸ್ಸಿನ ರೀತಿಯೂ, ನಿರ್ಯಾಣವೂ!



**ತಪಸ್ಸಿನ ರೀತಿಯು**—ಹಿಂದಿನ ಅಧ್ಯಾಯದಲ್ಲಿ ಬಾಲಭುಜಂಗಯೋಗಿಗಳ ತಪಸ್ಸಿನ ಸಾಂಗತೆಯ ಸಂಬಂಧದಿಂದ ಮಾಡಿರುವ ನಮ್ಮ ಊಹಾಪೋಹವು, ಕೇವಲ ನಮ್ಮ ತರ್ಕವಲ್ಲದೆ, ಸ್ವಾಮಿಗಳ ನಿಜವಾದ ವಿಚಾರವೆಂದು ನಾವು ಸರ್ವಥಾ ಹೇಳಲಾರೆವು! ಯಾಕಂದರೆ, ಅಂತಹ ಯೋಗ್ಯತೆಯು ನಮ್ಮಂಥ ಕೇವಲ ಲೌಕಿಕಪಾಮರರಿಗೆ ಸರ್ವಥಾ ಬರಲಾರದು. ಬಾಲಭುಜಂಗಯೋಗಿಗಳು ಯಾವಕಾರಣದಿಂದಲೋ ತಮ್ಮ ಹನ್ನೆರಡುವರ್ಷದ ತಪಸ್ಸಿಗೇ ತಮ್ಮ ತಪಸ್ಸಿನಸಾಂಗತೆಮಾಡದೆ, ಹದಿಮೂರನೇ ವರ್ಷದ ತಪಶ್ಚರ್ಯವನ್ನು ಆರಂಭಿಸಿದರು; ಆದರೆ ಈ ಹದಿಮೂರನೆಯ ವರ್ಷದ ತಪಶ್ಚರ್ಯವನ್ನು ಐದನೆಯ ವರ್ಷದಂತೆ ಐದುದಿನ ಏಕಾಸನದಲ್ಲಿ ಕುಳಿತುಮಾಡದೆ, ಮೊದಲನೆಯ ವರ್ಷದಂತೆ, ಪ್ರತಿದಿವಸ ಹಗಲು ಹನ್ನೆರಡುತಾಸುಮಾತ್ರ ಮುಸುಕಿನಲ್ಲಿ ಕುಳಿತು ತಪಶ್ಚರ್ಯ ಮಾಡಿ, ರಾತ್ರಿ ಮುಸುಕುತೆಗೆದು ಹಣ್ಣುಕೊಡುತ್ತ, ಜನರೊಡನೆ ವಿನೋದದ ಭಾಷಣಮಾಡುತ್ತ ಕುಳಿತುಕೊಳ್ಳುತ್ತಿದ್ದರು. ಹೀಗೆ ಪುನಃ ತಪಶ್ಚರ್ಯವನ್ನು ಆರಂಭಿಸಿದ್ದು ಸ್ವಾಮಿಗಳ ಆಪ್ತೇಷ್ಟರಿಗೂ, ಲೋಕಾಪುರದವರಿಗೂ, ಉಳಿದ ಭಕ್ತಮಂಡಲಿಗೂ ಅಸಮಾಧಾನಕರವಾಯಿತು. ಅವರು ಸ್ವಾಮಿಗಳನ್ನು ಕುರಿತು—“ ಮಹಾಸ್ವಾಮಿ, ಇನ್ನು ತಪಶ್ಚರ್ಯದ ಸಾಂಗತೆಮಾಡಿ, ತಾವು ಬ್ರಾಹ್ಮಣರ ಪಂಗ್ತಿಯಲ್ಲಿ ಭೋಜನ ಮಾಡಬೇಕು ” ಎಂದು ಪ್ರಾರ್ಥಿಸತೊಡಗಿದರು. ಹೀಗೆ ಪ್ರಾರ್ಥಿಸುವವ

ರಲ್ಲಿ ಕುಂದರಗಿಯಗೌಡರು ಪ್ರಮುಖರಾಗಿದ್ದರು. ಅವರು ಸ್ವಾಮಿಗಳ ಬಳಿಗೆಬಂದು—“ಸ್ವಾಮಿಾ, ತಪಶ್ಚರ್ಯದ ಸಾಂಗತೆಗಾಗಿ ನಾನು ಅನ್ನ ಸಂತರ್ಪಣೆ ಮಾಡುವೆನು, ಅಪ್ಪಣೆಯನ್ನು ಕೊಡಬೇಕು” ಎಂದು ಪ್ರಾರ್ಥಿಸಿದರು. ಆಗ ಸ್ವಾಮಿಗಳು, “ಅನ್ನಸಂತರ್ಪಣವಾಗುವದು ಅಶಕ್ಯವು” ಎಂದು ಮನಸ್ಸಿನಲ್ಲಿ ತಿಳಕೊಂಡು, ಆ ಗೌಡರನ್ನು ಕುರಿತು— “ಗೌಡರೇ, ನೀವು ಲೋಕಾಪುರಕ್ಕೆ ಹೋಗಿ ಪರಮಹಂಸರನ್ನು ಪ್ರಾರ್ಥಿಸಿ, “ಅನ್ನಸಂತರ್ಪಣೆಯನ್ನು ಮಾಡಬಹುದೇ” ಎಂದು ಅವರನ್ನು ಕೇಳಿರಿ, ಅವರು ಅಪ್ಪಣೆಕೊಟ್ಟರೆ ಮಾಡಿರಿ” ಎಂದು ಹೇಳಿದರು. ಅದರಂತೆ ಆ ಗೌಡರು ಲೋಕಾಪುರಕ್ಕೆ ಹೋಗಿ ಪರಮಹಂಸರಿಗೆ ಸಾಷ್ಟಾಂಗವೆರಗಿ ಪ್ರಾರ್ಥಿಸಲು, ಆ ಗೌಡರಿಗೆ ಮೇಲಕ್ಕೇಳಲಿಕ್ಕೇ ಬರಲಿಲ್ಲ, ಅವರ ಹೃದಯದಲ್ಲಿ ಭಯವು ಉತ್ಪನ್ನವಾಯಿತು. ಈ ಲಕ್ಷಣಗಳ ಮೇಲಿಂದ ಅನ್ನ ಸಂತರ್ಪಣವು ನನ್ನ ಕೈಯಿಂದ ಆಗುವದಿಲ್ಲವೆಂದು ಆ ಗೌಡರು ತಿಳಿದುಕೊಂಡರೂ, ಸಂತರ್ಪಣೆಮಾಡುವ ನೆವದಿಂದ ಅವರು ಜನರಿಂದ ದುಡ್ಡು ಕೂಡಿಸಹತ್ತಿದರು; ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ.

ಹೀಗಿರುವಾಗ ಭುಜಂಗಸ್ವಾಮಿಗಳ ತಪಶ್ಚರ್ಯವು ಯಥಾಸ್ಥಿತವಾಗಿ ಸಾಗಿತ್ತು. ಆಗ ಸ್ವಾಮಿಗಳ ಆಪ್ತೇಷ್ಟರು ಸ್ವಾಮಿಗಳಿಗೆ—“ಇನ್ನು ನೀನು ತಪಸ್ಸಿನ ಸಾಂಗತೆಗಾಗಿ ಬ್ರಾಹ್ಮಣರ ಪಂಗ್ತಿಯಲ್ಲಿ ಕುಳಿತು ಊಟಮಾಡಿ ತಪಸ್ಸನ್ನು ಮುಗಿಸಿಬಿಡು; ಅಂದರೆ ಲಗ್ನಮಾಡಿಕೊಂಡು ದೇಶಸಂಚಾರಮಾಡುತ್ತ ಧರ್ಮಸ್ಥಾಪನೆ ಮಾಡಲಿಕ್ಕೆ ಮಾರ್ಗವಾಗುವದು” ಎಂದು ಪುನಃ ಪುನಃ ಹೇಳತೊಡಗಿದರು. ಲೋಕಾಪುರದ ಜನರೂ ಬಂದು ಪುನಃ ಪುನಃ ಹೀಗೆಯೇ ಪ್ರಾರ್ಥಿಸತೊಡಗಿದರು; ಆದ್ದರಿಂದ ಸ್ವಾಮಿಗಳು ಮನಸ್ಸಿನಲ್ಲಿ—“ಮುತ್ತ್ಯನು ತನ್ನ ಉಳಿದಿದ್ದ ಹನ್ನೆರಡು ವರ್ಷದ ತಪಶ್ಚರ್ಯವನ್ನು ಪೂರ್ಣಮಾಡಿ, ಆಮೇಲೆ ನಿನ್ನ ತಮ್ಮನನ್ನು ದತ್ತಕಮಾಡಿಕೊಂಡು, ಬೇಗನೆ ದೇಹತ್ಯಾಗಮಾಡಿ ನನ್ನ ಬಳಿಗೆ ಬಾ” ಎಂದು ಅಪ್ಪಣೆ ಮಾಡಿದ್ದಾನೆ; ಅಂದಬಳಿಕ ಅನ್ನಗ್ರಹಣಮಾಡಲಿಕ್ಕೂ, ಲಗ್ನಮಾಡಿಕೊಂಡು ದೇಶಸಂಚಾರಮಾಡಿ ಧರ್ಮಸ್ಥಾಪನೆ ಮಾಡಲಿಕ್ಕೂ

ಮುತ್ತ್ಯಯ್ಯನ ಆಜ್ಞೆ ಇಲ್ಲದಿರಲು, ಜನರ ಇಚ್ಛೆಯನ್ನು ಹೇಗೆ ಪೂರ್ಣ ಮಾಡಲಿಕ್ಕೆ ಬರುವದು? ವಿಚಾರಮಾಡಿ ನೋಡಿದರೆ, ಅನ್ನವೇ ಪ್ರಾಣಿಗಳ ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣವು; ಅಂದರೆ ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ; ಅನ್ನದಿಂದ ಪ್ರಾಣಿಗಳು ಜೀವಿಸುತ್ತವೆ, ಕಡೆಗೆ ಅನ್ನದಿಂದಲೇ ಪ್ರಾಣಿಗಳು ಸಾಯುತ್ತವೆ ಇದೇಮಾತನ್ನು ಶ್ರುತಿಯು— "ಅನ್ನಾದ್ಭೂತಾನಿ ಜಾಯಂತೇ, ಅನ್ನೇನಜಾತಾನಿ ಜೀವಂತಿ" ಇತ್ಯಾದಿಯಾಗಿ ಕಂಠರವದಿಂದ ಹೇಳುತ್ತದೆ. ಹೀಗೆ ಅನ್ನವು ಸಂಸಾರಚಕ್ರಕ್ಕೆ ಕಾರಣವಾಗಿರುವದರಿಂದ, ನಾನು ದೂರ್ವಾಸರಂತೆ ಅನ್ನಗ್ರಹಣ ಮಾಡಿಯೂ ಮಾಡದವನಂತೆ ಆಚರಿಸುವ ಆಯಾಸಕ್ಕೆ ಯಾಕೆ ಗುರಿಯಾಗಬೇಕು? ಸಂಸಾರಮೂಲವಾದ ಅನ್ನವನ್ನು ತ್ಯಜಿಸಿದ ಮಾನದಿಂದ, ಪ್ರಾಣಿಗಳ ಸ್ವಾತಂತ್ರ್ಯವು ಹೆಚ್ಚುವದು ಅನ್ನಗ್ರಹಣಮಾಡದವನು ಎಲ್ಲ ಕಡೆಗೂ ವಿಜಯಿಯಾಗುವನು. ತಪಸ್ವಿಯಾದ ನನಗೆ ಎಷ್ಟೋ ಬ್ರಹ್ಮನಿಷ್ಠರ ದರ್ಶನವಾಗಿರುವದು, ಎಷ್ಟೋ ಸಾಧು–ಸಂತರ ದರ್ಶನವಾಗಿರುವದು, ಎಷ್ಟೋ ಶ್ರೋತ್ರಿಯ ಬ್ರಾಹ್ಮಣರ ದರ್ಶನವಾಗಿರುವದು; ಮತ್ತು, ಅವರೆಲ್ಲರಿಗೂ ನಾನೇ ಕೈಯಿಕ್ಕಿ ಯಥೇಚ್ಛ ಫಲಸಮರ್ಪಣ ಮಾಡಿರುವೆನು. ಹೀಗೆ ಸತ್ಪಾತ್ರ ಫಲದಾನವಾದದ್ದರಿಂದ ಅನಂತ ಭೂತಸಂತರ್ಪಣೆಯಾಗಿ ನನ್ನ ತಪಸ್ಸಿನ ಸಾಂಗತೆಯಾಗಿ ಹೋಗಿದೆ. ಆದ್ದರಿಂದ ನಾನು ಇನ್ನು ದೇಹತ್ಯಾಗಮಾಡುವದೇ ಯೋಗ್ಯವು; ಇಲ್ಲದಿದ್ದರೆ ಆಪ್ತೇಷ್ಟರೂ, ಜನರೂ ನನಗೆ ಅನ್ನಗ್ರಹಣಮಾಡಲು ಒತ್ತಾಯ ಮಾಡತಕ್ಕವರೇ!

ಈ ನೀರೆಗೆಯ ಶಿವಯೋಗಿ ಜಂಗಸ್ವಾಮಿಗಳು ತಮ್ಮ ಬಳಿಯಲ್ಲಿದ್ದವರನ್ನು ಕುರಿತು —"ಮನುಷ್ಯನ ಆಯುಷ್ಯವು ನೀರ ಮೇಲಿನ ಗುಳ್ಳೆಯಂತೆ ಚಂಚಲವಾಗಿರುತ್ತದೆ; ಆದ್ದರಿಂದ ನಾನು ಈಗ ಕೃಷ್ಣನೆಂಬ ಹೆಸರಿನ ಐದು ವರ್ಷದ ನನ್ನ ಮಲತಮ್ಮನನ್ನು ದತ್ತಕ ತೆಗೆದುಕೊಂಡಿದ್ದೇನೆ." ಎಂದು ಹೇಳಿ, ಅದೇ ಅಭಿಪ್ರಾಯವನ್ನು ಬರೆದು ಸರಕಾರಕ್ಕೆ ತಿಳಿಸಿದರು. ಅದನ್ನು ನೋಡಿ ಅಲ್ಲಿ ಇದ್ದವರಿಗೆ ಬಹಳ ದುಃಖವಾಯಿತು! ಆಗ ಸ್ವಾಮಿ

ಗಳು ತಮ್ಮ ಆ ಭಕ್ತರನ್ನು ಸಮಾಧಾನಪಡಿಸಿ, ಈ ಸುದ್ದಿಯನ್ನು ಲೋಕಾಪುರದಲ್ಲಿರುವ ನಮ್ಮ ತಂದೆಯವರಿಗೆ ಸದ್ಯಕ್ಕೆ ತಿಳಿಸಬಾರದೆಂದು ಹೇಳಿದರು. ಬಳಿಕ ಅವರು ದೇಹಬಿಡುವದನ್ನು ನಿಶ್ಚಯಿಸಲು, ಅವರ ಮೈಯಲ್ಲಿ ಆಲಸ್ಯವುಂಟಾಯಿತು. ಈ ಸುದ್ದಿಯನ್ನು ಕೇಳಿದವರೆಲ್ಲರಿಗೂ ಅಸಮಾಧಾನವಾಯಿತು. ಹನ್ನೆರಡುವರ್ಷ ಎಂಟು ತಿಂಗಳ ಕಠಿಣ ತಪಶ್ಚರ್ಯದಲ್ಲಿ ದೇಹಾಲಸ್ಯದ ಹೆಸರುಕೂಡ ಗೊತ್ತಿಲ್ಲದ ಸ್ವಾಮಿಗಳಿಗೆ, ಈಗ ದೇಹಾಯಾಸವಾದ ಲಕ್ಷಣವು ಒಳ್ಳೆಯದಲ್ಲವೆಂದು ವಿವೇಕಿಗಳು ಭಾವಿಸಿದರು! ಅಲ್ಲದೆ, ಮೊದಲನೆಯವರ್ಷದ ತಪಶ್ಚರ್ಯದಂತೆಯೇ ಹದಿಮೂರನೆಯ ವರ್ಷದ ತಪಶ್ಚರ್ಯವ ಮಾಡಹತ್ತಿದ್ದರಿಂದ—"ಉದಯೇ ಸವಿತಾ ರಕ್ತೋರಕ್ತಶ್ಚಾಸ್ತಮಯೇತಥಾ" | ಎಂಬಉಕ್ತಿಯಂತೆ, ಅಂದರೆ, ಸೂರ್ಯನು ಉದಯಾಸ್ತ ಕಾಲಗಳೆರಡರಲ್ಲಿಯೂ ಏಕರೂಪನಾಗಿರುವನೆಂದು ಹೇಳಿರುವಂತೆ, ಸ್ವಾಮಿಗಳ ಆದ್ಯಂತ ಕಾಲಗಳ ತಪಸ್ಸಿನ ಏಕರೂಪತೆಯಿಂದ ಇನ್ನು ಬೇಗನೆ ಅವರು ದೇಹತ್ಯಾಗ ಮಾಡುವರೆಂದು ಜ್ಞಾನಿಗಳು ನಿಶ್ಚಯಿಸಿದರು!

ಹೀಗೆ ಸ್ವಾಮಿಗಳಿಗೆ ದೇಹಾಯಾಸವಾಗಲು, ಅವರು ತಮ್ಮ ಕಕ್ಕಂದಿರ ಮಕ್ಕಳಾದ ತಮ್ಮ ವಿಶ್ವಾಸದ ಪುಟ್ಟದೀಕ್ಷಿತರನ್ನು ಕರೆಸಿಕೊಳ್ಳಲು ಇಚ್ಛಿಸಿದರು. ಆ ಪುಟ್ಟದೀಕ್ಷಿತರು ಜಮುಖಂಡಿಯಲ್ಲ ಇರುತ್ತಿದ್ದರು. ಆಗ ಭುಜಂಗಸ್ವಾಮಿಗಳು ತಮ್ಮ ಬಂಧುಗಳಾದ ಆ ಪುಟ್ಟದೀಕ್ಷಿತರ ಕಡೆಗೆ ಒಬ್ಬ ಮನುಷ್ಯನನ್ನು ಕಳಿಸಲು ನಿಶ್ಚಯಿಸಿ, ಆತನ ಮುಂದೆ—"ನನಗೆ ಬಹಳ ಅಜಾರಿಯಾಗಿದೆ, ಕೂಡಲೆ ಹೊರಟು ಬರಬೇಕು" ಎಂದು ಹೇಳಿಕಳಿಸದೆ,—"ನನಗೆ ಅಜಾರಿಯಾಗಿದೆ, ಅಂಜೀರು ದ್ರಾಕ್ಷಿ ಮುಂತಾದ ಹಣ್ಣುಗಳನ್ನು ಕಳಿಸಬೇಕು, ಮತ್ತು ನೀವೂ ಹೊರಟುಬರಬೇಕು" ಎಂದು ಹೇಳಿಕಳಿಸಿದರು. ಮನುಷ್ಯನು ಜಮುಖಂಡಿಗೆ ಹೋಗಿ ಪುಟ್ಟದೀಕ್ಷಿತರಿಗೆ ಅದರಂತೆ ಹೇಳಲು, ಪುಟ್ಟದೀಕ್ಷಿತರು ಹಣ್ಣುಗಳನ್ನೂ, ಔಷಧವನ್ನೂ ಮನುಷ್ಯನ ಸಂಗಡಕೊಟ್ಟು, ನಾನೂ ನಾಳೆ ಬರುವೆನೆಂದು ಹೇಳಿಕಳಿಸಿದರು! ಅದರಂತೆ ಮನುಷ್ಯನು ಸ್ವಾಮಿ

ಗಳ ಬಳಿಗೆಬಂದು, ಹಣ್ಣುಗಳನ್ನೂ, ಔಷಧವನ್ನೂ ಕೊಟ್ಟು, ಪುಟ್ಟ ದೀಕ್ಷಿತರು ನಾಳೆ ಬರುವರಂತೆ" ಎಂದು ಹೇಳಿದನು. ಆಗ ಸ್ವಾಮಿಗಳು—"ಮುತ್ತ್ಯಯ್ಯನ ಇಚ್ಛೆಯೇ ಕಾರಣವಲ್ಲದೆ, ಅಲ್ಲಿ ಯಾರ ಆಟವೂ ನಡೆಯುವದಿಲ್ಲವು" ಎಂದರು! ಬರಬರುತ್ತ ಅವರ ದೇಹಾಲಸ್ಯವು ಹೆಚ್ಚಾಯಿತು. ಅವರಿಗೆ ಉದರರೋಗದ ಭಾವನೆಯಾಯಿತಂತೆ! ಈ ಸುದ್ದಿಯನ್ನು ಕೇಳಿ ಸ್ವಾಮಿಗಳ ಆಪ್ತೇಷ್ಟರೂ, ಲೋಕಾಪುರದ ಜನರೂ ಧಾಪಿಸಿ ಗವಿಗೆ ಬಂದು, ಸ್ವಾಮಿಗಳ ಸ್ಥಿತಿಯನ್ನು ನೋಡಿ, ಇನ್ನು ಇವರು ದೇಹಬಿಡುವದೇ ನಿಶ್ಚಯವೆಂದು ತಿಳಿದು ಎಲ್ಲರೂ ದುಃಖಿತರಾದರು! ಆಗ ಸ್ವಾಮಿಗಳು ಎಲ್ಲರನ್ನು ಸಮಾಧಾನಪಡಿಸಿ, ತಮ್ಮ ಬಂಧುವಾದ ಕೃಷ್ಣನೆಂಬ ಹೆಸರಿನ ಅತ್ಯಂತ ತೇಜಸ್ವಿಯಾದ ಸುಂದರ ಬಾಲಕನನ್ನು ವಾತ್ಸಲ್ಯದಿಂದ—"ತಮ್ಮಾ, ಇಲ್ಲಿ ಬಾ" ಎಂದು ಕರೆದರು. ಅದರಂತೆ ಆ ಬಾಲಕನು ಬರಲು, ಆತನ ಮುಖವನ್ನು ನೋಡಿ, ಆತನ ಬಲಹಸ್ತವನ್ನು ತನ್ನ ಬಲಹಸ್ತದಿಂದ ಹಿಡಿದುಕೊಂಡು, ಆತನನ್ನು ತಮ್ಮ ತೊಡೆಯಮೇಲೆ ಕುಳ್ಳಿರಿಸಿಕೊಂಡರು. ಆಮೇಲೆ ಅವರು ತಮ್ಮ ಕೊರಳೊಳಗಿನ ಸುಂದರವಾದ ಶಿಲಾಮಣಿಗಳ ಸರವನ್ನು ಆ ಬಂಧುವಿನ ಕೊರಳಲ್ಲಿ ಹಾಕಿದರು. ಬಳಿಕ ಧೂಪಾರತಿಯನ್ನೂ, ಭಸ್ಮವನ್ನೂ, ಸುಂದರವಾದ ಸಿಂಬೆಯನ್ನೂ ಆತನ ಕೈಯಲ್ಲಿ ಕೊಟ್ಟು, ಗುರುಸಾಂಪ್ರದಾಯದಂತೆ, ಮಂತ್ರವನ್ನು ಆತನ ಕಿವಿಯಲ್ಲ ಉಪದೇಶಿಸಿದರು! ಆಮೇಲೆ ಧೂಪಹಾಕಿ ಬಿರುದಾವಲಿಯನ್ನು ಉಚ್ಚರಿಸಿ ಕೂಡಿದ ಎಲ್ಲ ಜನರನ್ನು ಕುರಿತು—"ಇನ್ನು ಇವರೇ ನಿಮ್ಮೆಲ್ಲರ ಸ್ವಾಮಿಗಳು; ಆದ್ದರಿಂದ ಇವರನ್ನು ನೀವು ಸ್ವಾಮಿಗಳೆಂದು ತಿಳಿದು ನನ್ನನ್ನು ಮನ್ನಿಸಿದಂತೆ ಇವರನ್ನು ಮನ್ನಿಸಿರಿ" ಎಂದು ಹೇಳಿ ಸರ್ವರನ್ನು ಸಮಾಧಾನಗೊಳಿಸಿ ಪುನಃ ಮಲಗಿಕೊಂಡರು.

ಈ ಎಲ್ಲ ಕೃತಿಗಳನ್ನು ನೋಡಿ ಜನರಿಗೆ ಬಹಳ ದುಃಖವಾಯಿತು. ಅದರಲ್ಲಿಯೂ ಸ್ವಾಮಿಗಳ ಮಲತಾಯಂದಿರಾದ ಯಮುನವ್ವನವರಿಗೂ, ಸ್ವಾಮಿಗಳ ಅಕ್ಕಂದಿರಾದಕೃಷ್ಣವ್ವನವರಿಗೂ ಬಹಳದುಃಖವಾಯಿತು. ಅವರ ಕಣ್ಣುಗಳೊಳಗಿಂದ ಒಂದೇಸವನೆ ನೀರುಗಳು ಹೋಗಹತ್ತಿದವು. ಸ್ವಾಮಿ

ಗಳ ದೇಹವು ಉದರಭಾವನೆಯಿಂದ ಎಂಟು ದಿವಸ ಅಸ್ವಸ್ಥವಾಗಿದ್ದಾಗ್ಯ, ಅವರಿಬ್ಬರೇ ಸ್ವಾಮಿಗಳಿಗೆ, ಅವರನ್ನು ಮುಟ್ಟದೆ, ದೂರದಿಂದ ಆಹಾರ ವನ್ನು ಕೊಡುತ್ತಿದ್ದರು! ಈಗ ಸ್ವಾಮಿಗಳಿಗೆ ಅವಸಾನಕಾಲವು ಒದಗಿರಲು। ಅವರ ತಾಯಂದಿರಾದ ಯಮುನವ್ವನವರು ಸ್ವಾಮಿಗಳನ್ನು ಕುರಿತು ದುಃಖದಿಂದ ಕಂಠಬಿಗಿದಿರಲು,—"ಇನ್ನು ನಾನು ನಿನ್ನನ್ನು ಮುಟ್ಟಲೇ ನಪ್ಪಾ" ಎಂದು ಕೇಳಲು, ಸ್ವಾಮಿಗಳು—"ಇನ್ನು ಈ ಹಾದಿಯೇ ಬೇರೆ ಯಾಯಿತು, ಈಗ ನೀನು ನನ್ನನ್ನು ಮುಟ್ಟಬಹುದು" ಎಂದು ಹೇಳಿ ದರು! ಆಗ ಯಮುನವ್ವನವರು ಸ್ವಾಮಿಗಳನ್ನು ಮುಟ್ಟಿ ಅವರ ಶುಶ್ರೂಷೆ ಮಾಡತೊಡಗಿದರು. ಹೀಗೆ ಅನ್ಯರು ಸ್ವಾಮಿಗಳನ್ನು ಮುಟ್ಟಿದ್ದು ಮೂರ ನೆಯ ಸಾರೆಯೆಂಬದನ್ನೂ, ೧ನೆಯ ೨ನೆಯ ಸಾರೆ ಅನ್ಯರು ಮುಟ್ಟಿದ್ದನ್ನೂ ಈಮೊದಲೆ ಹೇಳಿದೆ. ಸ್ವಾಮಿಗಳ ನಿರ್ಯಾಣಕಾಲವು ಸಮೀಪಿಸಿತು. ಪ್ರಾಣೋತ್ಕ್ರಮಣದ ಸಂಕಟವು ಯಾರನ್ನೂ ಬಿಟ್ಟದ್ದಲ್ಲವೆಂಬದನ್ನು ತೋರಿಸಿ, ಜನನ–ಮರಣದ ದುಃಖವನ್ನು ತಪ್ಪಿಸಿಕೊಳ್ಳುವ ಉಪಾಯಮಾಡಲು ಜನರನ್ನು ಎಚ್ಚರಗೊಳಿಸುವದಕ್ಕಾಗಿ ಸ್ವಾಮಿಗಳು ಸಂಕಟಪಡುತ್ತ ನೆಲದಮೇಲೆ ಉರುಳಾಡಿದರಂತೆ! ಹನ್ನೆರಡು ವರ್ಷ ಎಂಟುತಿಂಗಳ ತಪಶ್ಚರ್ಯದ ಕಷ್ಟವನ್ನು ಸಹಿಸಿದ ಮಹಾತ್ಮರಿಗೆ, ಈಗಾದ ಕಷ್ಟವೂ ನಮ್ಮ ಕಲ್ಯಾಣಕ್ಕಾಗಿಯೇ ಎಂದು ತಿಳಿದು, ಮೈಮರೆಯದೆ ನಾವು ಎಚ್ಚರದಿಂದ ಸಂಸಾರಮಾಡತಕ್ಕದ್ದು! ಹೀಗೆ ಮಹಾತ್ಮರಾದ ಬಾಲ ಭುಜಂಗಯೋಗಿಗಳು, ಕೇವಲ ತಪಶ್ಚರ್ಯಕ್ಕಾಗಿಯೇ ಹುಟ್ಟಿ, ಕೇವಲ ತಪಶ್ಚರ್ಯಕ್ಕಾಗಿಯೇ ಬಾಳಿ, ತಪಶ್ಚರ್ಯಮಾಡುತ್ತಲೇ ದೇಹತ್ಯಾಗ ಮಾಡಿ, "ಬ್ರಾಹ್ಮಣರ ದೇಹಸಾರ್ಥಕತೆಯು ತಪಸ್ಸು" ಎಂಬದನ್ನು ಜಗ ತ್ತಿಗೆ ತೋರಿಸಿದರು! ಕಡೆಗೆ ಆ ಮಹಾತ್ಮರು ತಮ್ಮ ತಾಯಿಯ ತೊಡೆಯ ಮೇಲೆ ತಲೆಯಿಟ್ಟು, ಶಕೆ ೧೭೭೩ನೇಪ್ಲವನಾಮಸಂವತ್ಸರದ ಶ್ರಾವಣಶುದ್ಧ ಚತುರ್ಥಿ ರವಿವಾರದಿವಸ ಅವರು ತಮ್ಮ ಪಂಚ ಭೂತಾತ್ಮಕ ದೇಹ ವನ್ನು ಪರಿತ್ಯಜಿಸಿದರು!

ಹೀಗೆ ಸ್ವಾಮಿಗಳು ದೇಹತ್ಯಾಗಮಾಡಲು, ಆ ಗುಹೆಯ ಪವಿತ್ರ ಪ್ರದೇಶವು ಶೂನ್ಯವಾಯಿತು; ಜನರ ಎದೆಗಿಚ್ಚು ಹೆಚ್ಚಿತು! ಈ ಜಗತ್ತಿನಲ್ಲಿ ದೇಹಧಾರಣ ಮಾಡಿದವರು ಒಂದಿಲ್ಲೊಂದು ದಿನ ದೇಹತ್ಯಾಗ ಮಾಡಲೇ ಬೇಕಾಗುವದು. ಇದು ರಾಮಕೃಷ್ಣಾದಿ ಭಗವದವತಾರಗಳಿಗೆ ಬಿಡಲಿಲ್ಲ; ಶ್ರೀಶಂಕರಭಗವತ್ಪಾದಾದಿ ಧರ್ಮಸ್ಥಾಪಕರಿಗೆಬಿಡಲಿಲ್ಲ; ಮಹಾ ಮಹಾ ತಪಸ್ವಿಗಳಿಗೂ, ಸಾಧು–ಸತ್ಪುರುಷರಿಗೂ ಬಿಡಲಿಲ್ಲ! ಅವರಂತೆ ಬಾಲಭುಜಂಗಯೋಗಿಗಳು ತಮ್ಮ ಅಗಾಧ ತಪಸ್ಸಿನ ಕೀರ್ತಿಯನ್ನಿಟ್ಟು, ಅಂತರ್ಯ ಪರಿಶುದ್ಧ ಚೇತನವು ಬಾಹ್ಯೋಪಾಧಿಗೆ ನಿಲುಕದ್ದೆಂಬದರ ಸಿದ್ಧಾಂತವನ್ನು ತಮ್ಮ ಘೋರ ತಪಸ್ಸಿನಲ್ಲಿಯ ಶಾಂತತೆಯಿಂದ ಸಿದ್ಧಮಾಡಿ, ಇಹಲೋಕದ ತಮ್ಮ ಪವಿತ್ರತರ ಯಾತ್ರೆಯನ್ನು ಮುಗಿಸಿದರು! ಅಂದಿಗೆ ಜಮಖಂಡಿಯ ಅಪ್ಪಾಸಾಹೇಬರು ದೇಹವಿಟ್ಟು ಎರಡು ವರ್ಷಗಳಾಗಿದ್ದವು; ಮುಧೋಳದ ರಾಣಿಯವರು ಗತಿಸಿ ಒಂದು ವರ್ಷವಾಗಿತ್ತು!

ಭುಜಂಗಸ್ವಾಮಿಗಳ ಜನ್ಮವು ಶಕೆ ೧೭೯೬ರಲ್ಲಿ ಆಯಿತು. ಅವರು ತಮ್ಮ ತಪಶ್ಚರ್ಯವನ್ನು ತಮ್ಮ ಹದಿನಾಲ್ಕನೆಯವರ್ಷದ ವಯಸ್ಸಿನಲ್ಲಿ, ಅಂದರೆ ಶಕೆ ೧೮೧೦ಸರ್ವಧಾರಿ ಸಂವತ್ಸರದ ಕಾರ್ತಿಕ ಶುದ್ಧ ತ್ರಯೋದಶಿಯ ದಿವಸ ಪರಮಹಂಸರ ಬೈಲ ವೃಂದಾವನದ ಕಟ್ಟಿಯ ಬಲಗಡೆಯಲ್ಲಿ ಕುಳಿತು ಆರಂಭಮಾಡಿ, ಅದೇ ಸ್ಥಳದಲ್ಲಿಯೇ ಐದುವರ್ಷಗಳ ಅನುಷ್ಠಾನವು ಪೂರ್ಣವಾದಬಳಿಕ, ಅಂದರೆ ಶಕೆ ೧೮೧೫ನೆಯ ವಿಜಯ ಸಂವತ್ಸರದ ಕಾರ್ತಿಕ ಶುದ್ಧ ದ್ವಾದಶಿಯ ದಿವಸ ತಪಶ್ಚರ್ಯಕ್ಕಾಗಿ ಗುಹೆಗೆ ಹೋದರು. ಆ ಮೇಲೆ ಆ ಗುಹೆಯ ಬಳಿಯ ಧರ್ಮಶಾಲೆಯಲ್ಲಿ ಏಳುವರ್ಷ ಎಂಟು ತಿಂಗಳು ಅನುಷ್ಠಾನ ಮಾಡಿದಬಳಿಕ ಮೇಲೆ ಹೇಳಿದಂತೆ, ಶಕೆ ೧೮೨೩ ಪ್ಲವ ಸಂವತ್ಸರದ ಶ್ರಾವಣ ಶುದ್ಧ ಚತುರ್ಥಿ ರವಿವಾರ ದಿವಸ, ಅಂದರೆ ತಮ್ಮ ವಯಸ್ಸಿನ ೨೭ನೆಯವರ್ಷ ತಮ್ಮ ದೇಹವನ್ನು ತ್ಯಜಿಸಿದರು! ಆಗದತ್ತಕಮಕ್ಕಳಾಗಿದ್ದ ಮೊನ್ನೆಮೊನ್ನೆಗತಿಸಿದ್ದ, ಮೂರನೇ ಜ್ಞಾನೇಶ್ವರಸ್ವಾಮಿಗಳು ತೀರ ಚಿಕ್ಕವರಿದ್ದದ್ದರಿಂದ, ಸ್ವಾಮಿಗಳ ತಂದೆಯವರಾದ ತಮ್ಮಣದೀಕ್ಷಿತರೇ

ತಮ್ಮ ಮಕ್ಕಳಾದ ಆ ಬಾಲಭುಜಂಗಸ್ವಾಮಿಗಳ ಉತ್ತರಕಾರ್ಯಗಳನ್ನು ಘಟಪ್ರಭಾನದಿಯ ತೀರದಲ್ಲಿ ತೀರಿಸಿ, ಬ್ರಾಹ್ಮಣಸಂತರ್ಪಣ, ದಕ್ಷಿಣೆದಾನ ಗಳು, ಭೂತ ತೃಪ್ತಿ ಇವನ್ನು ಯಥಾಸ್ಥಿತವಾಗಿ ಮಾಡಿದರು! ಒಟ್ಟಿಗೆ, ಬಾಲಭುಜಂಗಯೋಗಿಗಳ ಮಂಗಲಕರವಾದ ಚರಿತ್ರವು ಕೇವಲ ಮೊನ್ನೆ ಮೊನ್ನಿನದಾಗಿದ್ದು, ಅದರ ಪ್ರಭಾವರೂಪವಾದ ಕುಠಾರವು, ಜನರ ಕಲಿಭಾ ವರೂಪವೃಕ್ಷದ ಬೊಡ್ಡೆಗೆ ಕಚ್ಚುಗಳನ್ನು ಹಾಕುವಂತಹದಾಯಿತೆಂಬದರಲ್ಲಿ ಸಂಶಯವಿಲ್ಲ! ಅಂತೇ ಈ ಚರಿತ್ರಕ್ಕೆ ಇಟ್ಟಿರುವ "ಕಲಿಕುಠಾರ" ವೆಂಬ ಹೆಸರು, ಪೀಠಸ್ಥ ಸ್ವಾಮಿಗಳ ಪ್ರಭಾವದ ಅವಿಚ್ಛಿನ್ನ ಪರಂಪರೆಯ ಮೂಲಕ ನಿಶ್ಚಯವಾಗಿ ಅನ್ವರ್ಥಕವಾಗಿರುವದು! ಈ ಮಂಗಲ ಚರಿತ್ರದ ಶ್ರವಣಾವಲೋಕನಮನನಗಳಿಂದ ಭಾವಿಕರಕಲಿಕಾಲುಷ್ಯದ ವಿಧ್ವಂಸ ವಾಗಿ, ಅವರ ಸಮಸ್ತ ಇಷ್ಟಾರ್ಥಗಳು ಪೂರ್ಣವಾಗಿ ಸಾಧಿಸುವವು; ಮತ್ತು ಈ ಚರಿತ್ರವು ಭಾವಿಕರಲ್ಲಿ ಜ್ಞಾನ–ವೈರಾಗ್ಯಗಳ ಉದಯವನ್ನು ನಿಶ್ಚಯವಾಗಿ ಮಾಡುವದೆಂಬದು ಅನುಭವದ ಮಾತಾಗಿರುತ್ತದೆ! ಅಂತಹ ಆ ಅನುಭವವನ್ನೂ, ಇಷ್ಟಾರ್ಥಪೂರ್ತಿಯನ್ನೂ, ಕಲಿಕಾಲುಷ್ಯನಾಶ ವನ್ನೂ ಮಹಾತ್ಮರಾದ ಪರಮಹಂಸರು ಎಲ್ಲರಿಗೂ ಒದಗಿಸಿಕೊಡಲಿ!

ಜಯಮಂಗಲಂ ನಿತ್ಯಶುಭಮಂಗಲಂ

**ಸಮಾಪ್ತ.**

---

# ೮ನೇ ತಲೆಯುವರಾದ

# ೩ನೇ ಜ್ಞಾನೇಶ್ವರ ಸ್ವಾಮಿಗಳು.



## ೧೯ನೇ ಅಧ್ಯಾಯ--ಸ್ವಪ್ನಸಂಭ್ರಮ

ಮಹಾ ತಪಸ್ವಿಗಳಾದ ೨ನೇ ಭುಜಂಗ ಸ್ವಾಮಿಗಳ, ಅಥವಾ ಬಾಲ ಭುಜಂಗಯೋಗಿಗಳ ಅವತಾರ ಸಮಾಪ್ತಿಯನ್ನು ಹಿಂದಿನ ಅಧ್ಯಾಯದಲ್ಲಿ ವರ್ಣಿಸಿದೆವು ಆ ಮಹಾತ್ಮರು ತಮ್ಮ ಫಲಾಹಾರದ ೧೨ವರ್ಷದ ಕಠಿಣತರ ತಪಶ್ಚರ್ಯವನ್ನು ಅನ್ನಸಂತರ್ಪಣೆಯಿಂದ ಸಾಂಗಗೊಳಿಸಿ, ಗೃಹಸ್ಥಾಶ್ರಮಿಗಳಾಗಿ ದೇಶಸಂಚಾರದಿಂದ ಲೋಕಕಲ್ಯಾಣಮಾಡಬೇಕೆಂದು ಎಲ್ಲರೂ ಇಚ್ಛಿಸುತ್ತಿದ್ದರು; ಆದರೆ ಪರಮಹಂಸರ ಉಳಿದಿದ್ದ ಹನ್ನೆರಡು ವರ್ಷಗಳ ತಪಶ್ಚರ್ಯವನ್ನು ಮುಗಿಸುವದಕ್ಕಾಗಿಯೇ ಅವರು ಹುಟ್ಟಿ ಬಂದದ್ದರಿಂದ, ಅವರು ಲೋಕಕಲ್ಯಾಣದ ಆ ತಪಶ್ಚರ್ಯದ ಹೊರತು ಹೆಚ್ಚಿನ ಕೆಲಸ ಮಾಡಲಿಲ್ಲವೆಂದು ಹೇಳಬೇಕಾಗುವದು. ಸೃಷ್ಟಿಯ ಕಾರ್ಯಗಳಲ್ಲಿ ಪರಮಾತ್ಮನ ಗೂಢಸಂಕೇತದಂತೆಯೇ ಆಗುತ್ತಿರುವದರಿಂದ, ಅವುಗಳ ವಿಷಯದ ಊಹಾಪೋಹವೂ, ತರ್ಕವಿತರ್ಕಗಳೂ ವ್ಯರ್ಥವೆಂತಲೇ ಹೇಳಬೇಕಾಗುವದು. "ಭವಿತವ್ಯಂ ಭವತ್ಯೇವ" ಎಂಬ ಸಿದ್ಧಾಂತದಂತೆ, ಕಾಲಕ್ಕನುಸರಿಸಿ ಆಗುವದು ಆಗಿಯೇ ತೀರುತ್ತದೆ. ಅದರಂತೆ, ಲೋಕಾಪುರ ಪೀಠದ ದಿವ್ಯಜ್ಯೋತಿಯು ಅಕಸ್ಮಾತ್ ಶಾಂತವಾಗಿ ಹೋಯಿತು! ಹೀಗೆ ನ್ಯಾಯನಿಷ್ಠುರನಾದ ಕಾಲಪುರುಷನು, ಪಕ್ಕನೆ ದೀಪಕಳೆದಂತಾಗಲು, ಎಲ್ಲ ಕಡೆಗೆ ಕತ್ತಲೆ ಮುಸುಕಿ ಯಾರಿಗೂ ಏನೂ ತೋಚದಂತಾಯಿತು.

ಶ್ರೀ ಭುಜಂಗಸ್ವಾಮಿಗಳು ದೇಹಬಿಡುವಾಗ ತಮ್ಮ ಮಲತಮ್ಮಂದಿರಾದ ಐದು ವರ್ಷದ ವಯಸ್ಸಿನ ಕೃಷ್ಣದೀಕ್ಷಿತರೆಂಬ ಹೆಸರಿನ ತೇಜಸ್ವಿ ಸುಂದರ ಬಾಲಕನನ್ನು ಪೀಠಕ್ಕೆ ಕುಳ್ಳಿರಿಸಿ, ಅವರಿಗೆ ಮೂರನೇ ಜ್ಞಾನೇಶ್ವರಸ್ವಾಮಿಗಳೆಂದು ಹೆಸರಿಟ್ಟು ಅನುಗ್ರಹಿಸಿದ ಸಂಗತಿಯನ್ನು ಈವೊದಲೆ ಹೇಳಿಡೆಯಷ್ಟೆ? ಲೋಕಾಪುರ ಪೀಠವನ್ನು ಈವರೆಗೆ ಇಬ್ಬರು ಜ್ಞಾನೇಶ್ವರ ಸ್ವಾಮಿಗಳು ಅಲಂಕರಿಸಿದ್ದರಿಂದ. ಇವರು ಮೂರನೇ ಜ್ಞಾನೇಶ್ವರ ಸ್ವಾಮಿಗಳಾದದ್ದು ಸ್ವಾಭಾವಿಕವೇ ಸರಿ. ಪರಮಹಂಸರ ಮುಂದಿನ ಏಳುತಲೆಗಳವರೆಗೆ ಜನ್ಮತಃ ಸಿದ್ಧಿಗಳೂ, ಜ್ಞಾನವೂ ಪ್ರಾಪ್ತವಾಗುವವೆಂದು ಮಹಾತ್ಮರಾದ ಅಜಮೀರ ಸಾಹೇಬರು ಪರಮಹಂಸರಿಗೆ ವರಪ್ರದಾನ ಮಾಡಿದ್ದನ್ನು ಹಿಂದಿನ ಜ್ಞಾನಯೋಗ "ಪ್ರಧಾನಖಂಡ"ವೆಂಬ ಒಂದನೆಯ ಖಂಡದಲ್ಲಿ ಹೇಳಿರುವೆವು; ಆದರೆ ಈಗ ಹೊಸದಾಗಿ ಪೀಠಸ್ಥರಾಗಿದ್ದ ೩ನೇ ಜ್ಞಾನೇಶ್ವರಸ್ವಾಮಿಗಳು ಎಂಟನೇ ತಲೆಯವರಾದದ್ದರಿಂದ, ವರಪ್ರದಾನದಂತೆ ಅವರಿಗೆ ತಟ್ಟನೆ ಸಿದ್ಧಿಗಳು ಪ್ರಾಪ್ತವಾಗಲಿಕ್ಕೆ ಬರುವಹಾಗಿಲ್ಲದಿದ್ದರೂ, ಕೇವಲ ಬಾಲಭುಜಂಗಯೋಗಿಗಳ ಅಗಾಧ ತಪಶ್ಚರ್ಯದ ಪುಣ್ಯಬಲದಿಂದ, ಪೀಠಾರೋಹಣ ಮಾಡಿದಕೂಡಲೆ ವಾಕ್‌ಸಿದ್ಧಿಯೂ, ನಿಗ್ರಹಾನುಗ್ರಶಕ್ತಿಯೂ ತಾವಾಗಿ ಈ ೩ನೇ ಜ್ಞಾನೇಶ್ವರಸ್ವಾಮಿಗಳನ್ನು ಆಶ್ರಯಿಸಿದವೆಂಬದು ಮುಂದಿನ ಅವರ ಚರಿತ್ರದಿಂದ ಗೊತ್ತಾಗುವದು.

ಈ ೩ನೇ ಜ್ಞಾನೇಶ್ವರ ಸ್ವಾಮಿಗಳಾದರೂ ಪೀಠಕ್ಕೆ ಕುಳಿತಾಗ ಕೇವಲ ಐದೇ ವರ್ಷದವರಿದ್ದದ್ದರಿಂದ, ಮಠದ ವ್ಯವಸ್ಥೆಯ ಯಾವತ್ತು ಭಾರವು, ಆ ಸ್ವಾಮಿಗಳ ತಂದೆಯವರಾದ ತಮ್ಮಣ್ಣದೀಕ್ಷಿತರ ಮೇಲೆಯೇ ಮತ್ತೆ ಬಿದ್ದಂತಾಯಿತು ಆದರೆ ಪುತ್ರವಿಯೋಗ ದುಃಖದಿಂದ ಅವರು ಕೇವಲ ಉದಾಸೀನಭಾವ ತಾಳಿದರು! ೭ನೆಯ ತಲೆಯವರಾದ ರಾಮಚಂದ್ರಸ್ವಾಮಿಗಳ ತರುವಾಯದಲ್ಲಿ, ಆ ಮಹಾತ್ಮರ ಭವಿಷ್ಯದಂತೆ ಹುಟ್ಟಿದ್ದ ಆ ಬಾಲಭುಜಂಗ ಯೋಗಿಗಳು ಐದೇ ವರ್ಷದವರಾಗಿರಲು, ತಮ್ಮಣ್ಣದೀಕ್ಷಿತರು ಅವರನ್ನು ಪೀಠಕ್ಕೆ ಕುಳ್ಳಿರಿಸಿ ಅವರನ್ನು ಕಟ್ಟಿಕೊಂಡು ಕಷ್ಟಪಟ್ಟು ದೇಶಸಂಚಾರಮಾಡಿದರು. ಮುಂದೆ ಆ ಬಾಲಭುಜಂಗಯೋಗಿಗಳು ತಪಸ್ಸಿದ್ಧರಾಗಿ ಇನ್ನುಮೇಲೆ ಅವರು ಮಠದ ಆಡಳಿತವನ್ನು ಕೈಕೊಂಡು ಲೋಕಾ

ನುಗ್ರಹ ಕಾರ್ಯವನ್ನು ಮಾಡುತ್ತ ತಮ್ಮನ್ನು ಸಂತೋಷಪಡಿಸಿ ನಿಶ್ಚಿಂತರಾಗಮಾಡುವರೆಂದು ಅವರ ತಂದೆಯವರಾದ ಆ ತಮ್ಮಣದೀಕ್ಷಿತರು ಮಾಡಿದ್ದರು; ಆದರೆ ಬಾಲಭುಜಂಗಯೋಗಿಗಳು ಹಿಂದೆಹೇಳಿದಂತೆ ೨೭ನೇವರ್ಷ ದೇಹಬಿಟ್ಟು ತಮ್ಮನ್ನು ನಡನೀರಲ್ಲಿ ಕೈಬಿಟ್ಟುಹೋದಂತೆ ಮಾಡಲು, ಪುತ್ರವತ್ಸಲರಾದ ತಮ್ಮಣದೀಕ್ಷಿತರಿಗೆ ಅತ್ಯಂತವಿಷಾದವಾಗಿ, ಅವರು ಮತ್ತೊಮ್ಮೆ ಲಿಸಿಂದನೂತದ್ವನ್ನೇ ನೂಲಲಾರದೆ, ಉದಾಸೀನರಾದದ್ದು ಆಶ್ಚರ್ಯವಲ್ಲ! ಅದುಸಾಂಸಾರಿಕರ ರೀತಿಯೇ ಆಗಿರುವದು!

ಮಹಾ ತಪಸ್ವಿಗಳಾದ ಬಾಲಭುಜಂಗಯೋಗಿಗಳು ತಮ್ಮ ಲೋಕವಿಖ್ಯಾತಿಗೆ ತಕ್ಕಂತೆ, ಮಠವನ್ನು ಧನಧಾನ್ಯ ಸಂಪನ್ನವಾಗಮಾಡಿದ್ದರೆ, ಯಾರಾದರೂ ಮಠದ ಆಡಳಿತವನ್ನು ಸಾಗಿಸಬಹುದಾಗಿತ್ತು. ದುಡ್ಡಿದ್ದವರ ವ್ಯವಸ್ಥೆಯನ್ನು ಮಾಡಲಿಕ್ಕೆ ಆಪ್ತೇಷ್ಟರಂತು ಇರಲಿ, ಏನೂ ಸಂಬಂಧವಿಲ್ಲದ ಹೊರಗಿನವರೂ ಮುಂದುವರಿಯುವರು; ಅಂಥ ಧನಿಕರು ತಮ್ಮವ್ಯವಸ್ಥೆ ಮಾಡಹೇಳಿದರೆ, ಸರಕಾರವುಕೂಡವ್ಯವಸ್ಥೆ ಮಾಡಬಹುದು; ಆದರೆ, ದರಿದ್ರರ ವ್ಯವಸ್ಥೆಯ ಗೊಡವಿಗೆ, ಹೊರಗಿನವರಂತು ಇರಲಿ, ಆಪ್ತೇಷ್ಟರೂ ಹೋಗುವದಿಲ್ಲ; ಸರಕಾರದ ಕಣ್ಣಂತು ದುಡ್ಡಿದ್ದವರ ಮೇಲೆಯೇ ಇರುವದು. ಅಂದಬಳಿಕ ಲೋಕಾಪುರದ ನಿಸ್ಪೃಹಿಯಾದ ಬಡಮಠದ ಭಾರವನ್ನು ಯಾರು ಹೊರಬೇಕು? ಭಾರಹೊತ್ತಕೂಡಲೆ ದೇಶಸಂಚಾರಕ್ಕೇ ಹೊರಡಬೇಕಾಗುತ್ತಿತ್ತು; ಆದ್ದರಿಂದ, ತಮ್ಮಣದೀಕ್ಷಿತರ ಚಿಂತೆಯನ್ನು ದೂರಮಾಡಲಿಕ್ಕೆ ಯಾರೂ ಮುಂದುವರಿಯಲಿಲ್ಲ. ಆಗ ತಮ್ಮಣದೀಕ್ಷಿತರು ತಮ್ಮ ಬಂಧುವಿನ ಮಕ್ಕಳಾದ ಕೃಷ್ಣದೀಕ್ಷಿತರಿಗೆ ಮಠದ ವ್ಯವಸ್ಥೆ ಮಾಡಹೇಳಿದರು. ಅದಕ್ಕೆ ಕೃಷ್ಣದೀಕ್ಷಿತರು—"ಕಾಕಾ, ಇದು ನನ್ನ ಯೋಗ್ಯತೆ ಮೀರಿದ ಕೆಲಸವು. ಪರಮಹಂಸರ ಮಠದಯೋಗಕ್ಷೇಮ ವಹಿಸಲು ಪರಮಹಂಸರೇ ಸಮರ್ಥರು! ಇನ್ನು ಹಿರಿಯರಾದ ನಿಮ್ಮ ಅಪ್ಪಣೆ ಮೀರುವದೂ ನನ್ನ ಧರ್ಮವಲ್ಲ; ಆದ್ದರಿಂದ ನಾನು ಪರಮಹಂಸರ ವೃಂದಾವನದ ಬಳಿಯಲ್ಲಿ, ಅಂದರೆ, ಬಾಲಭುಜಂಗಯೋಗಿಗಳು ಅನುಷ್ಠಾನವನ್ನು ಆರಂಭಿಸಿದ ಸ್ಥಳದಲ್ಲಿಯೇ ಶ್ರೀ ಗುರುಚರಿತ್ರದ ಸಪ್ತಾಹಮಾಡುವೆನು; ಆಗ ಪರಮ

ಹಂಸರ ಅಭಯವು ನನಗೆ ದೊರೆತಂತೆ ನನಗೆ ದೃಷ್ಟಾಂತವಾದರೆ, ನಿಮ್ಮ ಅಪ್ಪಣೆಪಾಲಿಸಲಿಕ್ಕೆ ನನಗೆ ಧೈರ್ಯವಾಗುವದು" ಎಂದು ಹೇಳಿದರು. ಅದಕ್ಕೆ ತಮ್ಮಣ್ಣದೀಕ್ಷಿತರೂ ಸಂತೋಷದಿಂದ ಒಪ್ಪಿಕೊಂಡದ್ದರಿಂದ, ಕೃಷ್ಣ ದೀಕ್ಷಿತರು ಶ್ರೀಗುರುಚರಿತ್ರದ ಸಪ್ತಾಹವನ್ನು ಆರಂಭಿಸಿದರು.

ಈಗ ಕೃಷ್ಣದೀಕ್ಷಿತರಿಗೆ ತಾರುಣ್ಯದ ಭರ ; ಅವರು ಈವರೆಗೆ ಶ್ರೀಗುರು ಚರಿತ್ರದ ಸಪ್ತಾಹವನ್ನು ಎಂದೂ ಮಾಡಿದ್ದಿಲ್ಲ; ಆದ್ದರಿಂದ ಸಪ್ತಾಹವನ್ನು ಪರಮಹಂಸರ ಸಮಾಧಿಯ ಹತ್ತರ ಆರಂಭಿಸದೆ ಮಠದಲ್ಲಿ ಆರಂಭಿಸ ಬೇಕೆಂದು ಎಲ್ಲರೂ ಅವರಿಗೆ ಹೇಳಹತ್ತಿದರು ; ಯಾಕಂದರೆ ಹಿಂದಕ್ಕೆ ಇಳ ಕಲ್ಲ ಆಚಾರ್ಯರು ಪರಮಹಂಸರ ವೃಂದಾವನದ ಬಳಿಯಲ್ಲಿ ಶ್ರೀಸತ್ಯ ನಾರಾಯಣವ್ರತಮಾಡಿ ಪಶ್ಚಾತ್ತಾಪ ಪಟ್ಟದ್ದರ ಅನುಭವವು ಅವರೆಲ್ಲರಿಗೂ ಇದ್ದಿತು ; ಆದರೆ ಕೃಷ್ಣದೀಕ್ಷಿತರು ಅದಕ್ಕೆ ಒಪ್ಪದೆ ಪರಮಹಂಸರ ವೃಂದಾ ವನದ ಬಲಕ್ಕೇ, ಹಿಂದಕ್ಕೆ ಬಾಲಭುಜಂಗಯೋಗಿಗಳು ಅನುಷ್ಠಾನವನ್ನು ಆರಂಭಿಸಿದ ಕಿರಿಕಟ್ಟೆಯ ಮೇಲೆಯೇ ಸಪ್ತಾಹವನ್ನು ಆರಂಭಿಸಲು ನಿಶ್ಚಯಿ ಸಿದರು. ಅವರು ಜನರನ್ನು ಕುರಿತು—ಚಿನ್ನಗುಂಡಿಯಗ್ರಾಮದ ನಮ್ಮ ಮನೆತನದ ಹದಿನಾಲ್ಕುವರ್ಷದ ವಯಸ್ಸಿನ ಹುಡುಗನ ಅನುಷ್ಠಾನಕ್ಕೆ ಅನುಕೂಲವಾದ ಪರಮಹಂಸರು, ನನ್ನ ಅನುಷ್ಠಾನಕ್ಕೆ ಪ್ರತಿಕೂಲವಾಗ ಬಹುದೆ? ಇದರ ಮೇಲೆಯೂ ನನ್ನ ಅನುಷ್ಠಾನಕ್ಕೆ ವಿಘ್ನಒದಗಿದರೆ, ಪರಮಹಂಸರನ್ನೇ ಮೊರೆಹೋಗುವೆನಲ್ಲದೆ, ಅನ್ಯಸ್ಥಳದಲ್ಲಿ ಸಪ್ತಾಹವನ್ನು ಆರಂಭಿಸುವದಿಲ್ಲ. ಅನುಷ್ಠಾನದಲ್ಲಿ ನನಗೆ ಅಂತಹವಿಘ್ನಒದಗಿದರೆ ದೇಹ ತ್ಯಾಗಮಾಡೇನು, ಆದರೆ ದೃಷ್ಟಾಂತವಾಗುವವರೆಗೆ ಅನುಷ್ಠಾನವನ್ನು ಮಾತ್ರ ಬಿಡಲಿಕ್ಕಿಲ್ಲ" ಎಂದು ಹೇಳಿದರು.

ಕೃಷ್ಣದೀಕ್ಷಿತರ ಈ ನಿಶ್ಚಯವನ್ನು ನೋಡಿ ಎಲ್ಲರೂ ಸುಮ್ಮನಾದರು. ಮರುದಿವಸ ಪರಮಹಂಸರ ಸಮಾಧಿಯ ಬಳಿಯಲ್ಲಿಯೇ ಕೃಷ್ಣದೀಕ್ಷಿತರ ಸಪ್ತಾಹಕ್ಕೆ ಆರಂಭವಾಯಿತು. ಅವರು ಪ್ರತಿದಿನ ಬೆಳಗಿನ ಆರುಗಂಟೆಗೆ ಕಾವಲಿಯಲ್ಲಿ ಸ್ನಾನವನ್ನು ಮಾಡುತ್ತಿದ್ದರು ; ಸಂಧ್ಯಾದಿ ನಿತ್ಯಕರ್ಮಗಳು ತೀರಿದ ಬಳಿಕ, ಅರ್ಘ್ಯಹೇಳುತ್ತ ಅವರ ಶ್ರೀಗುರುಚರಿತ್ರದ ಸಪ್ತಾಹಕ್ಕೆ ಆರಂ

ಭವಾಗುತ್ತಿತ್ತು. ಮಧ್ಯಾಹ್ನದವರೆಗೆ ಸಪ್ತಾಹಾನುಷ್ಠಾನವಾದ ಬಳಿಕ, ಮಧ್ಯಾಹ್ನಸಂಧ್ಯಾವಂದನ, ಆ ಮೇಲೆ ಮುಸುಕುಹಾಕಿಕೊಂಡು ಗುರೂಪದಿಷ್ಟಮಂತ್ರದ ಜಪ, ಮುಂದೆ ಎರಡುತಾಸುರಾತ್ರಿಗೆ ಜಪಮುಗಿದ ಬಳಿಕ ಉಪಾಹಾರ, ಈ ಕ್ರಮದಿಂದ ಮೂರುದಿನ ನಿರ್ವಿಘ್ನದಿಂದ ಸಪ್ತಾಹದ ಅನುಷ್ಠಾನವು ಸಾಗಿತು. ಇದನ್ನು ನೋಡಿ ಸಾಂಬಭಟ್ಟಜೋಸಿ ಗೋರೆ ಎಂಬವರು ಅಸೂಯದಿಂದಲೋ, ಬೇರೆಕಾರಣದಿಂದಲೋ ಅನುಷ್ಠಾನದ ೪ನೇದಿವಸ ತಮ್ಮಣದೀಕ್ಷಿತರನ್ನು ಕುರಿತು—"ದೀಕ್ಷಿತರೇ, ಕೃಷ್ಣದೀಕ್ಷಿತರು ತಮ್ಮ ಸಮಾಧಿಯ ಬಳಿಯಲ್ಲಿ ಅನುಷ್ಠಾನ ಮಾಡುವದು ಪರಮಹಂಸರಿಗೆ ಬೇಕಾಗಿಲ್ಲ. ಇನ್ನು ಕೃಷ್ಣದೀಕ್ಷಿತರು ತಮ್ಮ ಅನುಷ್ಠಾನವನ್ನು ನಿಲ್ಲಿಸಬೇಕೆಂದು ಪರಮಹಂಸರು ಸ್ಪಷ್ಟವಾಗಿ ನಿನ್ನೆ ನನ್ನ ಸ್ವಪ್ನದಲ್ಲಿ ಹೇಳಿರುವರು." ಎಂದು ಹೇಳಿದರು. ಆಗ ತಮ್ಮಣದೀಕ್ಷಿತರು ಕೃಷ್ಣದೀಕ್ಷಿತರನ್ನು ಕರೆಸಿ, ಸಾಂಬಭಟ್ಟನ ಸ್ವಪ್ನದ ಸಂಗತಿಯನ್ನು ಹೇಳಿ, ಸಮಾಧಿಯ ಬಳಿಯಲ್ಲಿ ಅನುಷ್ಠಾನ ಮಾಡುವದು ಬೇಡವೆಂದು ಹೇಳಿದರು; ಆದರೆ ದೃಢನಿಶ್ಚಯದ ಕೃಷ್ಣದೀಕ್ಷಿತರು ತಮ್ಮಣದೀಕ್ಷಿತರಿಗೆ—"ನನ್ನ ಅನುಷ್ಠಾನವು ಪರಮಹಂಸರ ಮನಸ್ಸಿಗೆ ಬಾರದಿದ್ದರೆ, ಅವರು ನನ್ನ ಸ್ವಪ್ನದಲ್ಲಿಯೇ ಬಂದು ಹೇಳುತ್ತಿದ್ದರು, ನಡುವೆ ಸಾಂಬಭಟ್ಟನ ಮಧ್ಯಸ್ಥಿಯೇಕೆ? ನಾನಂತು ಅನುಷ್ಠಾನದ ಆಸನವನ್ನು ಬದಲಿಸುವದಿಲ್ಲ" ಎಂದು ಸ್ಪಷ್ಟವಾಗಿ ಹೇಳಿದರು.

ಹೀಗೆ ಹೇಳಿ ಕೃಷ್ಣದೀಕ್ಷಿತರು ಪರಮಹಂಸರ ಸಮಾಧಿಯ ಬಳಿಯಲ್ಲಿಯೇ ೪ನೇದಿನದ ಅನುಷ್ಠಾನವನ್ನು ಮುಗಿಸಿದರು. ೫ನೆಯದಿನದ ಅನುಷ್ಠಾನವೂ ಪೂರ್ಣವಾಯಿತು. ಮುಂದೆ ೬ನೇದಿವಸ ಅನುಷ್ಠಾನ ಮುಗಿಸಿ ರಾತ್ರಿ ಏಳುವ ಮುಂದೆ, ಕೃಷ್ಣದೀಕ್ಷಿತರು ಕಟ್ಟೆಯ ಕೆಳಗೆ ಕಾಲ್ಲು ಇಡಹೋಗಲು, ಕಾಲು ನೆಲದಮೇಲೆ ಇಡಲಿಕ್ಕೆ ಬಾರದಾಯಿತು, ಮಡಚಲಿಕ್ಕೂ ಬಾರದಾಯಿತು! ಕಾಲಶೂಲಿಯು ಸಹಿಸಲು ಅಸಾಧ್ಯವಾಯಿತು. ಶೂಲಿಯನ್ನು ತಾಳಲಾರದೆ ಕೃಷ್ಣದೀಕ್ಷಿತರು ಸಣ್ಣಹುಡುಗರಂತೆ ದೊಡ್ಡದನಿಯಿಂದ ಅಳತೊಡಗಿದರು ಆಗ ತಮ್ಮಣದೀಕ್ಷಿತರೇ ಮೊದಲಾದವರು ಕೃಷ್ಣದೀಕ್ಷಿತರಿಗೆ—"ಪರಮಹಂಸರ ಮಾತು ಮೀರಿದ್ದರ

ಪರಿಣಾಮವಿದು. ಸಾಂಬಭಟ್ಟರ ಸ್ವಪ್ನವು ಸುಳ್ಳು ಎಂದು ಹೇಗೆ ಹೇಳಬೇಕು? ಈಗಾದರೂ ಸಮಾಧಿಯಬಳಿಯ ಅನುಷ್ಠಾನಬಿಟ್ಟು, ಮಠದಲ್ಲಿಯೇ ಅನುಷ್ಠಾನಮಾಡು; ಅರ್ಥಹೇಳದೆ ಬರಿಯ ಮೂಲಪಾರಾಯಣವನ್ನೇಮಾಡಿ, ಹೇಗಾದರೂ ಸಪ್ತಾಹವನ್ನು ಮುಗಿಸಿಬಿಡು" ಎಂದು ಹೇಳಿದರು. ಕೃಷ್ಣದೀಕ್ಷಿತರಿಗೆ ಮುಂದಕ್ಕೆ ಹೆಜ್ಜೆಯಿಡಲಿಕ್ಕೂ ಬಾರದಾಯಿತು. ಆಗ ಅವರು ಸಮಾಧಿಯಬಳಿಯಲ್ಲಿಯೇ ವ್ಯಥೆಪಡುತ್ತ ಕಾಲುಎತ್ತಿಕೊಂಡು ಕುಳಿತುಕೊಂಡರು; ಮನೆಯವರು ಕಾಲಿಗೆ ಎಣ್ಣೆತಿಕ್ಕಿದರು, ಬಿಸಿನೀರು ಹಾಕಿದರು; ಆದರೆ ಗುಣವಾಗಲಿಲ್ಲ ಅಂದು ಬೆಳತನಕ ನಿದ್ದೆಯಿಲ್ಲ; ಅವರು ರಾತ್ರಿ ದೊಡ್ಡದನಿಯಿಂದ ಅಳತೊಡಗಿದರು. ಆಗ ಮಠದಬಾಗಿಲ ಕಾಯುವ ಅಪ್ಪಣ್ಣನು ತಮ್ಮಣದೀಕ್ಷಿತರನ್ನು ಎಬ್ಬಿಸಿ "ಸ್ವಾಮಿ, ಕೃಷ್ಣದೀಕ್ಷಿತರು ಒಂದೇ ಸವನೆ ಅಳುತ್ತಿರುವರು; ಬೆಳತನಕ ನಿದ್ದೆಮಾಡಿರುವದಿಲ್ಲ" ಎಂದು ಹೇಳಲು, ತಮ್ಮಣದೀಕ್ಷಿತರು ಬಂದು ಮತ್ತೆ ಕಾಲಕಾಸಹತ್ತಿದರು; ಆದರೆ ಯಾತರಿಂದಲೂ ಗುಣವಾಗಲಿಲ್ಲ; ಈಗಡ್ಡಲದಲ್ಲಿಯೇ ಬೆಳಗಾಯಿತು. ಆಗ ಕೃಷ್ಣದೀಕ್ಷಿತರು ಕೋಲುಹಿಡಕೊಂಡು ಎದ್ದು ನಿಂತು ಒಂದೇಕಾಲಿನಿಂದ ಮೆಲ್ಲನೆಕಾವಲಿಗೆ ಸ್ನಾನಕ್ಕೆ ನಡೆದರು. ಕಾವಲಿಗೆಹೋಗಿ ಸ್ನಾನಕ್ಕೆ ಇಳಿದರೂ ಕಾಲಶೂಲಿಕಡಿಮೆಯಾಗಲಿಲ್ಲ; ಆದರೂ ಕೃಷ್ಣದೀಕ್ಷಿತರು ಅಂಜರಿಯದೆ ಸ್ನಾನಮಾಡಿ, ಇಂದು ಸಪ್ತಾಹ ಮುಗಿಸಲೇಬೇಕೆಂಬ ನಿಶ್ಚಯದಿಂದ ಗಟ್ಟಿ ಮನಸ್ಸು ಮಾಡಿ ಕಾವಲಿಯಲ್ಲ ಮುಣುಗಿಏಳಲು, ಅಕಸ್ಮಾತ್ ಶೂಲಿಯು ನಿಃಶೇಷವಾಗಿ ಹೋಗಿಬಿಟ್ಟಿತು!

ಈ ಅದ್ಭುತವನ್ನು ನೋಡಿ ಕೃಷ್ಣದೀಕ್ಷಿತರಿಗೆ ಪರಮಾಶ್ಚರ್ಯವಾಯಿತು. ತಮ್ಮ ಪರೀಕ್ಷೆಗಾಗಿಯೇ ಪರಮಹಂಸರು ಇಷ್ಟೆಲ್ಲ ಮಾಡಿದರೆಂದು ಅವರು ತಿಳಿದರು. ಅದರಿಂದ ಅವರಭಕ್ತಿವಿಶ್ವಾಸಗಳೂ, ಉತ್ಸಾಹವೂ ಹೆಚ್ಚಿದವು. ಅವರುಆರುದಿನಅನುಷ್ಠಾನಮಾಡಿದರೂ ಅವರಿಗೆ ಸ್ವಪ್ನಾದಿದೃಷ್ಟಾಂತಗಳೇನೂಆಗಿದ್ದಿಲ್ಲ. ಆಗ ಅವರು ಉತ್ಸಾಹಗೆಡದೆ, ಸ್ವಪ್ನವಾಗುವವರೆಗೆ ಹೀಗೆಯೇ ಸಪ್ತಾಹದ ಅನುಷ್ಠಾನ ಮಾಡಿಯೇತೀರಬೇಕೆಂದು ನಿಶ್ಚಯಿಸಿದರು. ಅವರ ಕಾಲಶೂಲಿಯಂತು ನಿಃಶೇಷವಾಗಿ ಹೋಗಿಬಿಟ್ಟಿತ್ತು; ಬರಬರುತ್ತ ಅವರ

ಭಕ್ತಿವಿಶ್ವಾಸಗಳು ಹೆಚ್ಚಿದವು. ಅವರು ಅಂದಿನ ಏಳನೆಯ ದಿವಸ ಯಥಾಸ್ಥಿತವಾಗಿ ತಮ್ಮ ನಿತ್ಯಕರ್ಮಗಳನ್ನು ತೀರಿಸಿಕೊಂಡು, ಅರ್ಧಹೇಳುತ್ತ ಅಂದು ಸಪ್ತಾಹವನ್ನು ಮುಗಿಸಿದರು! ಎರಡು ತಾಸುರಾತ್ರಿಗೆ ಜಪವೂ ಮುಗಿದು ಉಪಾಹಾರತೀರಿಸಿಕೊಂಡು ಅವರು ವಿಶ್ರಾಂತಿಹೊಂದತೊಡಗಿದರು. ನಾಳಿನಿಂದ ಮತ್ತೆ ಹೊಸ ಸಪ್ತಾಹವನ್ನು ಆರಂಭಿಸಬೇಕೆಂದು ಅವರು ನಿಶ್ಚಯಿಸಿದರು ತಮ್ಮಣದೀಕ್ಷಿತರೇ ಮೊದಲಾದವರಿಗೂ ಸಮಾಧಾನವಾಗಿ, ಅವರು ಕೃಷ್ಣದೀಕ್ಷಿತರ ನಿಕಟವನ್ನು ಹೊಗಳಿದರು. ನಿಶ್ಚಯದ ಬಲವು ಹೆಚ್ಚಿನದು! ಕೃಷ್ಣದೀಕ್ಷಿತರಿಗೆ ಅಂದು ಕಣ್ಣು ತುಂಬ ನಿದ್ರೆಬರಲು, ಬೆಳಗಿನ ಮುಂಜಾನೆ ಅವರಿಗೊಂದು ಸ್ವಪ್ನವು ಬಿದ್ದಿತು!

ಅವರ ಸ್ವಪ್ನದಲ್ಲಿ ಜಮುಖಂಡಿಯ ವೆಂಕಣ್ಣದೀಕ್ಷಿತರೊಪ್ಪ ಎಂಬವರು ಬಂದರು. ವೆಂಕಣ್ಣದೀಕ್ಷಿತರು ಸರ್ವಸಾಮಾನ್ಯ ಬ್ರಾಹ್ಮಣರಲ್ಲ; ಅಗ್ನಿಹೋತ್ರಿಗಳು, ಮಹಾ ತೇಜಸ್ವಿಗಳು, ಅತ್ಯಂತ ನಿಸ್ಪೃಹಿಗಳು, ಸತ್ಯಶೀಲರು! ಒಮ್ಮೆ ಜಮುಖಂಡಿಯ ಅಪ್ಪಾಸಾಹೇಬರು ಆ ದೀಕ್ಷಿತರ ಅನುಷ್ಠಾನಕ್ಕಾಗಿ ಬೆಳ್ಳಿಯ ಪಾತ್ರೆಗಳನ್ನು ಮಾಡಿಸಿ ಅವರಿಗೆ ದಾನವಾಗಿ ಕೊಟ್ಟು ಅವರನ್ನು ಕುರಿತು—"ದೀಕ್ಷಿತರೇ, ಈ ಪಾತ್ರೆಗಳನ್ನು ನಿಮ್ಮ ಅನುಷ್ಠಾನಕ್ಕಾಗಿ ಮಾಡಿಸಿಕೊಟ್ಟಿರುತ್ತದೆ. ಇವನ್ನು ಮಾರಬಾರದು, ಒತ್ತೀಇಡಬಾರದು; ನಿತ್ಯ ಅನುಷ್ಠಾನಕ್ಕೆ ಉಪಯೋಗಿಸಬೇಕು." ಎಂದು ಹೇಳಿದರು. ಆಗ ವೆಂಕಣ್ಣದೀಕ್ಷಿತರು ಅಪ್ಪಾಸಾಹೇಬರಿಗೆ—"ಅಪ್ಪಾಸಾಹೇಬ, ಈ ಪಾತ್ರೆಗಳು ನನಗೆ ಮುಟ್ಟಿದವು; ಇವನ್ನು ನಿಮ್ಮ ಖಜಾನೆಯಲ್ಲಿ ಇಡಿಸಿಬಿಡಿರಿ. ಯಾರಾದರೂ ಕೇಳಿದರೆ, ಇವು ವೆಂಕಣ್ಣದೀಕ್ಷಿತನ ಪಾತ್ರೆಗಳೆಂದು ಹೇಳಿರೆಂದರಾಯಿತು! ಅಪ್ಪಾಸಾಹೇಬ, ಅಗ್ನಿಹೋತ್ರಕ್ಕಾಗಿ ನನ್ನ ದೇಹವನ್ನು ಮಾರಲಿಕ್ಕೆ ನಾನು ಸಿದ್ಧನಿರುವಾಗ, ಈಬೆಳ್ಳಿಯ ಪಾತ್ರೆಗಳ ಹಂಗೇನು? ಆದ್ದರಿಂದ ಒಯ್ಯಿರಿ, ಇವನ್ನು ನಿಮ್ಮ ಖಜಾನೆಯಲ್ಲಿ ಇಡಿಸಿಬಿಡಿರಿ." ಎಂದು ಸ್ಪಷ್ಟವಾಗಿ ಹೇಳಿದರು! ಆಗ ಪಾಪಭೀರು ಅಪ್ಪಾಸಾಹೇಬರ ಮನಸ್ಸಿಗೆ ಹೇಗಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು. ಇಂತಹ ನಿಸ್ಪೃಹಿ ತೇಜಸ್ವಿ ಬ್ರಾಹ್ಮಣರ ತಪೋಬಲಕ್ಕೆ

ಅಪ್ಪಾಸಾಹೇಬರೇ ಏಕೆ, ದುಷ್ಯಂತನಂಥ ಸಾರ್ವಭೌಮರೂ ಅಂಜಿ ನಮ್ರ ಭಾವದಿಂದ ನಡೆದುಕೊಳ್ಳುತ್ತಿದ್ದರೆಂಬದು ಪುರಾಣ ಪ್ರಸಿದ್ಧವು. ವೆಂಕಣ್ಣದೀಕ್ಷಿತರು ಈಗಿನ ನಮ್ಮಂಥ ಜನಿವಾರದ ಬ್ರಾಹ್ಮಣರಿದ್ದಿಲ್ಲ!

ವೆಂಕಣ್ಣದೀಕ್ಷಿತರ ಸಶಾಸ್ತ್ರ ಆಚರಣೆಯು ಕಠಿಣತರದ್ದಾಗಿತ್ತು. ಅವರು ಅಂತ್ಯಜರ ದರ್ಶನವಾದಾಗ ಸ್ನಾನಮಾಡುತ್ತಿದ್ದರು. ಅವರು ಮನೆಬಿಟ್ಟು ಹೊರಡುವದೇ ಕಡಿಮೆ. ಸ್ನಾನಾದಿಗಳಿಗೆ ಹೋದಾಗ ಶಾಸ್ತ್ರವಿರುದ್ಧ ಸಂಗತಿಗಳು ಒದಗಿದರೆ, ಅದಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿಕೊಳ್ಳಲಿಕ್ಕೆ ಅವರು ತಪ್ಪುತ್ತಿದ್ದಿಲ್ಲ. ಒಮ್ಮೊಮ್ಮೆ ದೀಕ್ಷಿತರಿಗೆ ಸ್ಪೃಷ್ಟಾಸ್ಪೃಷ್ಟ ದೋಷ ಪರಿಮಾರ್ಜನಕ್ಕಾಗಿ ಒಂದೊಂದುದಿನ ಬಹಳ ಸಾರೆ ಸ್ನಾನಮಾಡಬೇಕಾಗುತ್ತಿತ್ತು. ಅದಕ್ಕಾಗಿ ಅವರು ಯಾರಿಗೂ ದೋಷವಿಡುತ್ತಿದ್ದಿಲ್ಲ, ಯಾರ ಮುಂದೆಯೂ ದೂರಿಕೊಳ್ಳುತ್ತಿದ್ದಿಲ್ಲ. ಹೀಗೆ ಎಷ್ಟೋದಿವಸ ನಡೆದು ಅದೊಂದು ಅವರ ಸ್ವಭಾವಗುಣವಾಗಿ ಹೋಗಿತ್ತು. ಇಂತಹ ಪರಿಶುದ್ಧಾಚರಣೆಯ ಬ್ರಾಹ್ಮಣರ ಲೋಪವು ದಿನದಿನಕ್ಕೆ ಹೆಚ್ಚುತ್ತಲಿದ್ದು, ಇದು ಶುದ್ಧ ಮೂರ್ಖತನದ ಆಚರಣೆಯೆಂದು, ಇದನ್ನು ಸಹಮೂಲ ಕಿತ್ತಿಒಗೆಯುವದಕ್ಕಾಗಿ ಎಷ್ಟೋ ಅಹಂಮನ್ಯ ಮೂರ್ಖಶಿಖಾಮಣಿಗಳಾದ ನಾಮಧಾರಿ ಬ್ರಾಹ್ಮಣರು ಯತ್ನಿಸುತ್ತಿರುವದು ಕಾಲ ಮಹಿಮೆಯೆಂದು ತಿಳಿಯತಕ್ಕದ್ದು. ಈ ಕಾಲಮಹಿಮೆಯನ್ನು ಬದಿಗೊತ್ತಿ ಕಷ್ಟ-ನಷ್ಟಗಳನ್ನು ಸಹಿಸುತ್ತ ತಮ್ಮ ಪರಿಶುದ್ಧಾಚರಣೆಯನ್ನು ಕಾಯ್ದುಕೊಳ್ಳುವ ಪುಣ್ಯವಂತರು, ಅಪರೂಪವಾಗಿಯೇ ಆಗಲೊಲ್ಲರೇಕೆ, ಎಲ್ಲ ಧರ್ಮದವರಲ್ಲಿಯೂ ಈಗಲೂ ಇರುವದು ಸಂತೋಷದ ಸಂಗತಿಯಾಗಿರುತ್ತದೆ. ಅವರವರ ಕರ್ಮಫಲಭೋಗಕ್ಕೆ ಅವರವರೇ ಬಾಧ್ಯಸ್ಥರು. ಇರಲಿ. ವೆಂಕಣ್ಣದೀಕ್ಷಿತರ ಈ ರೀತಿಯು ಜಮಖಂಡಿಯ ಅಪ್ಪಾಸಾಹೇಬರ ಕಿವಿಗೆ ಹೋಗಲು, ಆ ವರ್ಣಾಶ್ರಮ ಧರ್ಮಪಾಲನ ದಕ್ಷಪ್ರಭುವು, ತನ್ನ ಕರ್ತವ್ಯವೆಂದು ತಿಳಿದು ಒಬ್ಬ ಸಂಬಳದ ಆಳನ್ನು ದೀಕ್ಷಿತರ ಬಾಗಿಲಲ್ಲಿ ಇಟ್ಟುಬಿಟ್ಟನಂತೆ! ದೀಕ್ಷಿತರು ಸ್ನಾನಾದಿಗಳಿಗಾಗಿ ಮನೆಬಿಟ್ಟು ಹೊರಟ ಕೂಡಲೆ, ಆ ಆಳು ದೀಕ್ಷಿತರ ಮುಂದೆ ಹೊರಟು ಅವರಿಗೆ ತೊಂದರೆಯಾಗದಂತೆ ನೋಡಿಕೊಳ್ಳುತ್ತಿದ್ದನಂತೆ!

ವೆಂಕಣ್ಣದೀಕ್ಷಿತರು ಜಮಖಂಡಿಯೊಳಗಿನ ಶ್ರೀಮಂತರಾದ ಆನೆಖಿಂಡಿ ನಾಯಕರ ಮನೆತನದ ಪುರೋಹಿತರು; ಯಜಮಾನನ ಧರ್ಮಕಾರ್ಯಗಳ ಮಾರ್ಗದರ್ಶಕತ್ವವೂ, ಯಥಾರ್ಥಾಯಥಾರ್ಥಗಳ ನಿರ್ಣಯಶಾಲಿತ್ವವೂ ಪುರೋಹಿತರ ಕೆಲಸವಲ್ಲದೆ, ಜೀತದ ಆಳಾಗಿ ಯಜಮಾನನ ಮನೆಯ ಬಿದ್ದಕೆಲಸಮಾಡುವದು ಪುರೋಹಿತರ ಕೆಲಸವಲ್ಲವೆಂಬದನ್ನು ದೀಕ್ಷಿತರು ಗಟ್ಟಿಮುಟ್ಟೆಯಾಗಿ ತಿಳಿದವರು. ಆಗಿನ ಆನೆಖಿಂಡಿಯವರ ಮನೆತನದ ಯಜಮಾನರಾದ ಸೀನಪ್ಪನಾಯಕರು, ತಮ್ಮ ಪುರೋಹಿತರಾದ ವೆಂಕಣ್ಣದೀಕ್ಷಿತರ ನಿಸ್ಪೃಹವೃತ್ತಿಗೂ, ಸ್ಪಷ್ಟೋಕ್ತಿಗೂ ಬಹಳವಾಗಿ ಅಂಜುತ್ತಿದ್ದರು. ಪುರೋಹಿತರು ಸ್ವಸ್ಥ ಮಣೆಯಮೇಲೆ ಕುಳಿತು, ಕಾರ್ಯಗಳ ಮೇಲ್ವಿಚಾರಣೆ ಮಾಡತಕ್ಕದ್ದು; ಉಳಿದ ಮಾಡಿಸತಕ್ಕ ಕೆಲಸಗಳನ್ನೆಲ್ಲ ಆಶ್ರಿತ ಬ್ರಾಹ್ಮಣನು ಯಜಮಾನನಿಂದ ಮಾಡಿಸತಕ್ಕದ್ದು. ಈ ನಿಯಮವನ್ನು ವೆಂಕಣ್ಣದೀಕ್ಷಿತರ ತೇಜಸ್ಸಿನಲ್ಲಿ ಯಜಮಾನನಾದ ಸೀನಪ್ಪನಾಯಕನು ದಕ್ಷತೆಯಿಂದ ಪಾಲಿಸುತ್ತಿದ್ದನು. ಹೀಗಿರುವಾಗ, ಒಮ್ಮೆ ವೆಂಕಣ್ಣದೀಕ್ಷಿತರ ಮಗನಾದ ಚಿಕ್ಕ ವಯಸ್ಸಿನ ಕೃಷ್ಣದೀಕ್ಷಿತನು ಯಜಮಾನನ ಮನೆಗೆ ಊಟಕ್ಕೆ ಹೋಗಿದ್ದನು. ಅಂದು ಸೀನಪ್ಪನಾಯಕರ ತಮ್ಮನಾದ ಬಾಳಪ್ಪನಾಯಕನು ಆ ಚಿಕ್ಕ ಕೃಷ್ಣದೀಕ್ಷಿತನಿಗೆ ಸಹಜವಾಗಿ ಹುಡುಗನೆಂದು ತಿಳಿದು ಊಟಕ್ಕೆ ಎಲೆಹಾಕಲಿಕ್ಕೆ ಹೇಳಿದನು. ಈ ಸುದ್ದಿಯು ವೆಂಕಣ್ಣದೀಕ್ಷಿತರ ಕಿವಿಗೆ ಮುಟ್ಟಲು, ನಾಳಿನಿಂದ ಯಜಮಾನನ ಮನೆಗೆ ಯಾರೂ ಊಟಕ್ಕೆ ಹೋಗಲಾಗದೆಂದು ಕಟ್ಟಪ್ಪಣೆಯಾಯಿತು! ಮರುದಿವಸ ಪುರೋಹಿತರಾರೂ ಊಟಕ್ಕೆ ಬಾರದಾಗಲು, ಸೀನಪ್ಪನಾಯಕರು ಮನೆಯಲ್ಲಿ ವಿಚಾರನಡಿಸಿ ಬಾಳಪ್ಪನಾಯಕನ ತಪ್ಪು ಕೆಲಸಕ್ಕಾಗಿ ಪಶ್ಚಾತ್ತಾಪಪಟ್ಟು, ಕೈಯಲ್ಲಿ ಧಾಲಿತಕ್ಕೊಂಡು ವೆಂಕಣ್ಣದೀಕ್ಷಿತರ ಮನೆಗೆಹೋಗಿ ಅವರಿಗೆ ಭಯ–ಭಕ್ತಿಯಿಂದ ಸಾಷ್ಟಾಂಗನಮಸ್ಕಾರಮಾಡಿ ಕ್ಷಮೆಬೇಡಿಕೊಂಡರು! ಆಗ ದೀಕ್ಷಿತರು ಸೀನಪ್ಪನಾಯಕರಿಗೆ—"ಇಂದು ನಿನ್ನ ತಮ್ಮನು ಎಲೆಹಾಕಲಿಕ್ಕೆ ಹೇಳಿದನು, ನಾಳೆ ನಿನ್ನ ಮನೆಯ ವಿಧವೆಯರು ತಮ್ಮ ಸೀರೆ ಹಿಂಡಿಹಾಕಲಿಕ್ಕೆ ಹೇಳುವರು;" ಎಂದು ಎಚ್ಚರ

ಕೊಟ್ಟು, ಮಗನನ್ನು ಊಟಕ್ಕೆ ಕಳಿಸಿದರು! ಈಗ ಅಂಥ ಶ್ರದ್ಧಾವಂತ ಯಜಮಾನರೂ ಇಲ್ಲದಾದರು, ತೇಜಸ್ವಿಗಳಾದ ನಿಸ್ಪೃಹಿ ಪುರೋಹಿತರೂ ಇಲ್ಲದಾದರು!

ವೆಂಕಣ್ಣದೀಕ್ಷಿತರು ಅತ್ಯಂತ ಕರ್ಮದಕ್ಷರು. ಕರ್ಮವಿಧಿಯಲ್ಲಿ ತಪ್ಪಾದರೆ ಕ್ಷಮಿಸರು. ಒಮ್ಮೆ ಅವರು ವೈಶ್ವದೇವ ಕರ್ಮಮಾಡುತ್ತಿರುವಾಗ, ಅವರ ಸಾಧ್ವೀಕುಟುಂಬವು ಪ್ರಮಾದದಿಂದ ವೈಶ್ವದೇವ ಕುಂಡಕ್ಕೆ ಅಗ್ನಿಯನ್ನು ಹಾಕಲಿಕ್ಕೆ ಸ್ವಲ್ಪ ತಡಮಾಡಿದ್ದರಿಂದ, ಆ ಕರ್ಮದಕ್ಷ ದೀಕ್ಷಿತರು ಅದನ್ನು ಸಹಿಸದೆ, ವೈಶ್ವದೇವ ಕರ್ಮವನ್ನು ಅಲ್ಲಿಗೇ ಬಿಟ್ಟು, ಮಲ್ಲಾರಿ ಸಹಸ್ರನಾಮದ ಪಾರಾಯಣಮಾಡಹತ್ತಿದರು. ಆಗ ಆ ಸಾಧ್ವಿಯ ಕೋಮಲಹೃದಯವು ಭಯದಿಂದ ಕಂಪಿಸಿತು! ಆಗ ಆ ಸಾಧ್ವಿಯು ಪಾರಾಯಣ ಮುಗಿಯುವ ಹಾದಿಯನ್ನು ನೋಡುತ್ತ, ಪಶ್ಚಾತ್ತಾಪದಿಂದ ಬೇಯುತ್ತ, ಪಾರಾಯಣ ಮುಗಿದಕೂಡಲೆ ವಿನಯದಿಂದ—“ಅಗ್ನಿಯನ್ನು ಹಾಕಿರುವೆನು” ಎಂದು ಹೇಳಲು, ತಪಸ್ವಿಗಳಾದ ಶೀಘ್ರಕೋಪಿ ದೀಕ್ಷಿತರು—“ನಿನ್ನ ತಲೆಯ ಮೇಲೆ ಹಾಕಿಕೊಳ್ಳು” ಎಂಬ ನಿಷ್ಠುರವಚನದಿಂದ ಪತ್ನಿಗೆ ಶಾಸನಮಾಡಿದರು! ಈಗಿನ—“ಸ್ತ್ರೀ ದೇವಾಃ ಕಾಮುಕಿಂಕರಾಃ” ಜನರು ಸಾಧ್ವೀ ದೀಕ್ಷಿತಪತ್ನಿಯ ವಿಷಯದಲ್ಲಿ ಕನಿಕರಪಟ್ಟು, ದೀಕ್ಷಿತರ ಕಠೋರತನಕ್ಕಾಗಿ ದೋಷವಿಡಬಹುದು; ಆದರೆ ಒಬ್ಬಾನೊಬ್ಬ ಸಮರ್ಥ ಸಾರ್ವಭೌಮರಾಜನನ್ನು ಒಬ್ಬ ಬಡವನು ತನ್ನ ಭಕ್ತಿ ವಿಶೇಷದಿಂದ ತನ್ನ ಮನೆಗೆ ಬರಮಾಡಿಕೊಂಡಾಗ, ಆತನ ಆದರಸತ್ಕಾರದ ವಿಷಯದಲ್ಲಿ ಆತನೂ, ಆತನ ಮನೆಯವರೂ ಎಷ್ಟು ದಕ್ಷರಾಗಿರಬೇಕಾಗುವದೆಂಬದನ್ನು ಮನಸ್ಸಿನಲ್ಲಿ ತರುವ ವಿವೇಕಿಗಳಿಗೆ, ವಿಶ್ವದ ಸಾರ್ವಭೌಮನಾದ ಶ್ರೀಯಜ್ಞನಾರಾಯಣನನ್ನು ವೆಂಕಣ್ಣದೀಕ್ಷಿತರು ತಮ್ಮ ಮಂತ್ರಸಾಮರ್ಥ್ಯದಿಂದ ತಮ್ಮ ಮನೆಗೆ ಬರಮಾಡಿಕೊಂಡಿರಲು, ಆ ದೀಕ್ಷಿತರೂ, ಅವರ ಪರಿವಾರವೂ ಎಷ್ಟು ಕಾರ್ಯದಕ್ಷರಾಗಿರಬೇಕಾಗುವದೆಂಬದರ ಕಲ್ಪನೆಯು ಆಗಬಹುದು! ಬ್ರಾಹ್ಮಣ ಸಂಸ್ಕೃತಿಯ ಗಂಧವೂ ಗೊತ್ತಿಲ್ಲದ ಈಗಿನ ಹಾದಿ—ಬೀದಿಗಳೊಳಗಿನ

ಅಹಂಕಾರಿ ಕಗ್ಗ ಜನರು, ಏನೇನೋ ಮಾಡುತ್ತಿರುವದಕ್ಕಾಗಿ ಕನಿಕರ ವುಂಟಾಗುವದು!

ಇಂತಹ ಯೋಗ್ಯತಾಸಂಪನ್ನರಾದ ನಿಜವಾದ ಬ್ರಾಹ್ಮಣ ವೆಂಕಣ್ಣದೀಕ್ಷಿತರು ಕನಸ್ಸಿನಲ್ಲಿ ಬಂದದ್ದರಿಂದ, ಅನುಷ್ಠಾನದ ಕೃಷ್ಣದೀಕ್ಷಿತರಿಗೆ ಆನಂದವಾದದ್ದು ಸಹಜವು. ಆಗ ಆ ಅನುಷ್ಠಾನದ ಕೃಷ್ಣದೀಕ್ಷಿತರು ಹೆಗಲಮೇಲೆ ಹಸಿಬೆಹಾಕಿಕೊಂಡು, ಕೈಯಲ್ಲಿ ಬೆಳ್ಳಿಯ ತಾಬಾಣವನ್ನು ಹಿಡಕೊಂಡು ವೆಂಕಣ್ಣದೀಕ್ಷಿತರ ಮನೆಗೆ ಶುಕ್ಲವೃತ್ತಿಗೆ ಹೋದಂತಾಗಿತ್ತು. ಆಗ ವೆಂಕಣ್ಣದೀಕ್ಷಿತರು ತಮ್ಮ ಹೆಂಡತಿಯನ್ನು ಕರೆದು—"ಕೃಷ್ಣದೀಕ್ಷಿತನು ಶುಕ್ಲವೃತ್ತಿಗೆ ಬಂದಿದ್ದಾನೆ ನೋಡು, ಶುಕ್ಲವೃತ್ತಿಹಾಕು" ಎಂದು ಹೇಳಲು, ಆ ಸಾಧ್ವಿಯು ಬೊಗಸೆತುಂಬ ಅಕ್ಕಿಯನ್ನು ತಕ್ಕೊಂಡು ಬಂದು "ದ್ಯೌಃ ಶಾಂತೀರಂತರಿಕ್ಷಜ್ಞ ಶಾಂತಿಃ" ಇತ್ಯಾದಿ ವೇದಋಚೆಯನ್ನು ಅನ್ನುತ್ತ ಕೃಷ್ಣದೀಕ್ಷಿತರ ತಾಬಾಣದಲ್ಲಿ ಅವನ್ನು ಹಾಕಿದಳು. ಆಗ ಕೃಷ್ಣದೀಕ್ಷಿತರು ಆ ಅಕ್ಕಿಯನ್ನು ತಮ್ಮ ಹಸಿಬೆಯಲ್ಲಿ ಹಾಕಿಕೊಳ್ಳಲು, ಅವರಿಗೆ ಎಚ್ಚರವಾಯಿತು! ಆಗ ಅವರು ಸಮಾಧಾನವೃತ್ತಿಯಿಂದ ಹೊರಗೆ ನೋಡಿದಾಗ, ಅದೇ ಅರುಣೋದಯವಾಗಿತ್ತು! ಬಳಿಕ ಅವರು ತಮ್ಮಣ ದೀಕ್ಷಿತರನ್ನು ಕರೆದು ತಮ್ಮ ಸ್ವಪ್ನದ ಸಂಭ್ರಮವನ್ನು ಹೇಳಲು, ತಮ್ಮಣದೀಕ್ಷಿತರು—"ಅಪ್ಪಾ, ಇನ್ನು ನಾನು ಹೆಚ್ಚಿಗೆ ಹೇಳುವದೇನು? ವೆಂಕಣ್ಣದೀಕ್ಷಿತರ ಯೋಗ್ಯತೆ ನೀನು ಅರಿಯದ್ದಲ್ಲ! ಪರಮಹಂಸರಾದರೂ ಇದಕ್ಕೂ ಹೆಚ್ಚಿಗೆ ಏನು ದೃಷ್ಟಾಂತ ಕೊಡಬೇಕು? ಈ ಐದು ವರ್ಷದ ಕೃಷ್ಣನನ್ನು ನಿನ್ನ ಕೈಯಲ್ಲಿ ಕೊಟ್ಟಿದ್ದೇನೆ, ಮಠದ ಯಾವತ್ತು ವ್ಯವಸ್ಥೆಯು ನಿನ್ನನ್ನು ಕೂಡಿದೆ" ಎಂದು ಹೇಳಿದರು.

ಹೀಗೆ ತಮ್ಮಣದೀಕ್ಷಿತರು ಹೇಳಲು, ಸ್ವಪ್ನಸಮಾರಂಭದಿಂದ ಉತ್ಸಾಹಿತರಾದ ಕೃಷ್ಣದೀಕ್ಷಿತರು ಮಠದ ವ್ಯವಸ್ಥೆ ಮಾಡಲು ಒಪ್ಪಿಕೊಂಡು, ಮುಂದೆ ಸರಾಸರಿ ಎಂಟು ವರ್ಷದ ವಯುಸ್ಸಿನ ೩ನೇ ಜ್ಞಾನೇಶ್ವರಸ್ವಾಮಿಗಳೊಡನೆ ದೇಶಸಂಚಾರಕ್ಕೆ ಹೊರಟರು. ಕೃಷ್ಣದೀಕ್ಷಿತರು ಸತ್ಕರ್ಮನಿರತರಾಗಿದ್ದು, ವೇದ, ಯಾಜ್ಞಿಕ, ಕಾವ್ಯ, ಧರ್ಮಶಾಸ್ತ್ರ, ಜ್ಯೋತಿಷ ಇವು

ಗಳ ಅಧ್ಯಯನಮಾಡಿದವರಿರುವರು. ಅಲ್ಲದೆ, ಇವರಲ್ಲಿ ರಸಿಕತೆಯೂ, ಕವಿತಾಶಕ್ತಿಯೂ ಚನ್ನಾಗಿರುವವು. ಕನ್ನಡ-ಮಹಾರಾಷ್ಟ್ರ ಭಾಷೆಗಳಲ್ಲಿಯೂ ಇವರು ಚನ್ನಾಗಿ ನುರಿತವರಾಗಿರುವರು. ಸಂಸ್ಕೃತ, ಕನ್ನಡ, ಮಹಾರಾಷ್ಟ್ರ ಭಾಷೆಗಳಲ್ಲಿ ರಚಿಸಿರುವ ಇವರ ಪದ ಪದ್ಯಾದಿಗಳು ಬಹು ರಸವತ್ತಾಗಿರುವವು ಅಲ್ಲದೆ, ಇವರು ಉತ್ತಮ ವಾಙ್ಮಿಗಳಿದ್ದು, ಇವರ ಬಹುಶ್ರುತತತ್ವದ ಮೂಲಕ ಇವರ ವಿಷಯ ನಿರೂಪಣವು ಅತ್ಯಂತ ಚಿತ್ತಾಕರ್ಷಕವೂ, ಬೋಧಪ್ರದವೂ ಆಗಿರುವದು. ಇಂತಹ ಯೋಗ್ಯತೆಯವರು ಮಠದ ಆಡಳಿತವನ್ನು ಕೈಕೊಂಡದ್ದರಿಂದ, ಈಗಿನ ಜ್ಞಾನೇಶ್ವರ ಸ್ವಾಮಿಗಳು ಚಿಕ್ಕವರಿದ್ದರೂ ಮಠದ ಸಂಚಾರಾದಿ ಕಾರ್ಯಗಳು ಗೌರವದಿಂದ ಸಾಗಿದವು. ಕೃಷ್ಣದೀಕ್ಷಿತರು ರಚಿಸಿರುವ ಭಜನಪದ್ಧತಿಯು, ಅತ್ಯಂತ ಗೌರವದ್ದಾಗಿದ್ದು, ಅವರ ಮುದ್ರಿಕೆಯಿಂದ ರಚಿಸಿರುವ ವಿವಿಧ ಪದಪದ್ಯಗಳು ಭಕ್ತಿರಸವನ್ನು ಉಕ್ಕಿಸುತ್ತಿರುವವು. ಕನ್ನಡದ ಈ ಚರಿತ್ರಗ್ರಂಥದ ಈ ಮೂರನೇಭಾಗವು ಈ ಸ್ಥಿತಿಯಲ್ಲಿ ಸಿದ್ಧವಾಗಲಿಕ್ಕೆ, ಕೃಷ್ಣದೀಕ್ಷಿತರು ಒದಗಿಸಿ ಕೊಟ್ಟಿರುವ ವಿಶ್ವಸನೀಯವಾದ ವಿಷಯಸಂಗ್ರಹವೇ ಮುಖ್ಯ ಸಾಧನವೆಂದು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳಬೇಕಾಗುವದು. ಒಟ್ಟಿಗೆ, ಸನ್ಮಾನ್ಯರಾದ ಕೃಷ್ಣದೀಕ್ಷಿತರ ವಿದ್ವತ್ತೆಯೂ, ಬಹು ಶ್ರುತತ್ವವೂ, ಸ್ಮರಣಶಕ್ತಿಯೂ, ಮಠದ ವಿಷಯದ ಅವರ ಅತ್ಯಂತವಾದ ಶ್ರದ್ಧೆಯೂ ಬಣ್ಣಿಸತಕ್ಕವಾಗಿರುವವು. ಇವರ ಗುಣಗಳಲ್ಲಿಯ ಹೊಗಳತಕ್ಕ ಮುಖ್ಯಗುಣವೆಂದರೆ, ಸತ್ಯವಂತಿಕೆಯು. ಎಂತಹ ಕಠಿಣ ಪ್ರಸಂಗದಲ್ಲಿಯಾದರೂ, ಅವರು ಸತ್ಯಪಥದಿಂದ ಚಲಿಸದೆಯಿದ್ದದ್ದರಿಂದಲೇ ಇವರು ಸಂಕಟಮುಕ್ತರಾದ ಸಂಗತಿಯನ್ನು ಕೇಳಿ ನನಗೆ ಬಹಳ ಸಮಾಧಾನವೂ, ಆಶ್ಚರ್ಯವೂ ಆಗಿರುವವು. ಇವರ ಸಂಗಡ ಸಹಜಮಾತುಕಥೆಯಾಡುತ್ತಿರುವಾಗಾದರೂ ಇವರ ಸತ್ಯವಂತಿಕೆಯ ಒಗರು ಒಡೆದು ಕಾಣುವದು. ಒಟ್ಟಿಗೆ, ಬ್ರಾಹ್ಮಣಜಾತಿಯ ಮುಖ್ಯ ಗುಣಗಳಾದ ಸತ್ಯವಂತಿಕೆ, ಸರಳಭಾವ, ನೈತಿಕಧೈರ್ಯ, ಅಸ್ತಿಕ್ಯಬುದ್ಧಿ ಇವುಗಳಿಂದ ನಮ್ಮ ಕೃಷ್ಣದೀಕ್ಷಿತರು ಅಲಂಕೃತರಾಗಿರುವದು ಸಂತೋಷದ ಸಂಗತಿಯು!

ಲೋಕಾಪುರದ ಪರಮಹಂಸಪೀಠದ ಸ್ವಾಮಿಗಳು, ನಮ್ಮ ಧಾರವಾಡ ಪ್ರಾಂತಕ್ಕೆ ಎಂದೂ ಸಂಚಾರಕ್ಕೆ ಬಂದವರಲ್ಲ. ಬಾಲಭುಜಂಗ ಸ್ವಾಮಿಗಳ ಅಗಾಧ ತಪಶ್ಚರ್ಯದ ಕೀರ್ತಿಯು, ವರ್ತಮಾನಪತ್ರಾದಿಗಳ ಮುಖಾಂತರ ನಾಲ್ಕೂ ಕಡೆಗೆ ಹಬ್ಬುವವರೆಗೆ, ಲೋಕಾಪುರಪೀಠದ ಹೆಸರೂ ನಮ್ಮ ಪ್ರಾಂತದವರಿಗೆ ಗೊತ್ತಿದ್ದಿಲ್ಲವೆಂದು ಹೇಳಬಹುದು. ಇನ್ನೇ ಜ್ಞಾನೇಶ್ವರ ಸ್ವಾಮಿಗಳು ಎಂಟು ವರ್ಷದವರಿದ್ದಾಗ, ಬ್ಯಾಡಿಗಿಯ ಬಾಳಂಭಟ್ಟರು ಆ ಸ್ವಾಮಿಗಳನ್ನು ಸಂಚಾರಾರ್ಥವಾಗಿ ನಮ್ಮ ಪ್ರಾಂತಕ್ಕೆ ಮೊಟ್ಟಮೊದಲು ಕರೆದುಕೊಂಡು ಬಂದರು ಆಗ ಕೃಷ್ಣದೀಕ್ಷಿತರು ಸ್ವಾಮಿಗಳ ರಕ್ಷಕರಾಗಿ, ಅವರ ಸಂಗಡ ಇದ್ದರು. ಈವೊದಲು ಲೋಕಾಪುರ ಪೀಠದವರು ತಮ್ಮ ಪ್ರಾಂತವನ್ನು ಬಿಟ್ಟು ಎರಡನೆಯ ಪ್ರಾಂತಗಳಿಗೆ ಸಂಚಾರಕ್ಕಾಗಿ ಹೋದವರಲ್ಲವೆಂದು ಹೇಳಬಹುದು ಈ ಬಾಲಜ್ಞಾನೇಶ್ವರ ಸ್ವಾಮಿಗಳು ನಮ್ಮ ಗುರುಸ್ಥಾನವಾದ ಅಗಡಿಯ ಆನಂದವನಕ್ಕೆ, ಶ್ರೀಶೇಷಸದ್ಗುರುಗಳ ಜಯಂತಿಯ ಕಾಲಕ್ಕೆ ಬಂದಾಗ, ನಾನು ಅಗಡಿಯಲ್ಲಿಯ ಆ ಗುರುಸ್ಥಾನದಲ್ಲಿಯೇ ಇರುತ್ತಿದ್ದೆನು. ಆಗ ನಾನು ನೋಡಿದ ಸ್ವಾಮಿಗಳ ಬಾಲಸುಂದರ ತೇಜಃಪುಂಜ ಮೂರ್ತಿಯು, ಈಗಲೂ ನನ್ನ ಹೃದಯದಲ್ಲಿ ಸ್ಥಿರವಾಗಿರುತ್ತದೆ! ಆಗ ನಮ್ಮ ಶೇಷಸದ್ಗುರುಗಳು ಆ ಬಾಲಸುಂದರಮೂರ್ತಿಯನ್ನು ನೋಡಿ ಪರಮಾನಂದಪಟ್ಟು, ಭಕ್ತಿಪೂರ್ವಕವಾಗಿ ಅವರನ್ನು ಸತ್ಕರಿಸಿದರು. ಆ ಬಾಲ ಜ್ಞಾನೇಶ್ವರಸ್ವಾಮಿಗಳ ಮುಖವನ್ನು ನೋಡಿದಕೂಡಲೆ, ಜನರ ಚಿತ್ತಹರಣವಾಗಿ ಹೋಗಿ, "ಇವರು ಯಾರು?" ಎಂಬ ಪ್ರಶ್ನವು ನೋಡಿದವರ ಮುಖದಿಂದ ಸಹಜವಾಗಿ ತಪ್ಪದೆ ಹೊರಡುತ್ತಿತ್ತು!

ಇನ್ನೇ ಬಾಲಜ್ಞಾನೇಶ್ವರ ಸ್ವಾಮಿಗಳ ಮುಖವು ಸುಂದರ, ಅತ್ಯಂತ ತೇಜಃಪುಂಜ; ದೈವೀಸಾತ್ವಿಕ ಕಳೆಯು ಅದರಲ್ಲಿ ಉಕ್ಕುತ್ತಿತ್ತು! ಅವರ ಮೈಬಣ್ಣ ಕಾದಬಂಗಾರದಂತೆ ಮನೋಹರ; ಅವರ ನಿಲುವಿಕೆ ಎತ್ತರವಿದ್ದು, ಅವರ ಮೈಕಟ್ಟು ತೆಳ್ಳಗೆ ಇದ್ದಿತು. ಅವರು ಮೈಯಲ್ಲಿ ಹಾಕಿಕೊಂಡ ಕಫನಿ, ಕೊರಳಲ್ಲಿ ಧರಿಸಿದ ಶಿಲಾಮಣಿಗಳ ಸರ ಇವುಗಳಿಂದ ಅವರ ಸೌಮ್ಯ ಮುದ್ರೆಯ ಮುಖದ ಚಲ್ವಿಕೆಗೆ ಮತ್ತಿಷ್ಟು ಕಳೆಯೇರುತ್ತಿರಲು, ನೋಡು

ವವರಲ್ಲಿ ಭಕ್ತಿಯು ಸಹಜವಾಗಿ ಉತ್ಪನ್ನವಾಗುತ್ತಿತ್ತು. ಮೇಲೆ ಹೇಳಿದಂತೆ ಶ್ರೀಶೇಷಾಚಲ ಸಾಧುಗಳವರು ಇವರನ್ನು ಅತ್ಯಂತ ಪೂಜ್ಯಬುದ್ಧಿಯಿಂದ ಆದರಿಸಿದ್ದರಿಂದಂತು, ಇವರ ವಿಷಯದ ಜನರ ಭಕ್ತಿ ವಿಶ್ವಾಸಗಳಿಗೆ ಉತ್ತೇಜನ ದೊರೆತಂತಾಯಿತು! ಇವರ ಪ್ರತಿಮಾಪೂಜಾಪದ್ಧತಿ, ಇವರ ಸುಂದರ ಭಜನಕ್ರಮ, ಇವರ ಮುಸಲ್ಮಾನರ ಗುರುತ್ವದ ಲಾಂಛನದಬಿರುದಾವಲಿ ಇವನ್ನು ನೋಡಿ ಜನರ ಭಕ್ತಿಯಲ್ಲಿ ಜಿಜ್ಞಾಸಾಬುದ್ಧಿಯು ಉದಯವಾಗಲು, ಜನರು ಲೋಕಾಪುರಪೀಠದ ಚರಿತ್ರಶ್ರವಣಕುತೂಹಲರಾಗುತ್ತಿದ್ದರು! ಆಗ ಶ್ರೀಶೇಷಸದ್ಗುರುಗಳ ಜಯಂತಿಯ ಉತ್ಸವವಿದ್ದದ್ದರಿಂದ, ಸಹಜವಾಗಿಯೇ ಬಹುಜನರಿಗೆ ಸ್ವಾಮಿಗಳ ಪರಿಚಯವಾಗಿ, ಅವರ ಸಂಚಾರಕಾರ್ಯಕ್ಕೆ ಅನುಕೂಲವಾಯಿತು.

---

## ೨೦ನೇ ಅಧ್ಯಾಯ,

## ಒಂದು ಹೃದಯಭೇದಕ ಮಹಿಮೆ.

ನಮ್ಮ ಧಾರವಾಡಪ್ರಾಂತಕ್ಕೆ ಲೋಕಾಪುರದ ಸ್ವಾಮಿಗಳನ್ನು ಮುಟ್ಟಮೊದಲು ಸಂಚಾರಕ್ಕೆ ಕರಕೊಂಡುಬಂದವರು, ನಮ್ಮ ಬ್ಯಾಡಿಗಿಯ ಬಾಳಂಭಟ್ಟರೆಂದು ಈ ಮೊದಲೆ ಹೇಳಿದೆಯಷ್ಟೆ? ತಾವು ಕರಕೊಂಡು ಬಂದಂತೆ ಸ್ವಾಮಿಗಳ ಸಂಚಾರಕಾರ್ಯವು ಗೌರವದಿಂದ ಆಗಬೇಕೆಂದು ಬಾಳಂಭಟ್ಟರು ಮನಃಪೂರ್ವಕವಾಗಿ ಇಚ್ಛಿಸುತ್ತಿದ್ದದ್ದು ಸ್ವಾಭಾವಿಕವು; ಯಾಕಂದರೆ ಯಾವದೊಂದು ಕೆಲಸವನ್ನು ಮನಸ್ಸಿಗೆ ಹಚ್ಚಿಕೊಂಡು ಮಾಡುವದು ಬಾಳಂಭಟ್ಟರ ಸ್ವಭಾವವಾಗಿರುವದು. ಬಾಳಂಭಟ್ಟರು ಸ್ವಾಮಿಗಳನ್ನು ಮೊದಲು ತಮ್ಮ ಪರಿಚಯದ ಭಾವಿಕರಲ್ಲಿಯೇ ಕರ

ಕೊಂಡು ಹೋಗಬೇಕೆಂದು ನಿಶ್ಚಯಿಸಿದರು. ರಾಣೇಬೆನ್ನೂರ ತಾಲೂಕಿನೊಳಗಿನ ಹೂಲಿಹಳ್ಳಿ ಎಂಬ ಗ್ರಾಮದ ಕುಲಕರಣಿಯವರಾದ ಮಾರ್ತಂಡಪ್ಪನವರು, ಬಾಳಂಭಟ್ಟರ ಅತ್ಯಂತ ವಿಶ್ವಾಸಕ್ಕೆ ಪಾತ್ರರಾದವರು ಬಾಳಂಭಟ್ಟರ ಮೇಲೆ ಮಾರ್ತಂಡಪ್ಪನವರ ಭಕ್ತಿ ವಿಶ್ವಾಸಗಳು ಬಹಳ. ಬಾಳಂಭಟ್ಟರು ಪ್ರತಿವರ್ಷಮಾಡುತ್ತಲಿರುವ ಶ್ರೀರಾಮನವಮಿಯ ಉತ್ಸವದ ಸಂಚಾರದ ಕಾರ್ಯಕ್ಕೆ, ತಮ್ಮ ಕುದುರೆಯನ್ನು ಕೊಡುವದು ಎಷ್ಟೋ ವರ್ಷ ಮಾರ್ತಂಡಪ್ಪನವರ ಕುಲವ್ರತವಾದಂತಾಗಿತ್ತು. ಮಾರ್ತಂಡಪ್ಪನವರು ಅತ್ಯಂತ ಭಾವಿಕರು; ಉದಾರರು, ಸ್ನಾನಸಂಧ್ಯಾದಿ ಸತ್ಕರ್ಮನಿರತರು; ನಿಷ್ಠೆಯ ಶಿವಪೂಜಾದಕ್ಷಕರು. ಇವರ ಸೋಮವಾರದ ನಕ್ತ ಕಾಲದ ಶಿವಪೂಜೆಯು ಎಂದೂ ತಪ್ಪದಂತಹದು. ಇವರ ಶಿವಪೂಜೆಯ ನಿಷ್ಠೆಯ ಮಹಿಮೆಯ ಒಂದು ಉದಾಹರಣವನ್ನು ಈಗಿನ ನಾಸ್ತಿಕಕಾಲದಲ್ಲಿ ಬುದ್ಧಿಪೂರ್ವಕವಾಗಿ ಉಲ್ಲೇಖಿಸುವೆವು. ಒಮ್ಮೆ ಮಾರ್ತಂಡಪ್ಪನವರಿಗೆ ಹಲವು ತಿಂಗಳು ಚಳಿಜ್ವರ ನಿಯಮಿತ ಕಾಲದಲ್ಲಿ ಬರುತ್ತಿದ್ದು, ಸೋಮವಾರದ ದಿವಸ ಮಾತ್ರ ಅವರ ನಕ್ತಕಾಲದ ಶಿವಪೂಜೆಯಾದ ನಂತರ ಬರುತ್ತಿದ್ದವಂತೆ! ಇದೊಂದೇ ಮಾತಿನಿಂದ ಮಾರ್ತಂಡಪ್ಪನವರ ಕರ್ಮನಿಷ್ಠೆಯ ಗೌರವವು ಯಾರಿಗಾದರೂ ಒಡೆದು ಕಾಣಬಹುದು! ಮಾರ್ತಂಡಪ್ಪನವರ ಈ ಈಶ್ವರ ನಿಷ್ಠೆಯ ಬಲದಿಂದ, ಅವರು ಹಲವು ಗಂಡಾಂತರಗಳಿಂದ ಪಾರಾದದ್ದನ್ನು ಕೇಳಿದ್ದರೂ, ಸ್ಥಳಸಂಕೋಚಕ್ಕಾಗಿ ಅವನ್ನು ಇಲ್ಲಿ ಉಲ್ಲೇಖಿಸಲಾಗುವದಿಲ್ಲ.

ಇಂತಹ ಭಕ್ತಿ-ವಿಶ್ವಾಸದ ನಿಷ್ಠಾವಂತ ಮಾರ್ತಂಡಪ್ಪನವರ ಮನೆಗೆ, ಬಾಳಂಭಟ್ಟರು ೩ನೇ ಬಾಲಜ್ಞಾನೇಶ್ವರ ಸ್ವಾಮಿಗಳನ್ನು ಕರಕೊಂಡು ಹೋದರು ಬಾಲಜ್ಞಾನೇಶ್ವರಸ್ವಾಮಿಗಳು ಅಗಡಿಯ ಶ್ರೀಶೇಷಾಚಲ ಸಾಧುಗಳ ಜಯಂತಿಯ ಉತ್ಸವಕ್ಕೆ ಬಂದ ಸಂಗತಿಯು ನಾಲ್ಕು ಕಡೆಗೆ ಗೊತ್ತಾದದ್ದರಿಂದ, ಲೋಕಾಪುರದ ಸ್ವಾಮಿಗಳು ತಮ್ಮ ಮನೆಗೆ ಬಂದದ್ದು ಬಡವರ ಮನೆಗೆ ಭಾಗೀರಥಿ ಬಂದಹಾಗೆಯೆಂದು ಮಾರ್ತಂಡಪ್ಪನವರ ಭಾವನೆಯಾಯಿತು. ಸ್ವಾಮಿಗಳು ಬಂದಕೂಡಲೆ ಮಾರ್ತಂಡ

ಪ್ಪನವರ ಮನೆಯವರೆಲ್ಲರೂ ಅವರ ಆದರ ಸತ್ಕಾರಗಳನ್ನು ಭಕ್ತಿಪೂರ್ವಕವಾಗಿ ಮಾಡಿದರು. ಮಧ್ಯಾಹ್ನದಲ್ಲಿ ಸ್ವಾಮಿಗಳ ದೇವತಾರ್ಚನೆಯಾಯಿತು, ತೀರ್ಥವಾಯಿತು. ಅಷ್ಟರಲ್ಲಿ ಮಾರ್ತಂಡಪ್ಪನವರ ಕುಟುಂಬವಾದ ಸಾವಿತ್ರೀಬಾಯಿಯವರು ಕುಂಡಿಯನ್ನು ಹೊಸೆಯುತ್ತ ಕೋಣೆಯೊಳಗಿಂದ ಹೊರಗೆಬಂದರು. ಆಗ ಕೃಷ್ಣದೀಕ್ಷಿತರು ಅವರನ್ನು ನೋಡಿ—"ಇವರಿಗೆ ರೋಗಬಾಧೆಯೇನು ತೋರುವದಿಲ್ಲ; ಅಂದಬಳಿಕ ಈ ಸ್ಥಿತಿಯು ಯಾಕಾಗಿದೆ?" ಎಂದು ಕೇಳಲು, ಬಳಿಯಲ್ಲಿದ್ದವರು "ಇವರಿಗೆ ಪಿಶಾಚಬಾಧೆಯಿಂದ ಹೀಗಾಗಿದೆ" ಎಂದು ಹೇಳಿದರು!

ಲೋಕಾಪುರದ ಪರಮಹಂಸರ ಗುರುಗಳಾದ ಅಜಮೀರಸಾಹೇಬರು, ಪರಮಹಂಸರ ಸಂತತಿಯು ಏಳು ತಲೆಗಳವರೆಗೆ ಪೀಠಸ್ಥರಿಗೆ ಜನ್ಮತಃ ಸಿದ್ಧಿಗಳೂ, ಜ್ಞಾನವೂ ಪ್ರಾಪ್ತವಾಗುವವೆಂದು ವರಪ್ರದಾನ ಮಾಡಿದ್ದನ್ನು ಈಮೊದಲೆ ಹೇಳಿರುವೆವು. ಈಗ ಮಾರ್ತಂಡಪ್ಪನವರ ಮನೆಗೆ ಬಂದಿದ್ದ ಇನೇ ಬಾಲಜ್ಞಾನೇಶ್ವರ ಸ್ವಾಮಿಗಳು ಪರಮಹಂಸರಿಂದ ೬ನೇ ತಲೆಯವರಾಗಿದ್ದರೂ, ಇವರ ಹಿಂದಿನ ಮಹಾ ತಪಸ್ವಿ ಬಾಲಭುಜಂಗಯೋಗಿಗಳ ಅನುಗ್ರಹದಿಂದ ಅವರಿಗೆ ಸಿದ್ಧಿಗಳು ಜನ್ಮತಃ ಪ್ರಾಪ್ತವಾದದ್ದರಿಂದ, ಮಾರ್ತಂಡಪ್ಪನವರ ಮನೆಯಲ್ಲಿ ಆ ಸ್ವಾಮಿಗಳ ಸಿದ್ಧಿಯ ಪ್ರಭಾವವು ಪ್ರಕಟವಾಗುವ ಯೋಗವು ಒದಗಿ ಬಂತೆಂದು ಹೇಳಬೇಕಾಗುವದು. ಮಾರ್ತಂಡಪ್ಪನವರ ಮನೆಯವರು–"ಇವರಿಗೆ ಪಿಶಾಚಬಾಧೆಯಿಂದ ಹೀಗಾಗಿದೆ" ಎಂದು ಹೇಳಿದ್ದಕ್ಕೆ ಕೃಷ್ಣದೀಕ್ಷಿತರು–"ಪಿಶಾಚಬಾಧೆಯಾದರೆ ಕಾಲು ಹೋಗುವ ಕಾರಣವೇನೆಂ"ದು ಕೇಳಲು, ಮನೆಯವರಲ್ಲಿಯೊಬ್ಬರು ದೀಕ್ಷಿತರನ್ನು ಕುರಿತು–"ಸ್ವಾಮಿ, ಇವರ ಸಾದ್ಯಂತ ವೃತ್ತಾಂತವನ್ನು ಹೇಳುವೆನು ಕೇಳಿರಿ. ಇವರಿಗೆ ಯಾವುದೋ ಒಂದು ಪಿಶಾಚವು ಬಡಿದುಕೊಂಡಿರುವದು. ಅದು ಯಾವಾಗಾದರೂ ಮೈಮೇಲೆ ಬರುತ್ತಿರುತ್ತದೆ. ಒಮ್ಮೆ ಆ ಪಿಶಾಚವು ಇವರ ಮೈಮೇಲೆ ಬರಲು, ಇವರು ಯಾರಿಗೂ ಆಟೋಪಿಸದೆ, ಒಂದೇಸವನೆ ಓಡಹತ್ತಿದರು. ಬೆನ್ನುಹತ್ತಿ ಹಿಡಿಯಹೋದವರ ಕೈಗೆ ಸಿಗಲಿಲ್ಲ ಆಗ ಹೊಲದಲ್ಲಿ ನಟ್ಟುಕಡಿಯುತ್ತಿದ್ದ

ವರು ಇವರನ್ನು ಅಡ್ಡತರುಬಿ ಹಿಡಿಯಲು, ಆಗ ಇವರು ನೆಲಕ್ಕೆ ಕುಳಿತವರು ಕುಳಿತೇಬಿಟ್ಟರು; ತಿರುಗಿ ಇವರಿಗೆ ಮೇಲಕ್ಕೆ ಏಳಲಿಕ್ಕೆ ಬರಲಿಲ್ಲ. ಅಂದಿನಿಂದ ಇವರು ಹೀಗೆ ಕುಂಡಿಯನ್ನು ಹೊಸೆಯುತ್ತಿರುವರು” ಎಂದು ಹೇಳಿದರು ಅದನ್ನು ಕೇಳಿ ಕೃಷ್ಣದೀಕ್ಷಿತರೂ ಸುಮ್ಮನಾದರು.

ಮುಂದೆ ಊಟಉಡಿಗೆಗಳಾದವು, ಎಲ್ಲರೂ ವಿಶ್ರಮಿಸಿದರು. ಬಾಳಂಭಟ್ಟರು ಸ್ವಾಮಿಗಳನ್ನು ಸಂಚಾರಕ್ಕೆ ಕರಕೊಂಡು ಬಂದವರಾದದ್ದರಿಂದ, ಅವರ ಮನಸ್ಸಿನಲ್ಲಿ ಸ್ವಾಮಿಗಳಿಗೆ ವಿಶೇಷ ದ್ರವ್ಯಲಾಭವಾಗಬೇಕೆಂಬ ಲೌಕಿಕ ವಿಚಾರವು ಸ್ವಾಭಾವಿಕವಾಗಿಯೇ ಬಂದಿತು. ಆಗ ಅವರು ಮಾರ್ತಾಂಡಪ್ಪನವರನ್ನು ಕುರಿತು—“ಮಾರ್ತಾಂಡಪ್ಪಾ, ನಿನ್ನ ಮನೆಗೆ ದೊಡ್ಡವರು ಬಂದಿರುವರು. ಅದರಲ್ಲಿ ಕೃಷ್ಣದೀಕ್ಷಿತರು ಅನುಷ್ಠಾನಿಕರು; ಸ್ವಾಮಿಗಳ ಮಹಿಮೆಯ ಬೆಂಬಲವು ಅವರಿಗಿದೆ; ಆದ್ದರಿಂದ ನೀನು ಕೃಷ್ಣದೀಕ್ಷಿತರನ್ನು ಪ್ರಾರ್ಥಿಸಿ, “ನನ್ನ ಹೆಂಡತಿಯ ಪಿಶಾಚಬಾಧೆಯ ನಿವಾರಣಕ್ಕಾಗಿ ಒಂದು ಯಂತ್ರವನ್ನು ಬರೆದು ಕಟ್ಟಿರಿ” ಎಂದು ಹೇಳಿಕೊಳ್ಳು,” ಎಂದುಹೇಳಿದರು. ಈವರೆಗೆ ಮಾಡಿದ ವಿವಿಧ ಯತ್ನಗಳೆಲ್ಲನಿಷ್ಫಲವಾಗಿದ್ದವು; ಅದರಿಂದಬಾಳಂಭಟ್ಟರಮಾತಿನಲ್ಲಿ ಮೊದಲಿಗೆಮಾರ್ತಾಂಡಪ್ಪನವರಿಗೆ ವಿಶ್ವಾಸವಾಗಲಿಲ್ಲ; ಆದರೆ ಬಾಳಂಭಟ್ಟರು ಮಠದಮಹಿಮೆ ಹೇಳಿದ್ದರಿಂದಲೂ, ಸ್ವಾಮಿಗಳವಿಷಯದ ಭಕ್ತಿಯು, ಅಗಡಿಯಜಯಂತಿಗೆ ಹೋಗಿದ್ದಾಗ್ಗೆ ಆ ಮಾರ್ತಾಂಡಪ್ಪನವರ ಮನಸ್ಸಿನಲ್ಲಿ ಸ್ವಾಭಾವಿಕವಾಗಿ ಉತ್ಪನ್ನವಾದದ್ದರಿಂದಲೂ ಅವರು ಬಾಳಂಭಟ್ಟರ ಮಾತಿಗೆ ಒಪ್ಪಿಕೊಂಡು, ಅವರ ಮಾತಿನಂತೆ ಕೃಷ್ಣದೀಕ್ಷಿತರನ್ನು ಕುರಿತು—“ಸ್ವಾಮಿ, ನನ್ನ ಕುಟುಂಬಕ್ಕೆ ಪಿಶಾಚಬಾಧೆಯಾಗಿ ಕಾಲುಹೋಗಿರುವದರಿಂದ ಬಹಳ ತ್ರಾಸವಾಗಿದೆ. ಎಷ್ಟು ಉಪಾಯ ಮಾಡಿದರೂ ಪ್ರಯೋಜನವಾಗಿಲ್ಲ. ಏನೋ ನಮ್ಮ ಪ್ರಾಚೀನ ಪುಣ್ಯದ ಯೋಗದಿಂದ ಮಹಾಪುರುಷರ ಆಗಮನದಯೋಗವು ಒದಗಿರುವದು; ಆದ್ದರಿಂದ ದಯಮಾಡಿ ನನ್ನ ಹೆಂಡತಿಗೆ ಒಂದು ಯಂತ್ರವನ್ನು ಮಾಡಿಕೊಡಬೇಕು,” ಎಂದು ಪ್ರಾರ್ಥಿಸಿದರು.

ಹೀಗೆ ಮಾರ್ತಂಡಪ್ಪನವರು ಪ್ರಾರ್ಥಿಸಿದಕೂಡಲೆ ಕೃಷ್ಣದೀಕ್ಷಿತರ ಮುಖದಿಂದ—"ಅವಶ್ಯವಾಗಿ ಯಂತ್ರವನ್ನು ಮಾಡಿಕೊಡುವೆನು, ಇನ್ನು ಮೂರು ದಿನಗಳಲ್ಲಿ ನಿಮ್ಮ ಕುಟುಂಬಕ್ಕೆ ಕಾಲೂಬರುವವು" ಎಂಬ ವಾಣಿಯು ತಟ್ಟನೆ ಹೊರಟುಬಿಟ್ಟಿತು! ಅದನ್ನು ಕೇಳಿ ಮಾರ್ತಂಡಪ್ಪನವರಿಗೆ ಪರಮಾನಂದವಾಯಿತು. ಕೂಡಲೆ ಅವರು ಕೃಷ್ಣದೀಕ್ಷಿತರನ್ನು ಕುರಿತು—"ಸ್ವಾಮಿಾ, ಬಹಳ ಸಂತೋಷವು, ಬಡವನಮೇಲೆ ಅನುಗ್ರಹವಾಯಿತು. ದಯಮಾಡಿ ಇನ್ನು ಮೂರುದಿನ ಈ ಬಡವನ ಮನೆಯಲ್ಲಿ ಸ್ವಾಮಿಗಳ ದೇವತಾರ್ಚನೆಯಾಗಬೇಕು. ಬಡವನ ವಿನಂತಿಯನ್ನು ನಿರಾಕರಿಸಬಾರದು" ಎಂದು ಪ್ರಾರ್ಥಿಸಲು, ಕೃಷ್ಣದೀಕ್ಷಿತರಿಗೆ ವಿಚಾರವು ಉತ್ಪನ್ನವಾಯಿತು ನಾನು ಸುಸೂತ್ರವಾಗಿ ಯಂತ್ರವನ್ನು ಮಾಡಿಕೊಟ್ಟಿದ್ದರೆ ತೀರಿಹೋಗುತ್ತಿತ್ತು; ಆದರೆ ಮೂರು ದಿನಗಳಲ್ಲ ಕಾಲುಬರುವವೆಂದು ಪರಮಹಂಸರು ನನ್ನ ಮುಖದಿಂದ ಏಕೆ ಆಡಿಸಿರಬಹುದು? ಆಡಿಸಿದಂತೆ ಆಗದಿದ್ದರೆ ನಿಷ್ಕಾರಣ ಮಠಕ್ಕೆ ಅಗೌರವವನ್ನು ಉಂಟುಮಾಡಿದ ಹಾಗಾಗುವದಲ್ಲ" ಎಂದು ಪಶ್ಚಾತ್ತಾಪಪಡತೊಡಗಿದರು; ಆದರೆ ಅವರಿಗೆ ಮಾರ್ತಂಡಪ್ಪನವರ ಪ್ರಾರ್ಥನೆಯನ್ನು ಅಲ್ಲಗಳೆಯುವದು ಯೋಗ್ಯವಾಗಿ ತೋರಲಿಲ್ಲ; ಅವರ ಮನಸ್ಸಿನಲ್ಲ ಮಾತ್ರ ಆಧೈರ್ಯ ಉಂಟಾಯಿತು!

ಕೃಷ್ಣದೀಕ್ಷಿತರು ಸ್ವಬುದ್ಧಿಯಿಂದ ಆಡಿದ ಮಾತಲ್ಲದ್ದರಿಂದ, ಅವರಿಗೆ ತಾವಾಡಿದ ಮಾತಿನಲ್ಲಿಯೇ ತಮ್ಮ ಅವಿಶ್ವಾಸವು ಉಂಟಾಯಿತು. ಮಾತಾಡಿಸಿದವರು ಪರಮಹಂಸರಾದದ್ದರಿಂದ, ಅವರ ಆ ಮಾತನ್ನು ಸತ್ಯವಾಗಿ ಮಾಡಲಿಕ್ಕೆ ಪರಮಹಂಸರೇ ಹೊಣೆಯಾಗಿದ್ದರು! ಇನ್ನು ಮೂರು ದಿನಗಳಲ್ಲ ತನ್ನ ಹೆಂಡತಿಗೆ ನಿಶ್ಚಯವಾಗಿ ಗುಣವಾಗುತ್ತದೆಂಬ ನಂಬಿಗೆಯಿಂದ ಮಾರ್ತಂಡಪ್ಪನವರಿಗೂ, ಅವರ ಮನೆಯವರಿಗೂ ಪರಮಾನಂದವಾಯಿತು. ಅವರು ಉತ್ಸಾಹದಿಂದ ಸ್ವಾಮಿಗಳ ಆದರಸತ್ಕಾರ ನಡಿಸಿದರು. ಕೃಷ್ಣದೀಕ್ಷಿತರು ಯಂತ್ರ ಬರೆಯಲಿಕ್ಕೆ ಬೇಕಾಗುವ ಸಾಮಾನುಗಳನ್ನು ತರಿಸಿಕೊಂಡು, ಪೂಜೆಯ ಕಾಲದಲ್ಲ ಯಂತ್ರವನ್ನು ಬರೆ

ದರು ದೇವರ ಮುಂದೆ ಧೂಪಹಾಕುವ ವಿಧಿಯು ಆಯಿತು; ಮಂತ್ರ ಪಠಣವಾಯಿತು; ಪೂಜೆಯ ಪರಿಸಮಾಪ್ತಿಯಾಯಿತು. ಬಳಿಕ ಕೃಷ್ಣದೀಕ್ಷಿತರು ಮಾರ್ತಂಡಪ್ಪನವರ ಕುಟುಂಬವನ್ನು ಕರೆದು, ಅವರ ಮೈಮೇಲಿನ ಹಳೆಯ ಯಂತ್ರಗಳನ್ನೆಲ್ಲ ತೆಗೆಸಿ ಚಲ್ಲಿಸಿ, ತಾವು ಬರೆದಿದ್ದ ಹೊಸ ಯಂತ್ರವನ್ನು ಕಟ್ಟಿಸಿದರು. ಮುಂದೆ ಊಟವಾಯಿತು, ತಾಂಬೂಲ ಹಾಕಿಕೊಂಡು ಎಲ್ಲರೂ ವಿಶ್ರಮಿಸಿದರು ಕೃಷ್ಣದೀಕ್ಷಿತರ ಭವಿಷ್ಯವು ಬಾಳಂಭಟ್ಟರಿಗೆ ಸರ್ವಥಾ ಮನಸಿಗೆ ಬಂದಿದ್ದಿಲ್ಲ ಅವರು ಈ ಸಂಬಂಧದಿಂದ ಕೃಷ್ಣದೀಕ್ಷಿತರನ್ನು ಮಾತಾಡಿಸಬೇಕೆಂದು ಹಾತೊರೆಯಹತ್ತಿದರು; "ಸುಮ್ಮನೆ ಮಠದ ಮರ್ಯಾದೆ ಹೋಗುವ ಪ್ರಸಂಗ ಬಂದಿತು," ಎಂದು ಅವರು ಚಡಪಡಿಸಹತ್ತಿದರು

ಬಾಳಂಭಟ್ಟರು ಸಮಯನೋಡಿ ಕೃಷ್ಣದೀಕ್ಷಿತರನ್ನು ಕುರಿತು—"ದೀಕ್ಷಿತರೇ, ನಿಮಗೆ ವ್ಯವಹಾರಜ್ಞಾನವು ಸ್ವಲ್ಪವೂ ಇಲ್ಲವು; ಸ್ವರೂಪ ನಿರ್ಣಯವಾಗುವ ಪ್ರಸಂಗವನ್ನು ತಂದಿರಿ, ನಾನು ಸುಮ್ಮನೆ ಲೋಕ ರೀತಿಯಂತೆ ಯಂತ್ರಬರೆದು ಕಟ್ಟಿರೆಂದು ಹೇಳಿದರೆ, ನೀವು ಹೆಚ್ಚಿನ ಕೆಲಸ ಮಾಡಿದಿರಿ" ಎಂದು ಸಿಟ್ಟು ಮಾಡಿದರು. ಬಾಳಂಭಟ್ಟರ ಮಾತಿಗೆ ಕೃಷ್ಣದೀಕ್ಷಿತರು ಒಪ್ಪಿಕೊಂಡು, ಎಲ್ಲ ಅಭಿಮಾನವು ಪರಮಹಂಸರಿಗೆ ಇರಬೇಕೆಂದು ಹೇಳಿದರು. ಹೀಗೆ ಒಂದು ದಿವಸವಾಯಿತು, ಎರಡು ದಿವಸವಾಯಿತು; ಸ್ವಲ್ಪವೂ ಗುಣವಿಲ್ಲ! ಆಗ ಮನೆಯವರು ತಮ್ಮೊಳಗೆ—"ಪಾಪ! ಅವರೇನು ಮಾಡ್ಯಾರು? ಕಟ್ಟುವಹಾಗೆ ಯಂತ್ರವನ್ನು ಕಟ್ಟಿದರು, ನಮ್ಮ ಪ್ರಾರಬ್ಧವು" ಎಂದು ಮಾತಾಡುವದು ಕೃಷ್ಣದೀಕ್ಷಿತರ ಕಿವಿಗೂ ಬಿದ್ದಿತು. ಕೃಷ್ಣದೀಕ್ಷಿತರಿಗೆ ಏನು ಮಾಡಿದರೂ ಸಮಾಧಾನವಾಗಲೊಲ್ಲದು. ಮೂರನೆಯ ದಿವಸ ಹೊತ್ತು ಮುಣುಗಿತು; ರಾತ್ರಿಯ ಮಂಗಳಾರತಿಯಾಯಿತು; ಊದುಹಾಕಿ ಮಠದ ಬಿರುದಾವಳಿಯನ್ನು ಪಠಿಸಿದರು; ಆದರೆ ಪಿಶಾಚದ ಚಳವಳಿಯಿಲ್ಲ! ರಾತ್ರಿಯ ಊಟ-ಉಪಚಾರಗಳಾದಬಳಿಕ ಆ ಹೆಣ್ಣುಮಗಳ ತಮ್ಮನೂ, ಕೃಷ್ಣದೀಕ್ಷಿತರೂ ತಾಂಬೂಲಹಾಕುತ್ತ ಕುಳಿತುಕೊಂಡರು. ಬಾಳಂಭಟ್ಟರೂ ಅಲ್ಲಿ ಇದ್ದರು.

ಆಮಾತು ಈ ಮಾತು ನಡೆದವು; ಆದರೆ ದೆವ್ವನ ಮಾತು ತೆಗೆಯಲಿಕ್ಕೆ ಯಾರಿಗೂ ಮನಸ್ಸಾಗಲೊಲ್ಲದು ಮಾರ್ತಂಡಪ್ಪನವರು ನಿರಾಶರಾದರು ಎಲ್ಲರ ಉತ್ಸಾಹಭಂಗವಾಗಿ ಹೋಯಿತು. ಮಲಗುವ ಹೊತ್ತು ಆಗಲು, ಎಲ್ಲರೂ ಮಲಗಿಕೊಂಡರು.

ಎಲ್ಲರಿಗಿಂತಲೂ ಕೃಷ್ಣದೀಕ್ಷಿತರಿಗೆ ಹೆಚ್ಚು ಅಸಮಾಧಾನವಾಗಿದ್ದರೆ ಆಶ್ಚರ್ಯವಲ್ಲ. ಲೋಕಾಪುರದ ಸ್ವಾಮಿಗಳ ಮಹಿಮೆಯ ವರ್ಣನವನ್ನು ಮನಸೋಕ್ತವಾಗಿ ಮಾಡಿದ ಕೀರ್ತನಕಾರರಾದ ಬಾಳಂಭಟ್ಟರಿಗೂ ಬಹಳ ಅಸಮಾಧಾನವಾಗಿತ್ತು. ಅವರೂ, ಕೃಷ್ಣದೀಕ್ಷಿತರೂ ಕೂಡಿಯೇ ಮಲಗಿದ್ದರು. ಮಧ್ಯರಾತ್ರಿಯಾದರೂ ಅವರಿಬ್ಬರಿಗೂ ನಿದ್ದೆ ಹತ್ತಿದ್ದಿಲ್ಲ. ಬಾಳಂಭಟ್ಟರು ಮಧ್ಯರಾತ್ರಿ ಮೀರಿರುವಾಗ ಕೃಷ್ಣದೀಕ್ಷಿತರನ್ನು ಕುರಿತು—"ಯಾಕೆ ದೀಕ್ಷಿತರೇ, ನಿದ್ದೆ ಬರಲೊಲ್ಲದೇನು?" ಎಂದು ಮಾತಾಡಿಸಲು, ಕೃಷ್ಣದೀಕ್ಷಿತರು ರೇಗಿಸಿ ಬಾಳಂಭಟ್ಟರಿಗೆ—"ಸುಮ್ಮನೆ ಮಲಗಿಕೊಳ್ಳುವದಿದ್ದರೆ ಮಲಗಿಕೊಳ್ಳಿರಿ, ಇಲ್ಲದಿದ್ದರೆ ಎತ್ತಾದರೂ ಹೋಗಿಬಿಡಿರಿ," ಎಂದು ನುಡಿಯಲು, ಪಾಪ! ಬಾಳಂಭಟ್ಟರು ಸುಮ್ಮನಾಗಿ ಬಿಟ್ಟರು. ಆಗ ಕೃಷ್ಣದೀಕ್ಷಿತರ ಅಸಮಾಧಾನವು ಹೆಚ್ಚಿ, ಅವರ ಕಣ್ಣಲ್ಲಿ ನೀರು ಬಂದವು. ಅವರು ಮನಸ್ಸಿನಲ್ಲಿ ಪರಮಹಂಸರನ್ನು ಕುರಿತು—"ಇನ್ನು ನಾನು ನಿನ್ನ ಮಠಪಲ್ಲ ಕಾಲುಹಾಕುವದಿಲ್ಲ. ನನ್ನ ಅಭಿಮಾನವೇ ನಿನಗೆ ಇಲ್ಲದಿರಲು, ನನಗಾದರೂ ನಿನ್ನ ಮಠದ ಅಭಿಮಾನವೇಕೆ? ಹೀಗೆ ನಮ್ಮ ಸ್ವರೂಪ ನಾಶವಾಗಿ ದುಷ್ಕೀರ್ತಿಯಾದರೆ, ಈ ಹೊಸ ಪ್ರದೇಶದಲ್ಲಿ ನಾವು ಸಂಚಾರ ಮಾಡುವದಾದರೂ ಹೇಗೆ?" ಎಂದು ಮುಂತಾಗಿ ಪರಮಹಂಸರಿಗೂ, ಮೂಲ ಭುಜಂಗಸ್ವಾಮಿಗಳಿಗೂ ನೊರೆಯಿಡುವದರಲ್ಲಿ ಬೆಳಗಾಗಿ ಹೋಯಿತು; ಆದರೆ ದೀಕ್ಷಿತರು ಕಣ್ಣಿಗೆ ಕಣ್ಣು ಹಚ್ಚಲಿಲ್ಲ! ಪೂರ್ಣ ಬೆಳಗಾಗಲು, ದೀಕ್ಷಿತರು ಚಂಚಿಯನ್ನು ತಕ್ಕೊಂಡು ತಂಬಾಕಹಾಕುತ್ತ ಪಡಸಾಲಿಯ ಕಟ್ಟೆಯಮೇಲೆ ಕುಳಿತುಕೊಂಡರು. ಅಷ್ಟರಲ್ಲಿ ಮಾರ್ತಂಡಪ್ಪನ ಬೀಗನೂ ದೀಕ್ಷಿತರ ಬಳಿಯಲ್ಲಿ ಬಂದು ಕುಳಿತುಕೊಂಡನು.

ಹೀಗೆ ಇಬ್ಬರೂ ಸುಮ್ಮನೆ ತಂಬಾಕ ಹಾಕಿಕೊಳ್ಳುತ್ತ ಕುಳಿತಿರುವಾಗ, ಸಾವಿತ್ರೀಬಾಯಿಯು ಕೋಣೆಯೊಳಗಿಂದ ಎದ್ದುಬಂದು ಅಡಿಗೆಯಮನೆ

ಯೊಳಗಿನ ಉಪಕರಣಗಳನ್ನು ತಕ್ಕೊಂಡು ಅವನ್ನು ತಿಕ್ಕುವದಕ್ಕಾಗಿ ಹಿತ್ತಲದಕಡೆಗೆ ಹೋದಳು. ಅದನ್ನು ನೋಡಿ ಮನೆಯವರಿಗೆ ಪರಮಾಶ್ಚರ್ಯವಾಯಿತು! ದೀಕ್ಷಿತರಿಗೆ ಈ ಸುದ್ದಿಯು ಗೊತ್ತಾಗಲು, ಹೊಸ ಜೀವ ಬಂದಂತಾಗಿ ಅವರ ಕಂಠವು ಸದ್ಗದಿತವಾಗುತ್ತಿರಲು, ಮಾರ್ತಂಡಪ್ಪನವರು ಭಕ್ತಿಯಿಂದ ದೀಕ್ಷಿತರನ್ನು ನಮಸ್ಕರಿಸಿದರು; ಆದರೆ ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಅಷ್ಟರಲ್ಲಿ ಬಾಳಂಭಟ್ಟರು ಸಾವಿತ್ರೀಬಾಯಿಯವರ ಬಳಿಗೆಹೋಗಿ ಅವರ ಯೋಗ ಕ್ಷೇಮವನ್ನು ವಿಚಾರಿಸಿ, ಸಂತೋಷಭರಿತರಾಗಿ ಹೊರಕಟ್ಟೆಗೆ ಬಂದು ಆನಂದದಿಂದ ಮಾರ್ತಂಡಪ್ಪನವರನ್ನು ಕುರಿತು—“ಮಾರ್ತಂಡಪ್ಪಾ, ಪರಮಹಂಸರ ಪೀಠದ ಪ್ರಭಾವವನ್ನು ನೋಡಿದೆಯಾ? ನಿನ್ನ ಅರಿಷ್ಟವು ಹಿಂಗುವ ಕಾಲ ಬಂದದ್ದರಿಂದಲೇ, ಸ್ವಾಮಿಗಳು ನಿನ್ನ ಮನೆಗೆ ದಯಮಾಡಿಸಿದರು. ಬಹಳ ಸಂತೋಷವಾಯಿತು! ಇನ್ನು ಗುರುಚರಿತ್ರದ ಒಂದು ಸಪ್ತಾಹವನ್ನು ದೀಕ್ಷಿತರಿಂದ ಮಾಡಿಸಿಬಿಡು; ಅಂದರೆ ನಿನ್ನ ಎಲ್ಲ ಪೀಡೆಯು ಪರಿಹಾರವಾಗಿ ಹೋಗುವದು,” ಎಂದು ಹೇಳಿದರು. ಅವರ ಮಾತಿಗೆ ಮಾರ್ತಂಡಪ್ಪನವರು ಬಹಳ ಸಂತೋಷಪಟ್ಟರು. ಅವರು ಮೊದಲೇ ಅತ್ಯಂತ ಭಾವಿಕರು; ದೇವರು ಬ್ರಾಹ್ಮಣರ ಮೇಲೆ ಅವರ ವಿಶ್ವಾಸಬಹಳ; ಈಗಂತು ತಮ್ಮ ಹೆಂಡತಿಯಕಾಲುಗಳು ದೀಕ್ಷಿತರು ಹೇಳಿದಂತೆ ಮೂರೇ ದಿನಗಳಲ್ಲಿ ಬಂದಿದ್ದವು; ಅಂದಬಳಿಕ ಮಾರ್ತಂಡಪ್ಪನವರ ವಿಶ್ವಾಸವು ಹೆಚ್ಚಿದ್ದರೆ ಆಶ್ಚರ್ಯವೇನು? ಆಗ ಅವರು ಕೃಷ್ಣದೀಕ್ಷಿತರನ್ನು ಕುರಿತು—“ಸ್ವಾಮಿ, ದಯಮಾಡಿ ಇನ್ನು ಏಳುದಿನ ನಮ್ಮ ಮನೆಯಲ್ಲಿದ್ದು, ಶ್ರೀಗುರುಚರಿತ್ರದ ಸಪ್ತಾಹವನ್ನು ಮಾಡಬೇಕು,” ಎಂದು ಪ್ರಾರ್ಥಿಸಲು, ಆನಂದ ಭರಿತರಾಗಿದ್ದ ದೀಕ್ಷಿತರು ಒಪ್ಪಿಕೊಂಡು, ಅವರ ಮನೆಯಲ್ಲಿ ಶ್ರೀಗುರು ಚರಿತ್ರದ ಸಪ್ತಾಹವನ್ನು ಮುಗಿಸಿದರು. ಮುಂದೆ ಮಾರ್ತಂಡಪ್ಪನವರ ಕುಟುಂಬವಾದ ಆ ಸಾವಿತ್ರೀಬಾಯಿಯವರ ಹೊಟ್ಟೆಯಲ್ಲಿ ಮಕ್ಕಳು ಮರಿಗಳಾದವು. ಈಗಲೂ ಮಾರ್ತಂಡಪ್ಪನವರು ಸಕುಟುಂಬ ಸಪರಿವಾರ ಶ್ರೀಪರಮಹಂಸರ ಕೃಪೆಯಿಂದ ಸೌಖ್ಯದಿಂದಿರುವರು.

**೨ನೆಯದು—ಸಂತತಿಪ್ರದಾನ**—ಹೀಗೆ ಮೂರನೇಬಾಲಜ್ಞಾನೇಶ್ವರಸ್ವಾಮಿಗಳು ಸಂಚಾರಮಾಡುತ್ತಮಾಡುತ್ತರಾಣೇಬೆನ್ನೂರ ತಾಲೂಕಿನೊಳಗಿನ ದೇವರಗುಡ್ಡವೆಂಬ ಹೆಸರಿನ ಶ್ರೀಮಾರ್ತಂಡ ಭೈರವ ಕ್ಷೇತ್ರಕ್ಕೆ ಬಂದರು. ಆ ಕ್ಷೇತ್ರವಲ್ಲಿ ಶ್ರೀಮಾರ್ತಂಡ ಭೈರವನು ತನ್ನ ಗುಡಿಯ ಶಿಖರದ ಮೇಲೆ ಜ್ಯೋತಿರೂಪದಿಂದ ತನ್ನ ಭಕ್ತರಿಗೆ ದರ್ಶನಕೊಡುತ್ತಿರುವದು ಪ್ರಸಿದ್ಧವಾಗಿರುವದು! ಆ ಕ್ಷೇತ್ರದಲ್ಲಿ ಒರಗೇರಿ ಚಿಕ್ಕಪ್ಪನವರೆಂಬ ಹೆಸರಿನ ಸದ್ಗೃಹಸ್ಥರು ಉಂಡುಟ್ಟು ಸುಖದಿಂದ ಇದ್ದರು. ಅವರ ಮಗಳಿಗೆ ಮಕ್ಕಳು ಬದುಕುತ್ತಿದ್ದಿಲ್ಲ ಹೀಗಿರುವಾಗ ಬಾಳಂಭಟ್ಟರು ಲೋಕಾಪುರದ ೩ನೇ ಬಾಲಜ್ಞಾನೇಶ್ವರಸ್ವಾಮಿಗಳನ್ನು ಕರಕೊಂಡು ಚಿಕ್ಕಪ್ಪನವರ ಮನೆಗೆ ಬಂದರು. ಆಗ ಚಿಕ್ಕಪ್ಪನವರಿಗೆ ಬಹಳ ಸಂತೋಷವಾಯಿತು. ಹೂಲೀಹಳ್ಳಿಯ ಮಾರ್ತಂಡಪ್ಪನವರ ಕುಟುಂಬಕ್ಕೆ ಕಾಲು ಬಂದ ಸುದ್ದಿಯು ಅವರಿಗೆ ಗೊತ್ತಾಗಿದ್ದದ್ದರಿಂದ, ಸ್ವಾಮಿಗಳ ವಿಷಯದಲ್ಲಿ ಅವರ ವಿಶ್ವಾಸವು ಉಂಟಾಗಿತ್ತು ಚಿಕ್ಕಪ್ಪನವರು ಸಮಾರಂಭದಿಂದ ಸ್ವಾಮಿಗಳ ಪಾದಪೂಜೆ ಮಾಡಿದರು ಆಗ ಬಾಳಂಭಟ್ಟರು ಸ್ವಾಮಿಗಳಮುಂದೆ — ಸ್ವಾಮೀ, ಚಿಕ್ಕಪ್ಪನವರಿಗೆ ಯಾವಮಾತಿನ ಕೊರತೆಯೂ ಇಲ್ಲ, ಆದರೆ ಅವರ ಮಗಳಿಗೆ ಮಕ್ಕಳು ಬದುಕುವದಿಲ್ಲವೆಂಬದೊಂದೇ ಅವರಿಗೆ ಕೊರತೆ; ಆದ್ದರಿಂದಅವರ ಮಗಳಮಕ್ಕಳು ಬದುಕುವಂತೆಅನುಗ್ರಹಿಸಬೇಕು,"ಎಂದು ಪ್ರಾರ್ಥಿಸಲು, ಸ್ವಾಮಿಗಳು—"ಬರುವ ವರ್ಷದೊಳಗಾಗಿ ಅವರಿಗೆ ಸಂತತಿಯಾಗುವದು." ಎಂದು ನುಡಿದು, ಫಲ ಮಂತ್ರಾಕ್ಷತೆ ಕೊಟ್ಟರು. ಆದರಂತೆ ವರ್ಷತುಂಬುವದರೊಳಗಾಗಿ ಚಿಕ್ಕಪ್ಪನವರ ಮಗಳಿಗೆ ಸಂತತಿಯಾಯಿತು ಈಗ ಚಿಕ್ಕಪ್ಪನವರ ಆಳಿಯಂದಿರಂದ ಬಿಷ್ಟಪ್ಪನವರಿಗೆ ಹಲವು ಗಂಡು-ಹೆಣ್ಣುಮಕ್ಕಳಾಗಿ, ಅವರು ಕೌಟುಂಬಿಕ ಸೌಖ್ಯವನ್ನು ಭೋಗಿಸುತ್ತಿರುವರು.

**೩ನೆಯದು—ಇನ್ನೊಂದು ಸಂತತಿಪ್ರಧಾನ**—೩ನೇ ಬಾಲಜ್ಞಾನೇಶ್ವರಸ್ವಾಮಿಗಳು ರೋಣತಾಲೂಕಿನೊಳಗಿನ ಸೂಡಿಯೆಂಬ ಗ್ರಾಮಕ್ಕಹೋಗರು. ಆ ಊರ ಕುಲಕರಣಿ ಬಾಳಪ್ಪನವರ ಮನೆಯಲ್ಲಿ ಸ್ವಾಮಿ

ಗಳ ಸತ್ಕಾರವಾಗಿತ್ತು. ಬಾಳಪ್ಪನವರ ಹೊಟ್ಟೆಯಲ್ಲಿ ಬರಿಯ ಹೆಣ್ಣುಮಕ್ಕಳೇ ಇದ್ದರು, ಗಂಡುಮಕ್ಕಳಿದ್ದಿಲ್ಲ. ಬಾಳಪ್ಪನವರು ಸ್ವಾಮಿಗಳಿಗೆ ಸೇವೆಯನ್ನು ಅರ್ಪಿಸಲು, ಕೃಷ್ಣದೀಕ್ಷಿತರು ಬಾಳಪ್ಪನವರಿಗೆ—“ ಬಾಳಪ್ಪನವರೇ, ಮಠಕ್ಕೆ ಹಣದತೊಂದರೆ ಬಹಳವಿದೆ, ಇನ್ನಿಷ್ಟು ಸೇವೆಯಾಗಬೇಕು ” ಎಂದು ಕೇಳಿಕೊಳ್ಳಲು, ಆಗ ಶ್ರೀ ಬಾಲಜ್ಞಾನೇಶ್ವರಸ್ವಾಮಿಗಳು ತಟ್ಟನೆ—“ ಇವರದೊಂದು ಇಚ್ಛೆ ಪೂರ್ಣವಾಗಬೇಕಾಗಿದೆ, ಅದು ಪೂರ್ಣವಾದಬಳಿಕ ವಿಶೇಷಸೇವೆ ಮಾಡುವರು ” ಎಂದು ಹೇಳಿದರು. ಆಗ ಬಳಿಯಲ್ಲಿದ್ದವರು ಬಾಳಪ್ಪನವರ ಪುತ್ರಸಂತತಿಯ ಕೊರತೆಯನ್ನು ಹೇಳಿದರು ಅದರಂತೆ ಒಂದು ವರ್ಷದೊಳಗೆ ಬಾಳಪ್ಪನವರಿಗೆ ಪುತ್ರಸಂತತಿಯಾಗಿ, ಆ ಗುರುಪುತ್ರನೇ ಈಗ ಮನೆತನವನ್ನು ಸಾಗಿಸುತ್ತಿರುವನು!

**೪ನೆಯದು——ಮತ್ತೊಂದು ಪಿಶಾಚಬಾಧಾ ನಿವಾರಣ—**
ಹೀಗೆ ಸ್ವಾಮಿಗಳು ಸಂಚಾರಮಾಡುತ್ತ ಮಾಡುತ್ತ ಅದೇ ರಾಣೇಬೆನ್ನೂರ ತಾಲೂಕಿನೊಳಗಿನ ಎಲ್ಲಾಪುರವೆಂಬ ಗ್ರಾಮಕ್ಕೆ ಬಂದರು. ಅಲ್ಲಿಯ ಕುಲಕರಣಿಯವರಾದ ಹಣಮಂತರಾಯ, ಭೀಮರಾಯ ಎಂಬ ಹೆಸರಿನ ಅಣ್ಣತಮ್ಮಂದಿರಿಬ್ಬರೂ ಅತ್ಯಂತ ಭಾವಿಕರು, ಸಜ್ಜನರು, ಮನೆತನದಿಂದ ಸುಸ್ಥಿತಿಯುಳ್ಳವರು ಇದ್ದರು. ಸ್ವಾಮಿಗಳು ಮನೆಗೆ ಬರಲು, ಅವರಿಬ್ಬರು ಬಂಧುಗಳಿಗೂ ಬಹಳ ಸಂತೋಷವಾಯಿತು. ಅವರು ಸ್ವಾಮಿಗಳ ಆದರ ಸತ್ಕಾರಗಳನ್ನು ಬಹು ವಿಶ್ವಾಸದಿಂದ ಮಾಡಿದರು. ಸ್ವಾಮಿಗಳ ದೇವತಾರ್ಚನೆಯು ನಡೆದಿರುವಾಗ, ಹಣಮಂತರಾಯರ ಎರಡನೆಯ ಕುಟುಂಬವಾದ ಜೀವವ್ವನವರು ಅಡಿಗೆಮಾಡುತ್ತ ಕುಳಿತಿದ್ದವರು ಗೋಡೆಗೆ ಆತು ಕುಳಿತಲ್ಲಿಯೇ ತೂಗಾಡಹತ್ತಿದರು ಅದನ್ನು ಕೃಷ್ಣದೀಕ್ಷಿತರು ನೋಡಿ, “ಹೀಗೇಕೆ ತೂಗಾಡುವರು, ಒಲೆಯಲ್ಲಿ ಬಿದ್ದುಗಿದ್ದಾರು” ಎಂದು ಕೇಳಲು, ಮನೆಯವರು— “ಆಕೆಗೆ ಪಿಶಾಚ ಬಾಧೆಯಿದೆ, ಈಗ ಪಿಶಾಚವು ಮೈಯಲ್ಲಿ ಬಂದಂತೆ ಕಾಣುತ್ತದೆ” ಎಂದು ಹೇಳಿದರು. ಆಗ ಕೃಷ್ಣದೀಕ್ಷಿತರು - “ ಅವರನ್ನು ಇತ್ತ ದೇವರ ಮುಂದೆ ಕರಕೊಂಡು ಬರಬೇಕು, ” ಎಂದು ಹೇಳಲು, ಮಡಿಯಿಂದ ಇದ್ದವರು

ಜೀವವ್ವನವರನ್ನು ಕರಕೊಂಡು ಬಂದು ದೇವರ ಮುಂದೆ ಕುಳ್ಳಿರಿಸಿದರು. ಆಗ ಜೀವವ್ವನವರು—"ನನ್ನನ್ನು ಸುಡುವರು, ಬಿಟ್ಟುಬಿಡಿರಿ, ಹೋಗುತ್ತೇನೆ" ಎಂದು ಹೇಳಲು, ಕೃಷ್ಣದೀಕ್ಷಿತರು, ತಮ್ಮ ಕೈಯೊಳಗಿನ ಬೆತ್ತದಿಂದ ಎರಡುಸಾರೆ ಪಿಶಾಶಕ್ಕೆ ಹೊಡೆದರು. ಆಗ ಆ ಪಿಶಾಚವು—"ನಾನು ಹೋಗುತ್ತೇನೆ, ಇನ್ನು ಎಂದೂ ಬರುವದಿಲ್ಲ" ಎಂದು ಬೇಡಿಕೊಳ್ಳಹತ್ತಿತು. ಅದಕ್ಕೆ ಕೃಷ್ಣದೀಕ್ಷಿತರು—"ಎಲ್ಲ ಹೋಗುತ್ತೀ? ನೀನು ಹೋದದ್ದಕ್ಕೆ ಗುರುತು ಏನು" ಎಂದು ಕೇಳಲು, "ನಾನು ಊರ ಹೊರಗಿನ ಬಾವಿಯಲ್ಲಿ ಹೋಗುತ್ತೇನೆ", ಎಂದು ಹೇಳಿದ್ದೇ ಓಡಹತ್ತಿತು. ಇಬ್ಬರು ಗಂಡಸರು ಹಿಡಿದರೂ ಲಕ್ಷಿಸಲಿಲ್ಲ. ಜೀವವ್ವನು ಬಾವಿಯಲ್ಲಿ ಬಿದ್ದ ಕೂಡಲೆ ಆಕೆಗೆ ಎಚ್ಚರಾಗಲು, ಆಕೆ ನಾಚಿ ಸೀರೆ ಉಟ್ಟುಕೊಂಡು ಮನೆಗೆ ಬಂದಳು! ಬಳಿಕ ಜೀವವ್ವನ ಹೊಟ್ಟೆಯಲ್ಲಿ ಇಬ್ಬರು ಗಂಡು ಮಕ್ಕಳು ಆಗಿ, ಈಗ ಅವರು ಪ್ರೌಢರಾಗಿದ್ದು ಮನೆತನವನ್ನು ಸಾಗಿಸಿಕೊಂಡು ಹೋಗುತ್ತಿರುವರು.

---

## ೨೧ ನೇ ಅಧ್ಯಾಯ

## ನಮ್ಮ ಕೆಲವು ಅನುಭವಗಳು

**ಶನಿಯ ಮಹಿಮೆ-ಕಾಲು ಬಂದದ್ದು**—ಹೀಗೆ ಇನೇ ಜ್ಞಾನೇಶ್ವರಸ್ವಾಮಿಗಳು ಮೊದಲನೆಯಸಾರೆ ಬಂದಾಗ ಪ್ರಕಟವಾದಮಹಿಮೆಗಳಿಂದ ಲೋಕಾಪುರಪೀಠದ ಪ್ರಭಾವದ ವಿಷಯದಲ್ಲಿ ಜನರ ವಿಶ್ವಾಸವು ಹೆಚ್ಚಿತು. ಲೋಕಾಪುರದ ಸ್ವಾಮಿಗಳು ತಮ್ಮ ಮನೆಗೆ ಬರುವದೆಂದರೆ, ತಮ್ಮ ಪೀಡಾ ಪರಿಹಾರವೆಂದು ಜನರ ಭಾವನೆಯಾಯಿತು. ಆ ಮಾತಿಗೆ ಈಗ ಸರಾಸರಿ ಎರಡು ತಪಗಳು ಕ್ರಮಿಸಿ ಹೋಗಿದ್ದು, ಆ ಅವಧಿಯಲ್ಲಿ ಭಾವಿಕರಿಗೆ ಆ ಸ್ವಾಮಿಗಳಿಂದ ಎಷ್ಟೋ ಕಲ್ಯಾಣದ ಸಂಗತಿಗಳು ಒದಗಿರಬಹುದು;

ಆದರೆ ಸ್ವತಃ ನಮ್ಮ ಅನುಭವದ ಒಂದೆರಡು ಸಂಗತಿಗಳನ್ನು ಕೃತಜ್ಞತೆ ಯಿಂದ ಭಕ್ತಿಪುರಸ್ಸರವಾಗಿ ಇಲ್ಲಿ ಉಲ್ಲೇಖಿಸುವೆವು. ಈಗ ನಾವು ಬರೆ ಯುವದು ಸರಾಸರಿ ನಾಲ್ಕೈದು ವರ್ಷಗಳ ಹಿಂದಿನ ಮಾತು. ನಮ್ಮ ಹಿರಿಯ ಮಗಳಾದ ಚಿರಂಜೀವಿ ಕುಂ. ಸೌ. ಸುಬ್ಬಕ್ಕನ ಹೊಟ್ಟೆಯಲ್ಲಿ ಅಹಲ್ಯಾ ಎಂಬ ಹೆಸರಿನ ಒಬ್ಬ ಹೆಣ್ಣು ಮಗಳು ಇರುವಳು. ಆಗ ಆ ಅಹಲ್ಯೆಯ ವಯಸ್ಸು ನಾಲ್ಕು ವರ್ಷದ್ದಿರಬಹುದು. ನಾನು ಊರಲ್ಲಿ ಇಲ್ಲದಾಗ ಒಂದು ದಿನಅಹಲ್ಯೆಗೆಬಹಳಜ್ವರಬಂದುಒಮ್ಮೆಲೇಆಕೆಯಕಾಲೇ ಹೋದವು, ಕೂಡಲಿಕ್ಕೆ ಟೊಂಕವಿಲ್ಲದಾಯಿತು. ಆದ್ದರಿಂದ ಮನೆಯವರು ಗಾಬರಿಯಾಗಲು, ಆ ಹುಡಿಗೆಯತಂದೆ ಶ್ರೀ ಮಲ್ಹಾರಿ ದೀಕ್ಷಿತರು ಡಾಕ್ಟರ ರನ್ನು ಕರೆದು ತೋರಿಸಿ ಉಪಚಾರ ಮಾಡಿಸಿದರು; ಬೇರೆ ಉಪಚಾರ ಗಳನ್ನೂ ಮಾಡಿದರು; ಆದರೆ ಜ್ವರ ನಿಂತರೂ ಕಾಲು ಬರಲಿಲ್ಲ. ಅಷ್ಟ ರಲ್ಲಿ ಲೋಕಾಪುರದ ೩ ನೇ ಜ್ಞಾನೇಶ್ವರ ಸ್ವಾಮಿಗಳು ಬಂದಿರುವರೆಂಬ ಸುದ್ದಿಯು ಗೊತ್ತಾಗಲು, ಮನೆಯವರೆಲ್ಲರಿಗೂ ಒಂದು ಬಗೆಯ ಧೈರ್ಯವು ಬಂದಂತಾಯಿತು. ಆಗ ಆ ಹುಡಿಗೆಯ ತಂದೆಯಾದ ಶ್ರೀ ಮಲ್ಲಾರಿ ದೀಕ್ಷಿತರು ಸ್ವಾಮಿಗಳ ಬಳಿಗೆ ಹೋಗಿ, "ಇಂದಿನ ಆತಿಥ್ಯವು ನಮ್ಮಲ್ಲಿ ಆಗಬೇಕೆಂದು" ಸ್ವಾಮಿಗಳಿಗೆ ಆಮಂತ್ರಣ ಕೊಟ್ಟು ಬಂದರು. ಅದರಂತೆಸ್ವಾಮಿಗಳು ನಮ್ಮಮನೆಗೆಬಂದು ದೇವತಾರ್ಚನಮಾಡಿದ ಬಳಿಕ, ತಮ್ಮ ಸಾಂಪ್ರದಾಯದಂತೆ ದೇವರ ಮುಂದೆ ಧೂಪ ಹಾಕಿ ತಮ್ಮ ಬಿರು ದಾವಳಿ ಹೊಗಳಿ ದೀನ ಎಂಬ ಶಬ್ದವನ್ನು ಉಚ್ಚರಿಸತೊಡಗಿದರು. ಆಗ ನಮ್ಮ ಅಹಲ್ಯೆಯನ್ನು ದೇವರ ಮುಂದೆ ಕರಕೊಂಡು ಬಂದು ಕುಳಿತಿ ದ್ದರು. ಈ ಊದು ಹಾಕಿ ಬಿರುದಾವಳಿ ಹೊಗಳುವಾಗಲೇ ಪಿಶಾಚಾ ದಿಗಳ ಉಚ್ಚಾಟನವಾಗುವ ಸಂಭವವು ವಿಶೇಷವಾಗಿರುವದು. ಪೂಜೆ ಯಾದ ಬಳಿಕ ಶ್ರೀ ಸ್ವಾಮಿಗಳು ವಾತ್ಸಲ್ಯದಿಂದ ಯೋಗಕ್ಷೇಮವ ವಿಚಾ ರಿಸುವಾಗ, ಮನೆಯವರು ಅಹಲ್ಯೆಯ ಸಂಗತಿಯನ್ನು ತಿಳಿಸಿ, ಆಕೆಯನ್ನು ಸ್ವಾಮಿಗಳ ಮುಂದೆ ನಿಲ್ಲಿಸ ಹೋದರು; ಆದರೆ ಆ ಕೂಸಿಗೆ ನಿಲ್ಲಲಿಕ್ಕೆ ಬರಲಿಲ್ಲ. ಆಗ ಸ್ವಾಮಿಗಳು ಆಕೆಗೆ ತೀರ್ಥಪ್ರೋಕ್ಷಣ ಮಾಡಿ, ಅಂಗಾರ

ಹಚ್ಚಹೇಳಿದರು. ಅದರಂತೆಮಾಡಲು, ಶ್ರೀಸ್ವಾಮಿಗಳ ಕೃಪೆಯಿಂದ ಅಂದು ಸಂಜೆಗೇ ಅಹಲ್ಯೆಯು ಗೋಡೆಹಿಡಕೊಂಡು ಎದ್ದು ನಿಂತಳು ; ಅಂದಬಳಿಕ ಮನೆಯವರೆಲ್ಲ ಸ್ವಾಮಿಗಳ ವಿಷಯದಲ್ಲಿ ಅತ್ಯಂತವಾದ ಭಕ್ತಿವಿಶ್ವಾಸವುಳ್ಳವ ರಾದದ್ದರಲ್ಲಿ ಆಶ್ಚರ್ಯವೇನು ? ಈಗ ಆ ಅಹಲ್ಯಾಬಾಯಿಯು ಸುಖವಾಗಿ ರುವಳು

## ಸ್ವತ: ನನಗೇ ಬಂದ ಅನುಭವ

**೬ನೇ ಮಹಿಮೆ—ನನ್ನ ಕೈನಡುಗುವದು ನಿಂತದ್ದು**—ಸಾಂಸಾರಿಕರಿಗೆ ಮಕ್ಕಳುಮೊಮ್ಮಕ್ಕಳಲ್ಲಿಪ್ರೇಮವಿರುವದು ಸ್ವಾಭಾವಿಕವೇಸರಿ; ಆದರೆ ಸಾಮಾನ್ಯ ಜನರ ಆ ಪ್ರೇಮವು ಮೋಹದ ಸ್ವರೂಪವನ್ನು ಹೊಂದುವದು ಮಕ್ಕಳನ್ನು ಪ್ರೀತಿಯಿಂದ ರಕ್ಷಿಸಬಹುದು ; ಅವರ ಕಲ್ಯಾಣವನ್ನು ಚಿಂತಿಸಬಹುದು ; ಆದರೆ ಅವರಿಗೇನಾದರೂ ಒಳಿತು ಕೆಡಕಾದರೆ ಅವರ ಪ್ರಾರಬ್ಧಭೋಗವೆಂದು ಸಮಾಧಾನ ಪಡತಕ್ಕದ್ದು. ಆದರೆ ಮಕ್ಕಳು ಮೊಮ್ಮಕ್ಕಳ ಆಗುಹೋಗುಗಳಲ್ಲಿ ತಾದಾತ್ಮ್ಯಭಾವಪಡೆದು, ಮಕ್ಕಳು ಮರಿಗಳೇ ನಮಗೆ ತಾರಕರಾಗಿ ತೋರುವರು; ಅವರಿಗೇನಾದರೂ ಬೇನೆ ಬೇಸರಿಕೆ ಬಂದರೆ, ತಮಗೇ ಬೇನೆ ಬೇಸರಿಕೆ ಬಂದಂತಾಗುವದು. ಅವರು ಸತ್ತು ಕೆಟ್ಟರೆ ನಾವೇ ಸತ್ತಂತಾಗುವದು ಇವು ಮೋಹದ ಲಕ್ಷಣಗಳು ಈ ದೃಷ್ಟಿಯಿಂದ ನೋಡಿದರೆ, ನಾವು ಮೋಹಗ್ರಸ್ತರೆಂತಲೇ ಹೇಳಬೇಕಾಗುವದು, ಅಂದಬಳಿಕ ಮೋಹಗ್ರಸ್ತರಾದ ನಮಗೆ ನಮ್ಮ ಮೊಮ್ಮಗಳ ಕಾಲನ್ನು ಲೋಕಾಪುರದ ಸ್ವಾಮಿಗಳು ಕೊಟ್ಟದ್ದರಿಂದ ಅತ್ಯಂತ ಕೃತಜ್ಞತೆಯುಂಟಾಗಿ ನಮಗೆ ಆ ಸ್ವಾಮಿಗಳ ಪೀಠ ಪರಂಪರೆಯವರ ಚರಿತ್ರ ಬರೆಯಬೇಕೆಂಬ ಇಚ್ಛೆಯುಂಟಾದದ್ದರಲ್ಲಿ ಆಶ್ಚರ್ಯವಿಲ್ಲ ಆದರೆ ಆ ವಿಷಯದ ಯಾವ ಸಂಗತಿಗಳ ಜ್ಞಾನವೂ ಇಲ್ಲದ್ದರಿಂದ, ಇದು ಅಶಕ್ಯ ಕಾರ್ಯವೆಂದು ಆಗ ನಾವು ಉದಾಸೀನಮಾಡಿದ್ದಾಯಿತು !

ಹೀಗಿರುವಾಗ ಮತ್ತೊಮ್ಮೆ ಈ ೩ನೇ ಜ್ಞಾನೇಶ್ವರ ಸ್ವಾಮಿಗಳು ನಮ್ಮಲ್ಲಿಗೆ ಬಂದಾಗ, ತಮ್ಮ ಪೀಠ ಪರಂಪರೆಯ ಏಳು ಜನ ಸ್ವಾಮಿಗಳ ಚರಿತ್ರ ಸಂಗ್ರಹವಿದ್ದ ೯೦ ಪುಟದ ಒಂದು ಮರಾಠಿ ಕೈ ಬರಹದ ಪುಸ್ತಕ

ವನ್ನು ನನ್ನ ಕೈಯಲ್ಲಿ ಕೊಟ್ಟು ನನ್ನನ್ನು ಕುರಿತು— ಮಾಸ್ತರರೇ, ಇದು ನಮ್ಮ ಪೀಠದ ಸ್ವಾಮಿಗಳ ಚರಿತ್ರವು. ಇದರ ಮೂಲವು ಸಂಸ್ಕೃತವಿರುವದು. ಅದನ್ನು ಮುರಗೋಡದ ಕಾಶೀಕರ ಸಾಂಬದೀಕ್ಷಿತರೆಂಬವರು, ನಮ್ಮ ಗುರುಗಳಾದ ಬಾಲಭುಜಂಗ ಯೋಗಿಗಳ ಕಾಲದಲ್ಲಿ ಸ್ವಪ್ನದೃಷ್ಟಾಂತದ ಮೇಲಿಂದ ಶ್ಲೋಕಬದ್ಧವಾಗಿ ಸಂಸ್ಕೃತದಲ್ಲಿ ಬರೆದಿರುವರು ಅದರ ಭಾಷಾಂತರವನ್ನು ನಮ್ಮ ಹುಡುಗನು ಮಹಾರಾಷ್ಟ್ರದಲ್ಲಿ ಗದ್ಯರೂಪದಿಂದ ಶ್ಲೋಕಶಃ ಮಾಡಿರುತ್ತಾನೆ ಇದನ್ನು ನೀವು ಕನ್ನಡದಲ್ಲಿ ಬರೆಯಬೇಕು ಎಷ್ಟೋ ಜನರು ಇದನ್ನು ಕನ್ನಡದಲ್ಲಿ ಬರೆಯುತ್ತೇವೆಂದು ಕೇಳಿದರು ; ಆದರೆ ನಾವು ಕೊಟ್ಟಿರುವದಿಲ್ಲ. ಬರೆದರೆ ನೀವೇ ಬರೆಯಬೇಕು, ಇಲ್ಲದಿದ್ದರೆ ಇಲ್ಲ, '' ಎಂದು ವಾತ್ಸಲ್ಯದಿಂದ ಹೇಳಿದರು. ಅದರಿಂದ ನನ್ನ ಮನಸಿಗೆ ಪರಮಾನಂದವಾಯಿತು. ಆಗ ನಾನು ಸ್ವಾಮಿಗಳಿಗೆ ವಿಶ್ವಾಸದ ಊರ್ಮಿಯಿಂದ— ''ಸ್ವಾಮಿ, ಈ ಚರಿತ್ರವನ್ನು ಬರೆದೇ ತೀರುವೆನು, ಈಗ ಒಂದು ಬಿದ್ದಿರುವ ನಮ್ಮ ಛಾಪಖಾನೆ ಪುನಃ ಸುರುವು ಆದರೆ, ಈ ಚರಿತ್ರವನ್ನೇ ಮೊದಲು ಅದರ ಮೇಲೆ ಮುದ್ರಿಸುವೆನು" ಎಂದು ತಟ್ಟನೆ ಹೇಳಿಬಿಟ್ಟೆನು, ಅಥವಾ ಇದೊಂದು ಬಗೆಯ ನನ್ನಲ್ಲಿದ್ದ ''ನಾನು ಲೇಖಕನು" ಎಂಬದುರಹಂಕಾರದ ಪರಿಣಾಮವೇ ಆಗಿರಬಹುದೆಂಬದು ಮುಂದಿನ ಸಂಗತಿಯಿಂದ ಯಾರಿಗಾದರೂ ಗೊತ್ತಾಗಬಹುದು.

ಯಾವ ಮಾತನ್ನಾದರೂ ಬಾಯಿಂದ ಸುಲಭವಾಗಿ ಆಡಿಬಿಡಬಹುದು : ಆದರೆ ಅದರಂತೆ ಕೈಯಿಂದ ಮಾಡುವದು ಪರಮ ಕಷ್ಟವು ; ಅಥವಾ ಅದು ಅವನ ಕೈಯಲ್ಲಿಲ್ಲವೆಂತಲೇ ತಿಳಿಯತಕ್ಕದ್ದು ; ಯಾಕಂದರೆ '' ಶ್ರೇಯಾಂಸಿ ಬಹು ವಿಘ್ನಾನಿ " ಎಂಬ ಸಿದ್ಧಾಂತದಂತೆ, ಒಳ್ಳೆಯ ಕೆಲಸಕ್ಕೆ ವಿಘ್ನಗಳು ಬಹಳ; ಅಲ್ಲದೆ, ಆ ಕೆಲಸ ಮಾಡುವ ಯೋಗವೂ ಕೆಲಸ ಮಾಡುವೆನೆಂದು ಅಹಂಕಾರದಿಂದ ಅನ್ನುವವನಿಗೆ ಇರಬೇಕಾಗುತ್ತದೆ. ಬರೆಯುವ ಯೋಗವಿಲ್ಲದಿದ್ದರೆ ಆ ಕೆಲಸಗಳು ಅವನಿಂದ ಆಗದ್ದೆ, ಆತನು ವಚನಭ್ರಷ್ಟತೆಯಿಂದ ತನ್ನ ಬಾಯಿ ಹೊಲಸು ಮಾಡಿಕೊಂಡಂತೆ ಮಾತ್ರ ಆಗುತ್ತದೆ. ಇದರ ಅನುಭವವು ನನಗೆ ಬಂದಿದೆ; ಈಗಲೂ ಬರುತ್ತಿರುವದು;

ಯಾಕಂದರೆ, ಬಹು ಜನರು ನನ್ನ ಮೇಲಿನ ವಿಶ್ವಾಸದಿಂದ "ನೀವು ಇದನ್ನು ಬರೆಯಲೇಬೇಕು," ಎಂದು ಹೇಳುವಾಗ, ನಾನು ಅಹಂಕಾರದಿಂದಾಗಲಿ, ಅವರ ಮಾತು ಮೀರಲಾರದ್ದಕ್ಕಾಗಲಿ ಅವರಿಗೆ—"ಅವಶ್ಯವಾಗಿ ಬರೆಯುವೆನು" ಎಂದು ಹೇಳಿಬಿಟ್ಟು ಎಷ್ಟೋ ಸಾರೆ ವಚನಭ್ರಷ್ಟನಾಗಿರುವೆನು; ಈಗೂ ಆಗುತ್ತಿರುವೆನೋ ಏನೋ! ಆದರೆ ಮಹಾತ್ಮರಾದ ಜ್ಞಾನೇಶ್ವರ ಸ್ವಾಮಿಗಳು ಕರುಣಿಸಿ ಪಾಮರನಾದ ನನಗೆ ವಿಶ್ವಾಸದಿಂದ ಚರಿತ್ರ ಬರೆಯ ಹೇಳಿರುವದರಿಂದ, ಬರೆಯುವ ಯೋಗವು ನನಗಿರುವದೆಂದು ನಂಬಿದೆನು ಸರಿ! ಆದರೆ ಸತ್ಕಾರ್ಯಕ್ಕೊದಗುವ ವಿಘ್ನಗಳಿಗೆ ನಾನು ಹೇಗೆ ತಡೆಯಬೇಕು? ಶ್ರೀ ಸ್ವಾಮಿಗಳು ಕೊಟ್ಟಿದ್ದ ಪುಸ್ತಕವನ್ನು ಆತುರದಿಂದ ಸಂಪೂರ್ಣವಾಗಿ ಓದಿದೆನು; ಆದರೆ ಆ ಸಂಕ್ಷಿಪ್ತ ವರ್ಣನದ ಅಲ್ಪ ಸ್ವಲ್ಪ ಸಂಗತಿಗಳಿಂದ ಚರಿತ್ರ ಬರೆಯಲು ನನಗೆ ಉತ್ಸಾಹವಾಗಲಿಲ್ಲ. ಹೇಳಿ ಕೇಳಿ ಅದು ಸ್ವಪ್ನದೃಷ್ಟಾಂತದಿಂದ ಬರೆದ ಪುಸ್ತಕವು. ಅದರಲ್ಲಿ ಮಹಾತ್ಮರಾದ ಕಾಶೀಕರ ದೀಕ್ಷಿತರ ಅಗಾಧವಾದ ಕರ್ತೃತ್ವ ಶಕ್ತಿಯೂ, ಮಹಾಪುರುಷರ ಪ್ರಭಾವ ದಿಗ್ದರ್ಶನವೂ ಮಾತ್ರ ವ್ಯಕ್ತವಾಗುತ್ತಿದ್ದವಲ್ಲದೆ, ವ್ಯಾವಹಾರಿಕ ವಿಷಯ ಬೋಧಕ್ಕೆ ವಿಶೇಷ ಆಸ್ಪದವೂ, ವಿಪುಲ ಚರಿತ್ರ ಸಂಗ್ರಹವೂ ಅದರಲ್ಲಿ ಇದ್ದಿಲ್ಲ; ಆದರೆ ಐದು ದಿನಗಳಲ್ಲಿ ಸ್ವಪ್ನ ದೃಷ್ಟಾಂತವಾದಂತೆ ಸಂಸ್ಕೃತ ಪದ್ಯಗಳ ಸುಂದರ ಚರಿತ್ರವನ್ನು ಐದೇ ದಿವಸಗಳಲ್ಲಿ ರಚಿಸಿ ಬರೆದ ಆ ಭಾವಿಕ ಶಿಖಾಮಣಿಗಳಾದ ಕಾಶೀಕರ ಸಾಂಬ ದೀಕ್ಷಿತರೆಂಬ ವಿದ್ವದ್ವರ್ಯರಿಗೂ, ಅದನ್ನು ಬರೆಯಲು ಸ್ವಪ್ನದೃಷ್ಟಾಂತವಿತ್ತ ಮಹಾತ್ಮರಾದ ಪರಮ ಹಂಸರಿಗೂ ಎಷ್ಟು ಸಾರೆ ವಂದಿಸಿದರೂ ನನಗೆ ತೃಪ್ತಿಯಾಗದು! ಆದರೂ ನನ್ನ ದೃಷ್ಟಿಯಿಂದ ಆ ಚರಿತ್ರವು ನನಗೆ ಸಂಕ್ಷೇಪವಾಗಿ ತೋರಿತು; ಆದ್ದರಿಂದ ನಾನು ಸ್ವಾಮಿಗಳನ್ನು ಕುರಿತು—"ಮಹಾಸ್ವಾಮಿ, ತಮ್ಮಿಂದ, ಹಾಗು ಕೃಷ್ಣ ದೀಕ್ಷಿತರಿಂದ ಕೇಳಿದ ಆಧುನಿಕ ಸ್ವಾಮಿಗಳ ಎಷ್ಟೋ ಚರಿತ್ರಗಳು ಇದರಲ್ಲಿ ಬಂದಿರುವದಿಲ್ಲ; ಆದ್ದರಿಂದ ಕೃಷ್ಣದೀಕ್ಷಿತರು ಕರುಣಿಸಿ ನಮ್ಮಲ್ಲಿಗೆ ಬಂದು ಚರಿತ್ರದ ಸಂಗತಿಗಳನ್ನೆಲ್ಲ ಹೇಳಿದರೆ, ನನಗೆ ಚರಿತ್ರ ಬರೆಯಲಿಕ್ಕೆ ಉತ್ಸಾಹವಾಗುವದು," ಎಂದು ಹೇಳಲು, ಕೃಷ್ಣ

ದೀಕ್ಷಿತರನ್ನು ಕಳಿಸಲಿಕ್ಕೆ ಶ್ರೀ ಸ್ವಾಮಿಗಳು ಒಪ್ಪಿದರು, ಬರಲಿಕ್ಕೆ ಕೃಷ್ಣ ದೀಕ್ಷಿತರೂ ಒಪ್ಪಿದರು.

ಈ ಮಾತಿಗೆ ಒಂದು ವರ್ಷವಾಯಿತು; ಆದರೆ ಕೃಷ್ಣದೀಕ್ಷಿತರು ನಮ್ಮಲ್ಲಿಗೆ ಬರಲಿಲ್ಲ, ಆ ನೆವದಿಂದ ನಾನು ಚರಿತ್ರವನ್ನೂ ಬರೆಯಲಿಲ್ಲ. ನಾನು ಸ್ವಾಮಿ ಗಳ ಮುಂದೆ—"ನಮ್ಮ ಮಶಿನ್ನು ಆರಂಭವಾದಕೂಡಲೆ ನಿಮ್ಮ ಚರಿತ್ರವನ್ನು ಪ್ರಿಂಟು ಮಾಡಿಸುವೆನೆಂ"ದು ಹೇಳಿದ್ದೆನಷ್ಟೆ? ಆದರೆ ಚರಿತ್ರಬರೆಯಲೂ ಆರಂಭ ಮಾಡದೆಯಿರುವಾಗ, ನಾನು ಅದನ್ನು ಪ್ರಿಂಟು ಮಾಡುವದೆತ್ತ? ಮುಂದೆ ನಮ್ಮ ಮಶಿನ್ನು ಶ್ರೀಸ್ವಾಮಿಗಳ ಕೃಪೆಯಿಂದ ನಡೆಯಹತ್ತಲು, ನಮ್ಮ ರಹಸ್ಯಪ್ರಕಾಶಕವಾದ ಮಹಾಭಾರತಾಮೃತದ ಎರಡನೆಯ ಪುಸ್ತಕವನ್ನು ಅದರಲ್ಲಿ ಪ್ರಿಂಟು ಮಾಡಿಸಹತ್ತಿದೆನು. ಅರ್ಧ ಪುಸ್ತಕವು ಪ್ರಿಂಟಾಗಲು, ಅತಿವೃಷ್ಟಿಯ ಮೂಲಕ ಪ್ರೇಸಿನ ಮನೆಯ ಗರ್ಡರು ಸರಿದು ಮನೆಬಿದ್ದು ನಾಲ್ಕು ತಿಂಗಳು ಪ್ರೆಸ್ಸು ನಿಂತು ಹೋಗಿ, ಅದನ್ನು ಪುನಃ ಸರಿಮಾಡಿಸಲಿಕ್ಕೆ ೭೦೦ ರೂಪಾಯಿಗಳ ವೆಚ್ಚವಾಗಿ, ನನ್ನ ಸಾಲದ ಮಾನವು ಹೆಚ್ಚಿತು; ಆದರೂ ಪುನಃ ಭಾರತದ ಪ್ರಿಂಟಿಗೆ ಆರಂಭವಾಗಿ ಪುಸ್ತಕ ಮುಗಿದು, ಪುಸ್ತಕಗಳ ಮಾರಾಟವಾಗತೊಡಗಿತು; ಆದರೆ ಲೋಕಾಪುರ ಚರಿತ್ರ ಬರೆಯುವ ಕೆಲಸವು ನಿಂತದ್ದು ನಿಂತುಹೋಯಿತು; ಅದನ್ನು ನಿಲ್ಲಿಸಿದ್ದರಿಂದ ನನಗೆ ಈ ಹಾನಿಯಾಯಿತೆಂಬ ಕಲ್ಪನೆಯೂ ಆಗ ನನಗೆ ಬರಲಿಲ್ಲ!

ಮುಂದೆ ನಾನು ಚಿತ್ರದುರ್ಗಕ್ಕೆ ನಮ್ಮ ಎಜಂಟರಕಡೆಗೆ ಹೋಗಿ ಅಲ್ಲಿ ಕೆಲತಿಂಗಳು ಇರಬೇಕಾದ ಪ್ರಸಂಗಬರಲು, ಚಿತ್ರದುರ್ಗದ ಪ್ರಸಿದ್ಧ ನಾಯಕರ ವಂಶಜರಾದ ಶ್ರೀಯುತ ಮದಕರಿ ನಾಯಕರೆಂಬವರು ನನಗೆ ತಮ್ಮ ಪೂರ್ವಜರ ಚರಿತ್ರದ ಟಿಪ್ಪಣಿಯ ಪುಸ್ತಕವನ್ನುಕೊಟ್ಟು, "ನಮ್ಮವರ ಚರಿತ್ರವನ್ನು ಬರೆಯಲೇಬೇಕೆಂ"ದು ಹೇಳಿದರು ಈಮೊದಲೆ ನನಗೆ ಅವರು ನಮ್ಮ ಆಫೀಸಿಗೆ ಹಾಗೆ ಪತ್ರ ಬರೆದಾಗ, ನನ್ನಿಂದ ಆಗುವದಿಲ್ಲೆಂದು ನಾನುವಿನಂತಿ ಮಾಡಿಕೊಂಡಿದ್ದೆನು; ಆದರೆ ಸಮಕ್ಷಹೇಳಿದಾಗ ಆ ಪ್ರಸಿದ್ಧನಾಯಕರ ವಂಶಜರಮಾತು ಮೀರುವದಾಗದೆನಾನು ಬರೆಯುತ್ತೇನೆಂದು ಹೇಳಿದೆನು; ಅಲ್ಲದೆ

ನಮ್ಮ ಶೂರಮನೆತನದ ಆ ಮದಕರಿ ನಾಯಕರು, ಈ ಪುಸ್ತಕದಿಂದ ನಿಮಗೆ ದೊಡ್ಡ ಲಾಭವಾಗುವದೆಂದು ಹೇಳಲು, ಬೇಗನೆ ಋಣಮುಕ್ತನಾಗಬೇಕೆಂಬ ಆಶೆಯಿಂದ, ಚಿತ್ರದುರ್ಗದ ನಾಯಕರಲ್ಲಿಯ ಬಿಚ್ಚುಗತ್ತಿಯ ಭರಮನಾಯಕರ ಕಾಲದ ಕಾದಂಬರಿಯನ್ನು ಬರೆಯಲು ನಿಶ್ಚಯ ಮಾಡಿದೆನು. ಹೀಗೆನಿಶ್ಚಯಮಾಡಲಿಕ್ಕೆದುರ್ಗದಜಗದ್ಗುರುಶ್ರೀಮುರಘರಾಜೇಂದ್ರಪೀಠದ ಮೂಲಕರ್ತರ ಅನುಗ್ರಹದಿಂದ ಆ ಬರಮನಾಯಕನು ನಾಯಕನಾಗಿದ್ದ ಪ್ರಸಂಗವು ನನಗೆ ಅತ್ಯಂತ ಉತ್ತೇಜಕವಾಯಿತು; ಯಾಕಂದರೆ ನನ್ನ ಕಾದಂಬರಿಗಳಲ್ಲಿ ಒಬ್ಬ ಮಹಾಪುರುಷರಿರುವದು ವಾಡಿಕೆಯಾಗಿರುತ್ತದೆ!

ಹೀಗೆ ಉತ್ತೇಜಿತನಾದ ನಾನು ನನ್ನ ಆ ಕಾದಂಬರಿಯನ್ನು "ದುರ್ಗದ ಬಿಚ್ಚುಗತ್ತಿ" ಅಥವಾ "ಶ್ರೀಮುರಗೇಶಗುರುಮಹಿಮೆ" ಎಂದು ಹೆಸರಿಟ್ಟು ಬರೆಯತೊಡಗಿದೆನು; ಆದರೆ ಎಂದಿನಂತೆ ನನಗೆ ವಿಷಯಸ್ಫೂರ್ತಿಯು ಆಗದಾಗಲು, ಅಷ್ಟರಿಂದಲೂ ನಾನು ಜಾಗರೂಕನಾಗದೆ, ಹಟಮಾರಿತನದಿಂದ ಕಷ್ಟಪಟ್ಟು ಹಾಗೂಹೀಗೂ ಕಾದಂಬರಿಯ ೧೦೦ ಪುಟಗಳನ್ನು ಬರೆದೆನು. ಆಗ ಬರೆಯಲಿಕ್ಕೆ ಕೂಡಲಿಕೆ ಬೇಸರಬರಹತ್ತಿ, ಬರೆಯಲಿಕ್ಕೆ ಕೂತರೆ ಕೈಯು ನಡುಗಹತ್ತಿ ಬರೆಯುವ ಕೆಲಸವೇ ಸಾಗದಾಯಿತು! ಆಗ ನನಗೆ ೬೬ ವರ್ಷಗಳಾಗಿರಲು, ಕೈನಡುಗಿದರೂ ನಡುಗಬಹುದಾಗಿತ್ತು; ಆದರೆ ಉಳಿದ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ಪಾಟವವಿದ್ದು, ಕೈ ಒಂದೇ ನಡುಗಹತ್ತಿದ್ದರಿಂದ ನನಗೆ ಸಂಶಯಬಂದು. "ಲೋಕಾಪುರದ ಸ್ವಾಮಿಗಳ ಚರಿತ್ರಬರೆಯುವದನ್ನು ಬಿಟ್ಟು ಕೃತಘ್ನನಾದದ್ದರಿಂದ ಹೀಗಾಗಿರಬಹುದೇ" ಎಂಬ ವಿಚಾರವು ನನ್ನಲ್ಲಿ ಉತ್ಪನ್ನವಾಯಿತು. ಮುಂದೆ ನಾನು ಹಾವೇರಿಗೆ ಬಂದೆನು; ಅಷ್ಟರಲ್ಲಿ ಲೋಕಾಪುರದ ಶ್ರೀಜ್ಞಾನೇಶ್ವರ ಸ್ವಾಮಿಗಳು ಸಂಚಾರಾರ್ಥವಾಗಿ ಹಾವೇರಿಗೆ ಬಂದು ನಮ್ಮ ಮನೆಯಲ್ಲಿಯೇ ಇಳಿದುಕೊಂಡು ಅನುಗ್ರಹಿಸಿದರು?

ಅಂದು ಊಟ ಉಡಿಗೆಗಳಾಗಿ ಎಲ್ಲರೂ ಕುಳಿತಿರಲು, ಆಗ ಸ್ವಾಮಿಗಳು ನನ್ನನ್ನು ಕುರಿತು — "ಮಾಸ್ತರರೇ, ನಮ್ಮ ಚರಿತ್ರದ ಪುಸ್ತಕ ಕೊಟ್ಟು ಮೂರುವರ್ಷವಾಗುತ್ತ ಬಂದಿತು; ಆದರೆ ಕನ್ನಡಚರಿತ್ರವು

ತಯಾರಾಗಲಿಲ್ಲ; ಆದ್ದರಿಂದ ನಮ್ಮ ಪೀಠದ ಚರಿತ್ರವಾಗುವಯೋಗವಿದ್ದಂತೆ ತೋರುವದಿಲ್ಲ, ಕಾರಣ ನಮ್ಮ ಪುಸ್ತಕವನ್ನು ನಮಗೆ ಕೊಟ್ಟುಬಿಡಿರಿ,” ಎಂದು ಕೇಳಿದರು. ಆಗ ನನಗೆ ಅತ್ಯಂತಪಶ್ಚಾತ್ತಾಪವಾದದ್ದಲ್ಲದೆ, ನನಗೆ ಭಯವೂ ಉತ್ಪನ್ನವಾಗಿ, ಕೈನಡಗುವ ಕಾರಣವು ಮನಸ್ಸಿಗೆಹೊಳೆಯಿತು. ಆಗ ನಾನು ಸ್ವಾಮಿಗಳನ್ನು ಕುರಿತು— “ಸ್ವಾಮಿ, ನಾನು ಚರಿತ್ರಬರೆಯದೆಯಿದ್ದದ್ದು ಅಪರಾಧವು; ಆದರೆ ಕೃಷ್ಣದೀಕ್ಷಿತರು ನಮ್ಮಲ್ಲಿಗೆ ಬಾರದ್ದರಿಂದ ನನ್ನ ಚರಿತ್ರಲೇಖನಕ್ಕೆ ತೊಂದರೆಯುಂಟಾಗಿದೆ. ಈಗ ಅವರು ಬಂದು ಮಠದವೃತ್ತಾಂತವನ್ನುಹೇಳಿದರೆ, ನಾನುತಡಮಾಡದೆ ಚರಿತ್ರವನ್ನು ಬರೆಯುವೆನು, ಅದನ್ನು ಮುಗಿಸದೆ ಯಾವ ಲೇಖವನ್ನೂ ಬರೆಯುವದಿಲ್ಲ, ಇದು ನಿಶ್ಚಯವು” ಎಂದು ಹೇಳಿದೆನು. ಅದಕ್ಕೆ ಸ್ವಾಮಿಗಳು “ಅದೆಲ್ಲ ಸರಿ; ಆದರೆ ಕೃಷ್ಣದೀಕ್ಷಿತರು ಕಲಾದಗಿಯಲ್ಲಿ ಭಾಗವತ ಶ್ರವಣಮಾಡಿಸುತ್ತಿರುವದರಿಂದ, ಎರಡು ವರ್ಷ ಅವರಿಗೆ ಬರಲಿಕ್ಕೆ ಅನುಕೂಲವಿಲ್ಲ, ಅಂದ ಬಳಿಕ, ಚರಿತ್ರಲೇಖನಕ್ಕೆ ನಿಮಗೆ ಅನುಕೂಲವು ಹೇಗಾಗಬೇಕು?”

ಈ ಮೇರೆಗೆ ಸ್ವಾಮಿಗಳು ನುಡಿಯಲು, ನಾನು ಮತ್ತೆ ಅವರಿಗೆ—“ಮಹಾಸ್ವಾಮಿ, ನಾನೇ ತಮ್ಮಲ್ಲಿಗೆ ಬಂದರೆ, ಎಷ್ಟು ದಿನಗಳಲ್ಲಿ ನನ್ನ ಕೆಲಸ ಮಾಡಿ ಕೊಡಬಹುದು?” ಎಂದು ಕೇಳಲು, ಸ್ವಾಮಿಗಳು “ಹದಿನೈದು ದಿವಸಗಳಲ್ಲಿ” ಎಂದು ಹೇಳಿದರು ಆಗ ನಾನು ಗತ್ಯಂತರ ಕಾಣದೆ ಸ್ವಾಮಿಗಳ ಸಂಗಡಲೇ ಶ್ರೀ ಪರಮಹಂಸರ ಆರಾಧನೆಗಾಗಿ ಮಾಘ ವದ್ಯ ಷಷ್ಠಿಗೆ ಲೋಕಾಪುರಕ್ಕೆ ಹೋದೆನು ಆರಾಧನೆಯ ಕೆಲಸವು ಮುಗಿಯಿತು. ಶ್ರೀ ಗುರುಪ್ರಸಾದ ಗ್ರಹಣದಿಂದ ನನ್ನ ಮನಸ್ಸೂ, ದೇಹವೂ ಪವಿತ್ರವಾದವು. ಶ್ರೀಸ್ವಾಮಿಗಳಸಂಗಡ ಅವಭೃತಸ್ನಾನಕ್ಕಾಗಿ ಹಳ್ಳಕ್ಕೆ ಹೊರಟೆನು. ಆಗ ಹಾದಿಯಲ್ಲಿ ಸ್ವಾಮಿಗಳು ನನ್ನನ್ನು ಕುರಿತು—“ಮಾಸ್ತರರೇ, ನೀವು ಚರಿತ್ರಬರೆಯುವದರಿಂದ ನಿಮ್ಮಕೀರ್ತಿ ಹೆಚ್ಚುತ್ತದೆ, ನಮ್ಮ ಮಠದ ಸಾವಿರ ರೂಪಾಯಿ ಸಾಲತೀರುವದಲ್ಲದೆ, ಮಠದಪ್ರಸಿದ್ಧಿಯೂ ಆಗುತ್ತದೆ” ಎಂಬ ವರದವಾಣಿಯನ್ನು ನುಡಿದರು ಆಗ ನಾನು “ಅವಶ್ಯವಾಗಿ ಆಗಲಿ” ಎಂದು ತಲೆಬಾಗಿ ಒಪ್ಪಿಕೊಂಡೆನು ಆರಾಧನೆಗೆ ಕೃಷ್ಣದೀಕ್ಷಿತರೂ

ಬಂದಿದ್ದರು. ಬಳಿಕ ನಾನು ಸ್ವಾಮಿಗಳಿಂದ ಫಲಮಂತ್ರಾಕ್ಷತೆ ತಕ್ಕೊಂಡು, ಕೃಷ್ಣದೀಕ್ಷಿತರ ಸಂಗಡಹೋಗಿ ಕಲಾದಿಗಿಯಲ್ಲಿ ೧೫ದಿವಸ ಇದ್ದು, ಎಲ್ಲ ವಿಷಯಗಳ ಟಿಪ್ಪಣಿಮಾಡಿಕೊಂಡು, ಪುನಃ ಶ್ರೀ ಸ್ವಾಮಿಗಳ ದರ್ಶನಕ್ಕಾಗಿ ಲೋಕಾಪುರಕ್ಕೆಹೋಗಿ ದರ್ಶನಮಾಡಿಕೊಂಡು ಅಪ್ಪಣೆಪಡೆದು ಹಾವೇರಿಗೆಬಂದೆನು. ಬಳಿಕ ಒಂದುದಿನ ಚರಿತ್ರಬರೆಯಲು ನಿಶ್ಚಯಿಸಿ, ಅದಕ್ಕೆ "ಕಲಿಕುಠಾರ" ಅಥವಾ "ಲೋಕಾಪುರಪೀಠಪ್ರಭಾವ" ಎಂದು ಹೆಸರಿಟ್ಟು ಚರಿತ್ರ ಬರೆಯತೊಡಗಿದೆನು. ಆಗ ಕಾಲಕ್ಕನುಸರಿಸಿ ಭಯಂಕರ ವಿಘ್ನಗಳು ಬಂದವು; ಮಾನಸಿಕತಾಪದಿಂದ ಚರಿತ್ರವು ಸಾಗದಾಯಿತು; ಆದರೆ ಅನ್ಯವಿಷಯಗಳನ್ನು ಬರೆಯಲಿಕ್ಕಿಲ್ಲವೆಂಬ ನಿಶ್ಚಯವನ್ನು ಬಿಡದಿರಲು, ವಿಘ್ನಗಳ ನಿವಾರಣವಾಯಿತು. ಮಾನಸಿಕತಾಪಗಳ ಉಪಶಮವಾಯಿತು. ಚರಿತ್ರಬರೆಯುತ್ತ ಹೋದಂತೆ ಕೈನಡಗುವದೂ ಕಡಿಮೆಯಾಗುತ್ತಾಗುತ್ತ, ಈಗ ಈ ಚರಿತ್ರವು ಪ್ರಸಿದ್ಧವಾಗಿರಲು, ಸಾಧಾರಣವಾಗಿಮೊದಲಿನಂತೆ ನನ್ನ ಕೈಯು ಶ್ರೀಪರಮಹಂಸರಕೃಪೆಯಿಂದ ಸರಳವಾಗಿ ಬರೆಯುತ್ತಿರುವದು; ವಿಷಯಸ್ಫೂರ್ತಿಯೂ ಆಗತೊಡಗಿರುವದು; ಅವೆರಡರೊಡನೆ "ಜಗತ್ತಿನಲ್ಲಿ ದೈವೀಶಕ್ತಿಯೆಂಬದೊಂದು ಗೂಢಶಕ್ತಿಯಿರುತ್ತದೆಂ"ಬ ಮಾತೂ ಮನದಟ್ಟಾಗುವಂತೆ ನನ್ನ ಅನುಭವಕ್ಕೆ ಬರುತ್ತಿರುವದು!

**೭ನೇ ಮಹಿಮೆ—ಅಭಯ ಪ್ರದಾನ**—ಈಗ ಎರಡು ಮೂರು ವರ್ಷಗಳಹಿಂದೆ, ನಮ್ಮ ಮೊಮ್ಮಗನಾದ, ಅಂದರೆ ನನ್ನ ಚಿಕ್ಕಮಗಳು ಚಿ. ಸೌ. ರೇಣಕ್ಕ ಎಂಬವಳ ಚೊಚ್ಚಲಮಗ, ಹತ್ತು ಹನ್ನೊಂದು ವರ್ಷದ, ಬಿಷ್ಟೇಶ ಅಥವಾ ತಮ್ಮ ಎಂಬ ಹೆಸರಿನವನಿಗೆ ವಿಷಮಜ್ವರ ಬಂದವು. ಆಗ ನಾನು ಧಾರವಾಡದಲ್ಲಿದ್ದೆನು. ಆಗ ಒಂದು ದಿನ ನನಗೆ ಅಕಸ್ಮಾತ್ ಪೋಸ್ಟಿನಿಂದ ಮೂರು ಕಾರ್ಡುಗಳು ಬರಲು, ಅವುಗಳಲ್ಲಿ ಒಂದು ಕಾರ್ಡು ಹಾವೇರಿಯ ಕ್ಷೇಮಸಮಾಚಾರದ್ದಾಗಿತ್ತು; ಮತ್ತೊಂದು ಕಾರ್ಡು ಹಾವನೂರಿಂದ ಬಂದಿದ್ದು, ಅದರಲ್ಲ ತಮ್ಮನಿಗೆ ವಿಷಮಜ್ವರ ಬರುತ್ತವೆಂತಲೂ, ಸನ್ನಿಪಾತದಲ್ಲಿ ತೀರನಿತ್ರಾಣನಾಗಿದ್ದ ಆತನು ನಿಮ್ಮನ್ನೇ ನೆನಿಸುತ್ತಿರುವನೆಂತಲೂ ಬರೆದಿತ್ತು. ಅದನ್ನು ಓದಿ ನನಗೆ ಬಹಳ ಅಸಮಾಧಾನವಾ

ಯಿತು. ಈಗ ಒಂದುವರ್ಷದಹಿಂದೆ ಆತನಿಗೆ ವಿಷಮಜ್ವರಬಂದು, ಸತ್ತುಸತ್ತು ಉಳಿದಿರಲು, ಆತನಿಗೆ ಮತ್ತೆ ವಿಷಮಜ್ವರ ಬಂದದ್ದರಿಂದ, ಆತನ ವಿಷಯದಲ್ಲಿ ನನಗೆ ಪರಮಾವಧಿ ವಿಷಾದವಾದದ್ದು ಆಶ್ಚರ್ಯವಲ್ಲ. ಆಗ ನಾನು ಉದಾಸೀನಭಾವದಿಂದ ಮೂರನೆಯ ಪತ್ರವನ್ನು ನೋಡಲು, ಅದು ಶ್ರೀಕ್ಷೇತ್ರ ಲೋಕಾಪುರದಿಂದ ಬಂದದ್ದಾಗಿತ್ತು. ಅದನ್ನು ಶ್ರೀಮೂರನೇ ಜ್ಞಾನೇಶ್ವರಸ್ವಾಮಿಗಳು ಕೈಮುಟ್ಟಿ ಬರೆದಿದ್ದು, ಅದರಲ್ಲಿ ಎಲ್ಲರೂ ಆರಾಧನೆಗೆ ಬರಬೇಕೆಂತಲೂ, ತಮ್ಮನಿಗೆ ನಮ್ಮ ಆಶೀರ್ವಾದಹೇಳಬೇಕೆಂತಲೂ ಬರೆದಿತ್ತು! ಯಾರಿಗೂ ಹೆಸರುಗೊಂಡು ಆಶೀರ್ವಾದಬರೆಯದೆ, ತಮ್ಮನಿಗೇ ಹೆಸರುಗೊಂಡು ಆಶೀರ್ವಾದ ಬರೆದದ್ದನ್ನುನೋಡಿ, ನನಗೆ ಬಹಳ ಸಮಾಧಾನವಾಗಿ, ಇದೊಂದು ಸ್ವಾಮಿಗಳ ಅಭಯಪ್ರಧಾನವೆಂತಲೇ ನಾನು ತಿಳಿದೆನು. ತಮ್ಮನಿಗೆ ಇನ್ನು ಪ್ರಾಣಭಯವಿಲ್ಲೆಂಬ ದೃಢಭಾವನೆಯು ನನಗೆ ಆಗಿ, ಪರಮಾನಂದವಾಯಿತು. ಆ ಆನಂದದಭರದಲ್ಲಿ ಆಗೇ ಲೋಕಾಪುರಕ್ಕೆ ಹೋಗಬೇಕೆಂದು ಹೊರಟೆನು; ಆದರೆ ನನ್ನ ಹಿತಚಿಂತಕರು—“ಆರಾಧನೆಗೆ ನಾಲ್ಕುದಿನದ ಅವಕಾಶವಿದೆ, ಹುಡುಗನನ್ನು ನೋಡಿಕೊಂಡು ಹೋಗಿರೆಂ” ದು ಹೇಳಿದ್ದರಿಂದ, ಹಾವನೂರಿಗೆ ಹೋದೆನು; ಆಗ ಎಲ್ಲರೂ ತಮ್ಮನ ಆಶೆ ತೊರೆದಿರಲು, ಅಂದೇ ಬೇನೆ ಹಿಮ್ಮೆಟ್ಟಹತ್ತಿತು! ಎರಡುದಿನ ನಿಂತು ತಮ್ಮನನ್ನು ಹಾವೇರಿಗೆ ಕರಕೊಂಡುಬಂದು, ಕೂಡಲೆ ನಾನು ಲೋಕಾಪುರಕ್ಕೆ ಹೋದೆನು. ಉತ್ಸವತೀರಿಸಿಕೊಂಡು ಹಾವೇರಿಗೆ ಬಂದಾಗ, ತಮ್ಮನಿಗೆ ಪೂರ್ಣಗುಣವಾಗಿತ್ತು! ತಮ್ಮನು ಸ್ವಾಮಿಗಳ ಕೃಪೆಯಿಂದ ಈಗ ಸ್ಥಿರಜೀವಿಯಾಗಿ ಇರುವನು! ತಮ್ಮನಈಗಂಡಾಂತರದಲ್ಲಿಔಷಧೋಪಚಾರಾದಿಗಳಿಂದ ಸಹಾಯಮಾಡಿದ ಮಿತ್ರ ಕೃಷ್ಣಾಜಿ ಪರಶುರಾಮಪಾಟೀಲ, ಹಾಗು ಹಣಮಂತ ನರಸಿಂಹ ಕರ್ಪೂರ ಇವರಿಬ್ಬರ ಉಪಕೃತಿಯನ್ನು ನಾನು ಆಜನ್ಮ ಮರೆಯಲಿಕ್ಕಿಲ್ಲ!

---

# ೨೨ನೇ ಅಧ್ಯಾಯ—ಪೀಠದ ಸ್ಥಿತ್ಯಂತರವೂ, ಸ್ವಾಮಿಗಳ ನಿರ್ಯಾಣವೂ!



**ಲೋಕಾಪುರಪೀಠದ ಸ್ಥಿತ್ಯಂತರವು**—ನಾನು ಲೋಕಾಪುರಪೀಠಸ್ಥರ ಸಚ್ಚರಿತ್ರವನ್ನು ಬರೆಯುತ್ತಹೋದಂತೆ, ಅವರ ಕೃಪೆಯಿಂದ ಹೊಸಹೊಸ ವಿಷಯಗಳ ಸ್ಫುರಣವಾಗಿ ನನ್ನ ಮನಸ್ಸಿಗೆ ಸಮಾಧಾನವಾಗುತ್ತಹೋಯಿತು. “ಇದು ಹೇಗೆ ಇದು ಹೇಗೆ” ಎಂದು ಆಲೋಚಿಸುತ್ತ ನಾನು ಕಾರಣತಿಳಿಯದ್ದರಿಂದ ಬಹು ಕಷ್ಟಿಯಾಗಲು, ಪಕ್ಕನೆ ವಿಚಾರಸ್ಫುರಣವಾಗಬೇಕು. ಹೀಂಗೆ ಚರಿತ್ರ ಪೂರ್ಣಬರೆಯುವವರೆಗೆ ಮಹಾತ್ಮರಾದ ಪೀಠಸ್ಥರಕೃಪೆಯಿಂದ ಸ್ಫುರಣಗಳಾಗುತ್ತಾಗುತ್ತ, ಚರಿತ್ರದಲ್ಲಿ ಹೊಸ ಹೊಸ ತಿದ್ದುಪಡೆಗಳಾಗುತ್ತಾಗುತ್ತ ಶ್ರೀಪರಮಹಂಸರ ಸ್ಫೂರ್ತಿ ಮಯವಾಗಿ ಈ ಚರಿತ್ರವು ಮುಗಿಯುತ್ತಿರುವದು. ಅಂತಹ ಸ್ಫೂರ್ತಿಗಳಲ್ಲಿ ಈ ಸಚ್ಚರಿತ್ರವು ತ್ರಿಖಂಡಾತ್ಮಕವಾಗಿರುವದೆಂಬ ಸ್ಫೂರ್ತಿಯಾದದ್ದು ಕಟ್ಟಕಡೆಯ ಸ್ಫೂರ್ತಿಯು. ಆ ತ್ರಿಖಂಡಗಳೆಂದರೆ — ೧ ಜ್ಞಾನಯೋಗಪ್ರಧಾನಖಂಡ, ೨ ಭಕ್ತಿಯೋಗಪ್ರಧಾನಖಂಡ, ೩ ಕರ್ಮಯೋಗಪ್ರಧಾನಖಂಡ ಎಂಬವು ಈ ಸ್ಫೂರ್ತಿಯು ಬಾಲಭುಜಂಗಯೋಗಿಗಳ ಚರಿತ್ರಬರೆಯುವಕಾಲಕ್ಕೆ ಆಗಿರುವದರಿಂದ, ಅವರ ಚರಿತ್ರದ ಆರಂಭದಲ್ಲಿ ಈ ಖಂಡಗಳ ಉಲ್ಲೇಖವನ್ನು ಮಾಡಿರುವೆನು. ಈ ಮೂರು ಖಂಡಗಳಲ್ಲಿ ಪರಮಹಂಸರ ಚರಿತ್ರವೊಂದನ್ನೇ ಜ್ಞಾನಯೋಗಖಂಡದಲ್ಲಿ, ಹಾಗು ಮುಂದಿನ ಆರುತಲೆಗಳವರೆಗಿನ ಅಂದರೆ, ೧ನೇ ಜ್ಞಾನೇಶ್ವರಸ್ವಾಮಿಗಳಿಂದ ರಾಮಚಂದ್ರಸ್ವಾಮಿಗಳವರೆಗಿನ ಆರುಜನ ಸ್ವಾಮಿಗಳ ಚರಿತ್ರವನ್ನು ಭಕ್ತಿಯೋಗಪ್ರಧಾನಖಂಡದಲ್ಲಿ, ಅದರಂತೆ

ಮುಂದಿನ ಇಬ್ಬರು ಸ್ವಾಮಿಗಳ, ಅಂದರೆ ಬಾಲಭುಜಂಗಯೋಗಿಗಳ, ಹಾಗು ೩ನೇ ಜ್ಞಾನೇಶ್ವರಸ್ವಾಮಿಗಳ ಚರಿತ್ರಗಳನ್ನು ಈ ಕರ್ಮಯೋಗಪ್ರಧಾನಖಂಡದಲ್ಲಿ ಸೇರಿಸಲಾಗಿರುವದು; ಯಾಕಂದರೆ ಪರಮಹಂಸರು ಜ್ಞಾನಪ್ರಧಾನರು, ಅವರಲ್ಲಿ ಕರ್ಮಭಕ್ತಿಗಳುಗೂಢ, ಮುಂದಿನ ಆರುಜನ ಸ್ವಾಮಿಗಳು ಗುರುಭಕ್ತಿಪ್ರಧಾನರು, ಅವರಲ್ಲಿ ಜ್ಞಾನ-ಕರ್ಮಗಳುಗೂಢ, ಕಡೆಯ ಇಬ್ಬರು ಸ್ವಾಮಿಗಳು ಕರ್ಮಪ್ರಧಾನರು; ಅವರಲ್ಲಿ ಜ್ಞಾನಭಕ್ತಿಗಳುಗೂಢ

ಹೀಗೆ ಆಗಿರುವ ಚರಿತ್ರದ ಮೂರುಖಂಡಗಳಲ್ಲಿ ಕರ್ಮಯೋಗಪ್ರಧಾನಖಂಡದಲ್ಲಿಯ ಸ್ವಾಮಿಗಳಿಂದಜನರ ಇಹ–ಪರ ಕಲ್ಯಾಣಸಾಧಿಸುವದು ನಿಶ್ಚಿತವಾಗಿರುವದು, ಯಾಕಂದರೆ, ಜಗತ್ತು ಕರ್ಮಸೂತ್ರಬದ್ಧವಾಗಿರುವದರಿಂದ, ಆ ಕರ್ಮಸೂತ್ರದಲ್ಲಿಯ ಸತ್ಕರ್ಮ–ದುಷ್ಕರ್ಮಗಳ ತೊಡಕನ್ನು ಆಯಾಧರ್ಮಗಳೆಂಬ ಹಲವುಬಗೆಯ ಹಣಿಗೆಗಳಿಂದ ಹಿಕ್ಕಿಬಿಡಿಸಿ, ಜಗತ್ತಿಗೆ ದುಷ್ಕರ್ಮದಿಂದಾಗುವ ಇಹಪರದ ಅನರ್ಥವನ್ನು ತಪ್ಪಿಸಿ, ಸತ್ಕರ್ಮದಿಂದಾಗುವ ಇಹಪರದ ಉತ್ಕರ್ಷವನ್ನು ಒದಗಿಸಿಕೊಡುವದು, ವಿಶೇಷವಾಗಿ ಕಲಿಯುಗದ ಲೋಕಶಿಕ್ಷಕರ ಕರ್ತವ್ಯವಾಗಿರುತ್ತದೆ ಕಲಿಯುಗದಲ್ಲಿ ಜ್ಞಾನೈಕಸಾಧನದಿಂದ ಮೋಕ್ಷಪಡೆಯುವದು ಅತ್ಯಂತ ಅಸಾಧ್ಯ; ಭಕ್ತಿಜ್ಞಾನಗಳಿಂದ ಈಶರ್ಕೃಪೆಯನ್ನು ಸಂಪಾದಿಸುವದು ಕಷ್ಟಸಾಧ್ಯ; ಸತ್ಕರ್ಮದಿಂದ ಇಹಲೋಕ–ಪರಲೋಕಗಳ ಸುಖಪಡೆಯುವದು ಪ್ರಯತ್ನಸಾಧ್ಯ; ಆದ್ದರಿಂದ ಉತ್ತರೋತ್ತರ ಕಲಿಪ್ರಾಬಲ್ಯವಾಗುತ್ತಿರುವ ಈಗಿನಕೆಟ್ಟದಿವಸಗಳಲ್ಲಿ, ಮೊದಲು ಸತ್ಕರ್ಮ, ಆಮೇಲೆಸತ್ಕರ್ಮಯುಕ್ತಸದ್ಭಕ್ತಿ, ಆಮೇಲೆ ಸತ್ಕರ್ಮಸದ್ಭಕ್ತಿಯುಕ್ತಜ್ಞಾನ ಈ ಕ್ರಮದಿಂದ ಹಾದಿಯತೋರಿಸಿದರೆ, ಕ್ರಮದಿಂದ ಜನರಲ್ಲಿ ಮೊದಲು ಚಿತ್ತಶುದ್ಧಿ, ಆಮೇಲೆ ಚಿತ್ತಸ್ಥೈರ್ಯ, ಆಮೇಲೆ ಮೋಕ್ಷ ಈ ಕ್ರಮದಿಂದ ಲೋಕವು ಉತ್ತರೋತ್ತರ ಕಲ್ಯಾಣದ ಮೆಟ್ಟಲುಗಳನ್ನು ಹತ್ತಿಹೋಗುವದು! ಇದು ಯುಕ್ತಿಯುಕ್ತವೂ, ಶಾಸ್ತ್ರಗ್ರಾಹ್ಯವೂ ಆಗಿರುತ್ತದೆ. ಒಟ್ಟಿಗೆ, ವ್ಯಾವಹಾರಿಕಸ್ಥಿತಿಯಲ್ಲಿ ಸತ್ಕರ್ಮದ ಹೊದಿಕೆಯಿಲ್ಲದ ಭಕ್ತಿಯೂ, ಸತ್ಕರ್ಮ

ಸದ್ವ್ಯಕ್ತಿಗಳ ಹೊದಿಕೆಯಿಲ್ಲದ ಜ್ಞಾನವೂ ಲೋಕದ ಸಾಮಾನ್ಯ ಹಿತಕ್ಕೆ ನಿಶ್ಚಯವಾಗಿ ವಿಘಾತಕಗಳಾಗುವವು; ಅದು ಹೇಗೆಂಬದನ್ನು ಲೋಕಾಪುರ ಪೀಠದ ಮೂಲ ಪರಮಹಂಸರಿಂದ ಆರು ಜನ ಸ್ವಾಮಿಗಳ ಅವಧೂತ ಮಾರ್ಗದ ಚರಿತ್ರ ಓದಿ ತಿಳಿದುಕೊಳ್ಳಬಹುದಾಗಿದೆ.

ಇನ್ನು ಯಾವ ಮಠಗಳೇ ಆಗಲಿ, ಯಾವ ಧರ್ಮಪೀಠಗಳೇ ಆಗಲಿ ಅವುಗಳ ಅಸ್ತಿತ್ವವು ಪ್ರಾಮುಖ್ಯವಾಗಿ ಸಾರ್ವಜನಿಕ ಹಿತಕ್ಕಾಗಿಯೇ ಅಲ್ಲವೆ? ಒಬ್ಬಾನೊಬ್ಬ ವ್ಯಕ್ತಿಯು ತನ್ನ ಹಿತವನ್ನು ಮಾಡಿಕೊಳ್ಳುವ ಆತುರವುಳ್ಳವನಾದರೆ, ಅಂದರೆ ಮುಮುಕ್ಷುವಾದರೆ ಕಷ್ಟಪಟ್ಟಾದರೂ ಆತನು ತನ್ನ ಹಿತಮಾಡುವವರನ್ನು ಹುಡುಕಿಕೊಂಡು, ಶ್ರೀ ಪರಮಹಂಸರಂತೆ ತನ್ನ ಹಿತವನ್ನು ಸಾಧಿಸಿಕೊಳ್ಳಬಹುದು; ಆದರೆ ಈಶ್ವರಸಂಕೇತದಂತೆ, ವಿಶೇಷವಾಗಿ ಈ ಕಲಿಯುಗದಲ್ಲಿ, ವಿಷಯಾಸಕ್ತವಾಗಿರುವ ಜಗತ್ತು ಮುಮುಕ್ಷುವಾಗುವದು ಅಶಕ್ಯವು; ಆದ್ದರಿಂದ ಜಗತ್ತಿಗೆ ಮೋಕ್ಷವನ್ನು ಒದಗಿಸಿಕೊಡುವ ಗುರುಗಳಿಗಿಂತ, ದುಷ್ಕರ್ಮದಿಂದಾಗುವ ಇಹಪರ ಅಪಕರ್ಷವನ್ನು ತಪ್ಪಿಸಿ, ಸತ್ಕರ್ಮದಿಂದಾಗುವ ಇಹಪರ ಉತ್ಕರ್ಷವನ್ನು ಒದಗಿಸಲು, ನಿಗ್ರಹಾನುಗ್ರಹದಿಂದ ಪ್ರಯತ್ನಮಾಡುವದಕ್ಕಾಗಿ ಧರ್ಮಪೀಠಗಳ ಅವಶ್ಯವು, ಯಾವಾಗಾದರೂ, ಅದರಲ್ಲಿಯೂ ವಿಶೇಷವಾಗಿ ಕಲಿಯುಗದಲ್ಲಿ ಇರುವದು. ಅಂತೇ ಜಗತ್ತಿನಲ್ಲಿ ಲೋಕಶಿಕ್ಷಣಕ್ಕಾಗಿ ಹಲವು ಧರ್ಮಪೀಠಗಳು ಸ್ಥಾಪಿಸಲ್ಪಟ್ಟಿರುವವು; ಅದರಂತೆ ಲೋಕಾಪುರಪೀಠವಾದರೂ ಧರ್ಮಪೀಠವೆನಿಸಿಕೊಳ್ಳುತ್ತಿರುವದರಿಂದ, ಅದು ಪೀಠಗಳ ಈ ಕರ್ತವ್ಯವನ್ನು ಮಾಡುವದು ಶ್ರೇಯಸ್ಕರವು. ಹಾಗೆ ಮಾಡುವದು ಪೀಠಸ್ಥಾಪಕರಾದ ಪರಮಹಂಸರಿಗೆ ನಿಶ್ಚಯವಾಗಿ ಸಂತೋಷಕರವೂ ಆಗಿರುವದು. ಹಾಗಿರದಿದ್ದರೆ, ಪರಮಹಂಸರು ಬಾಲಭುಜಂಗಯೋಗಿಗಳ ಪ್ರೇರಕರಾಗಿ ಅವರಿಂದ ಪವಿತ್ರತರ ಕರ್ಮಪ್ರಧಾನವಾದ ತಪಶ್ಚರ್ಯವನ್ನು ಮಾಡಿಸುತ್ತಿದ್ದಿಲ್ಲವೆಂದು ನಾವು ತಿಳಿದಿರುವೆವು; ಆದ್ದರಿಂದಲೇ ಶ್ರೀ ಬಾಲಭುಜಂಗಯೋಗಿಗಳನ್ನು ಕರ್ಮಯೋಗದ ಪ್ರತಿಷ್ಠಾಪನಾಚಾರ್ಯರೆಂತಲೂ, ಅವರ ಮುಂದಿನವರು ಆ ಆಚಾರ್ಯರ ಅನುಸರಣಮಾಡಬೇಕಾಗುವದೆಂತಲೂ ನಾವು ಇಲ್ಲಿ ಉಲ್ಲೇಖಿಸುವ ಸಾಹಸಮಾಡುತ್ತೇವೆ.

ಲೋಕಾಪುರ ಪೀಠದ ಮೂಲ ಗುರುಗಳಾದ ಅಜಮೀರಸಾಹೇಬರವರು, ತಮ್ಮ ಶಿಷ್ಯರಾದ ಪರಮಹಂಸರಿಗೆ—“ನಿನ್ನ ಏಳು ತಲೆಯವರೆಗೆ ಜನ್ಮತಃ ಸಿದ್ಧಿಯು ಪ್ರಾಪ್ತವಾಗುವದೆಂದು” ವರಪ್ರದಾನಮಾಡಿದ ಅವಧಿಯು, ಇದೇ ಗತಿಸಿದ್ದ೩ನೇ ಜ್ಞಾನೇಶ್ವರಸ್ವಾಮಿಗ ತಲೆಗೆಳ ಮುಗಿದಂತಾಯಿತು. ಅಂದಬಳಿಕ ಲೋಕಾಪುರಪೀಠದ ಮುಂದಿನ ಸ್ವಾಮಿಗಳು ಅಜಮೀರಸಾಹೇಬರು ಹೇಳಿದಂತೆ, ತಪಶ್ಚರ್ಯದಿಂದ ಸಿದ್ಧಿಯನ್ನು ಪಡೆಯಬೇಕಾಗುವದು ; ಕಾರಣ ಈ ಪೀಠದ ಮೂಲ ಪುರುಷರಾದ ಪರಮಹಂಸರು, ಕರ್ಮ-ಭಕ್ತಿ-ಜ್ಞಾನಗಳ ಕ್ರಮದಿಂದ ತಪಶ್ಚರ್ಯಮಾಡಿದಂತೆ, ಮುಂದೆ ಲೋಕಾಪುರಪೀಠವು ಸತ್ಕರ್ಮನಿರತವಾಗಿ ತಪಸ್ಸುಮಾಡುವದು ಅವಶ್ಯವಾಗಿರುವದು. ಈಗ ಎಷ್ಟೋ ಪೀಠಗಳು ಸತ್ಕರ್ಮಹೀನವಾದದ್ದರಿಂದಲೂ, ಸ್ವಾರ್ಥಪರಾಯಣವಾದದ್ದರಿಂದಲೂ, ಲೋಕಹಿತ ಪರಾಙ್ಮುಖವಾದದ್ದರಿಂದಲೂ, ತೇಜೋಹೀನಗಳೂ, ನಿರುಪಯುಕ್ತಗಳೂ, ಲೋಕನಿಂದ್ಯಗಳೂ ಆಗಿರುವದನ್ನು ನೋಡಬಹುದು; ಆದ್ದರಿಂದ ಪೀಠಗಳು, ಸತ್ಕರ್ಮಾಚರಣೆಯಿಂದ ಸುಶೋಭಿತಗಳಾಗಿ, ನಿಸ್ಪೃಹವೃತ್ತಿಯಿಂದ ಪ್ರಕಾಶಮಾನಗಳಾಗಿ, ಸಾಧನಸಂಪನ್ನತೆಯಿಂದ ಪರಿಪುಷ್ಟಗಳೂ ಬಲಿಷ್ಠಗಳೂ ಆಗಿ ತಮ್ಮ ಆಶೋಭೆ-ತೇಜಸ್ಸು-ಬಲಶಾಲಿತ್ವಗಳಿಂದ ಪ್ರಯತ್ನಪೂರ್ವಕ ಲೋಕಹಿತವನ್ನು ಸಾಧಿಸದಿದ್ದರೆ, ಅಂಥ ಪೀಠಗಳಿರುವದು ಅನವಶ್ಯಕವೆಂದು ಕಷ್ಟದಿಂದ ಹೇಳಬೇಕಾಗುಹದು!

ಇನ್ನು, ಆ ಪೀಠಗಳಿಗೆ ಸೌಂದರ್ಯ-ತೇಜಸ್ಸು-ಬಲ ಇವು ಉಂಟಾಗಲಿಕ್ಕೆ ಉಪಾಯಗಳೇನೆಂಬದನ್ನು ನೋಡುವದು ಅವಶ್ಯವಾಗಿರುವದು. ಈ ಮೂರರ ಪ್ರಾಪ್ತಿಗೆ ಕ್ರಮವಾಗಿ ವಿದ್ಯೆ-ತಪಸ್ಸು-ಲೋಕಹಿತ ಕಾರ್ಯಕೌಶಲತೆ ಇವು ಬೇಕಾಗುವವು; ಆದ್ದರಿಂದ ಪೀಠಸ್ಥರು ಧರ್ಮಾಧರ್ಮ-ಕರ್ಮಾಕರ್ಮಗಳ ಜ್ಞಾನವಾಗುವದಕ್ಕಾಗಿಯೂ, ಶಿಷ್ಯರ ಸಂಶಯನಿವೃತ್ತಿಯನ್ನು ಮಾಡುವದಕ್ಕಾಗಿಯೂ, ವಿವಿಧ ವಿಷಯಗಳನ್ನು ಬೋಧಿಸುವದಕ್ಕಾಗಿಯೂ ವಿದ್ಯಾಭ್ಯಾಸ ಮಾಡಬೇಕು; ಶಾಪಾನುಗ್ರಹಶಕ್ತಿಯುಂಟಾಗುವದಕ್ಕಾಗಿ ಇಂದ್ರಿಯನಿಗ್ರಹಪೂರ್ವಕವಾಗಿ ಯೋಗತ್ರಯಗಳಲ್ಲಿ ಯಾವ

ದೊಂದು ಮಾರ್ಗದಿಂದ ತಪಶ್ಚರ್ಯವನ್ನು ಮಾಡಬೇಕಾಗುವದು; ಅಂದರೆ ತೇಜಸ್ವಿತೆಯು ಪ್ರಾಪ್ತವಾಗುವದು. ವಿದ್ಯಾದಾನ, ಪ್ರವಚನ, ನಿರೂಪಣಾದಿಗಳಿಂದ ಧರ್ಮಜಾಗ್ರತಿಯನ್ನು ಮಾಡುವದಕ್ಕಲ್ಲದೆ, ಲೋಕಸಂಗ್ರಹಕ್ಕಾಗಿ ಮನೋಹರ ಇಮಾರತುಗಳು, ಅನ್ನ ಸಂತರ್ಪಣ, ಉತ್ಸವ ಮೊದಲಾದವುಗಳ ಅನುಕೂಲತೆಗಾಗಿ ವೆಚ್ಚಕ್ಕೆ ತಕ್ಕಷ್ಟು ಸಾಂಪತ್ತಿಕ ಸ್ಥಿತಿಯ ಅನುಕೂಲ್ಯವು ಇರಬೇಕಾಗುವದು. ಈಎಲ್ಲ ಅನುಕೂಲ್ಯಗಳ ಉಪಕ್ರಮವು, ಶ್ರೀಬಾಲಭುಜಂಗಸ್ವಾಮಿಗಳ ಕಾಲದಲ್ಲಿಯೇ ಆಗಿದ್ದು, ಇದೇ ಈಗ ಗತಿಸಿರುವ ೩ನೇಜ್ಞಾನೇಶ್ವರ ಸ್ವಾಮಿಗಳ ಕಾಲದಲ್ಲಿಅದು ಮುಂದುವರಿದಿರುವದು.

ಹೀಗೆ ೩ನೇಜ್ಞಾನೇಶ್ವರಸ್ವಾಮಿಗಳುಪೀಠದಸ್ಥಿತ್ಯಂತರಮಾಡುತ್ತ ಹಲವು ಮಹಿಮೆಗಳನ್ನುಪ್ರಕಟಿಸಿರುವರು ಅವನ್ನು ಸಂಗ್ರಹಿಸಲಿಕ್ಕೆ ಅನುಕೂಲವಾಗದ್ದರಿಂದ, ಅಸಮಾಧಾನಪಡಬೇಕಾಗಿದೆ. ಒಟ್ಟಿಗೆ, ಲೋಕಾಪುರದ ಪರಮಹಂಸರಸತ್ತೆಯು ಈಗಲೂ ಜಾಗೃತವಾಗಿರುತ್ತದೆಂದು ಹೇಳಬೇಕಾಗುವದು. ಹೀಗಿರುವಾಗ, ೩ನೇ ಜ್ಞಾನೇಶ್ವರ ಸ್ವಾಮಿಗಳ ಲೋಕಯಾತ್ರೆಯ ಪರಿಸಮಾಪ್ತಿಯ ದುಃಖಕರ ಸಂಗತಿಯು ಹೋದವರ್ಷ ಅಕಸ್ಮಾತ್ತಾಗಿ ಒದಗಿತು. "ಶರಣರ ಪರೀಕ್ಷೆಯನ್ನು ಮರಣದಲ್ಲಿ ಮಾಡು" ಎಂಬ ಸಿದ್ಧಾಂತಕ್ಕನುಸರಿಸಿ, ಲೋಕಾಪುರಪೀಠ ಪರಂಪರೆಯವರ ಹಲವು ಶರಣ್ಯಪ್ರದರ್ಶನದ ಸಂಗತಿಗಳನ್ನು ಈವರೆಗೆ ಹೇಳುತ್ತ ಬಂದಿರುವಂತೆ, ಈ ಮೂರನೇ ಜ್ಞಾನೇಶ್ವರ ಸ್ವಾಮಿಗಳ ಸಂಬಂಧದಿಂದಲೂ ಅವರು ಸೂಚಿಸಿರುವ ಹಲವು ಭವಿಷ್ಯಗಳನ್ನು ಹೇಳುವ ಸುಯೋಗವು ಒದಗಿದ್ದಕ್ಕಾಗಿ ನಮಗೆ ಬಹಳ ಸಂತೋಷವಾಗುತ್ತದೆ. ಆ ಕೌತುಕದ ಭವಿಷ್ಯಸೂಚಕ ಸಂಗತಿಗಳನ್ನು ಕೆಳಗೆ ಕ್ರಮವಾಗಿ ಉಲ್ಲೇಖಿಸುವೆವು.

**ಭವಿಷ್ಯದ ೧ನೆಯ ಸಂಗತಿ**—೩ನೇಜ್ಞಾನೇಶ್ವರಸ್ವಾಮಿಗಳು ಹಂಪಿಹೊಳೆಯಸ್ವಾಮಿಗಳ ಆರಾಧನೆಗಾಗಿ ಈ ವರ್ಷ ಹಂಪಿಹೊಳೆಗೆ ಹೋಗಿದ್ದರು. ಆರಾಧನೆ ಮುಗಿದು ಜ್ಞಾನೇಶ್ವರಸ್ವಾಮಿಗಳು ಊರಿಗೆ ಹೊರಡಲು, ಹಂಪಿಹೊಳೆಯ ಇನಾಮುದಾರರಾದ ಒಚ್ಚಪ್ಪಯ್ಯನವರು—"ಸ್ವಾಮಿ, ಪ್ರತಿ

ಾ ಹೀಗೆಯೇ ಆರಾಧನೆಗೆ ಬರಬೇಕು," ಎಂದು ಹೇಳಿದರು ಅದಕ್ಕೆ ್ಞನೇಶ್ವರ ಸ್ವಾಮಿಗಳ ಮುಖದಿಂದ—"ಮುಂದಿನ ವರ್ಷ ನಾನು ಆರಾ ಗೆ ಬರುವದಿಲ್ಲ" ಎಂಬ ಉತ್ತರವು ಹೊರಬಿದ್ದಿತು!

ಭವಿಷ್ಯದ ೨ನೆಯ ಸಂಗತಿ—೩ನೇ ಜ್ಞಾನೇಶ್ವರ ಸ್ವಾಮಿಗಳು— ೀದವರ್ಷ ಲೋಕಾಪುರದಿಂದ ಸಂಚಾರಕ್ಕೆ ಹೊರಟಿರುವಾಗ, ಓಲೇ ರ ಚಂದನೆಂಬವನು ಸ್ವಾಮಿಗಳನ್ನು ಕುರಿತು—"ಅಪ್ಪಾ, ನಾಳಿನ ಭಾದ್ರ ದ ಆರಾಧನೆಗೆ ನೀನು ಬರುತ್ತೀಯಷ್ಟೇ?" ಎಂದು ಪ್ರಶ್ನಮಾಡಲು, ಕ್ಕೆ ಜ್ಞಾನೇಶ್ವರ ಸ್ವಾಮಿಗಳ ಮುಖದಿಂದ—"ಇನ್ನೇನು ಸುಡಲಿಕ್ಕೆ ಲಿ?" ಎಂಬ ಉತ್ತರವು ಹೊರಟಿತು!

ಭವಿಷ್ಯದ ೩ನೆಯ ಸಂಗತಿ—ಸ್ವಾಮಿಗಳು ಸಂಚಾರಮಾಡುತ್ತಮಾ ತ್ತ ಅವರು ಆಲಗುಂಡಿ ಎಂಬ ಗ್ರಾಮಕ್ಕೆಹೋದರು. ಅಲ್ಲಿಯ ನರಸಿಂಹ ಾಸ್ತ್ರರೆಂಬವರು ಸ್ವಾಮಿಗಳಿಗೆ—"ಭಾದ್ರಪದದ ಉತ್ಸವಕ್ಕೆ ಬರುತ್ತೀ ?" ಎಂದು ಕೇಳಲು, ಸ್ವಾಮಿಗಳು—"ಬರುವದಿಲ್ಲ" ಎಂದು ಉತ್ತರ ಳಿಸಿದರು

ಭವಿಷ್ಯದ ೪ನೆಯ ಸಂಗತಿ—ದೇಹಬಿಡುವ ಪೂರ್ವದ ಕೆಲವು ಸಗಳ ಹಿಂದೆ ಒಂದು ದಿನ ರಾತ್ರಿ ೩ನೇ ಜ್ಞಾನೇಶ್ವರ ಸ್ವಾಮಿಗಳು ಸ್ಮ ಅಣ್ಣಂದಿರಾದ ಈ ಚರಿತ್ರ ಪ್ರವರ್ತಕ ಕೃಷ್ಣದೀಕ್ಷಿತರ ಸ್ವಪ್ನ ಬಂದರು. ಆಗ ಸ್ವಾಮಿಗಳು ಪರಿಪುಷ್ಟವಾದ ಭವ್ಯ ತೇಜಃಪುಂಜದೇಹ ರಾಗಿದ್ದರು. ಅವರು ಕೌಪೀನವನ್ನು ಮಾತ್ರಧರಿಸಿ, ಹೆಗಲಿಗೊಂದು ಟು ಹಾಕಿದ್ದರು. ಆಗ ಅವರು ಕೃಷ್ಣದೀಕ್ಷಿತರಿಗೆ—"ನಮ್ಮ ಹೊರ ವ ತಯಾರ ಇವೆ" ಎಂದು ಹೇಳಿದರು!

ಹೀಗೆ ಹಲವು ಸಾರೆ ಭವಿಷ್ಯಗಳನ್ನು ಸೂಚಿಸಿದ ೩ನೇ ಜ್ಞಾನೇ ರಸ್ವಾಮಿಗಳು ಜಮುಖಂಡಿಯ ಕಡೆ ಸಂಚಾರದ ಕಾರ್ಯಮಾಡುತ್ತಿರು ಗ, ಅವರಿಗೆ ಚಳಿಜ್ವರ ಬರಹತ್ತಿದವು. ದಿನಕ್ಕೆ ಎರಡು ಮೂರು ಿ ಚಳಿಜ್ವರ ಬರತೊಡಗಿದವು. ಔಷಧೋಪಚಾರಗಳಿಂದ ಗುಣವಾಗ . ಅಶಕ್ತತೆಯು ಹೆಚ್ಚುತ್ತಹೋಯಿತು. ಅವರು ಸ್ವಪ್ನದಲ್ಲಿ ಸೂಚಿ ಂತೆ ಅವರ ಅಣ್ಣಂದಿರಾದ ಕೃಷ್ಣದೀಕ್ಷಿತರು ಜಮುಖಂಡಿಗೆ ಹೋದರು.

ಸ್ವಾಮಿಗಳು—"ಇನ್ನೇನು, ಅಣ್ಣ ಬಂದದ್ದರಿಂದ ನನ್ನ ಅರ್ಧಬೇನೆಯು ಹೋಯಿತು" ಎಂದು ಹೇಳಿದರಂತೆ. ಮುಂದೆ ಕೆಲವುದಿನಗಳು ಕ್ರಮಿಸಿದ ಬಳಿಕಶಕೆ೧೮೬೦ನೇ ಈಶ್ವರ ಸಂವತ್ಸರದ ಮಾರ್ಗಶಿರಬಹುಳ೩೦ಶನಿವಾರದ ರಾತ್ರಿ ೧೨ ಗಂಟೆಯ ಸುಮಾರಕ್ಕೆ ೩ನೇ ಜ್ಞಾನೇಶ್ವರಸ್ವಾಮಿಗಳು ಡಾಕ್ಟರ ರನ್ನು ಕರಿಸಹೇಳಲು, ಡಾಕ್ಟರನು ಬಂದು ಔಷಧಕೊಟ್ಟು ಹೋದನು. ಆಗ ಸ್ವಾಮಿಗಳು ತಮ್ಮ ಅಣ್ಣಂದಿರಾದಕೃಷ್ಣದೀಕ್ಷಿತರಿಗೆ-"ಅಣ್ಣಾ, ಕಥೆಹೇಳಿರಿ, ನಾನು ಕೇಳುತ್ತ ಮಲಗಿಕೊಳ್ಳುವೆನು" ಎಂದು ಹೇಳಿ, ಮಗ್ಗಲಾಗಿ ಮಲ ಗಿಕೊಂಡರಂತೆ. ಕೃಷ್ಣದೀಕ್ಷಿತರು ಕಥೆ ಹೇಳಹತ್ತಿದರು. ಸ್ವಾಮಿಗಳು ಕೇಳುತ್ತ ಮಲಗಿಕೊಂಡರು. ಮರಣಕಾಲದ ಯಾವಚಿಹ್ನಗಳೂ ತೋರಿ ಬರಲಿಲ್ಲ. ಸ್ವಾಮಿಗಳು ಕಥೆಕೇಳುತ್ತ ಮಲಗಿರುವರೆಂತಲೇ ತಿಳಿದು ಕೃಷ್ಣ ದೀಕ್ಷಿತರು ಕಥೆಹೇಳಹತ್ತಿದರು. ಆಗ ಅಲ್ಲಿದ್ದ ಒಬ್ಬರಿಗೆ ಯಾಕೋ ಸಂಶ ಯಬಂದು ಸ್ವಾಮಿಗಳ ಮೋರೆಯಕಡೆಗೆನೋಡಿ, ಹತ್ತರಹೋಗಿ ಪರೀಕ್ಷಿ ಸಿದರು. ಆಗ ಕೇವಲ ಸ್ತಬ್ಧತೆ! ಶ್ವಾಸೋಚ್ಛ್ವಾಸವು ನಿಂತುಬಿಟ್ಟಿತ್ತು. ಹಾವು, ನಿರಾಯಾಸವಾಗಿ ತನ್ನ ಪರೆಬಿಡುವಂತೆ, ಮಹಾತ್ಮರಾದ ೩ನೇ ಜ್ಞಾನೇಶ್ವರಸ್ವಾಮಿಗಳು ಅಂದೇ ರಾತ್ರಿ ಒಂದುಗಂಟೆಗೆ, ಅಂದರೆ ೧೯೩೮ನೇ ಜನವರಿ೧ನೇ ತಾರೀಖಿನರಾತ್ರಿ ತಮ್ಮ ದೇಹವನ್ನು ಬಿಟ್ಟಿದ್ದರು.! ಆಗ ಎಲ್ಲರಿಗೂ ಬಹಳ ದುಃಖವಾಯಿತು! ಆಗ ಸ್ವಾಮಿಗಳ ದಿವ್ಯತೇಜಸ್ಸು ಎಂದಿ ನಂತೆ ಅಚ್ಚಳಿದಿದ್ದಿಲ್ಲ. "ಜಾತಸ್ಯಮರಣಂ ಧ್ರುವಂ" ಎಂಬ ಸಿದ್ಧಾಂತದಂತೆ, ಮರಣವು ಸತ್ಪುರುಷರಿಗೆ ಬಿಟ್ಟಿಲ್ಲ, ಅವತಾರಿಕರಿಗೆ ಬಿಟ್ಟಿಲ್ಲ! ಮರಣವು ಹಲವು ದೇಹಧರ್ಮಗಳಲ್ಲಿಯದೊಂದು ದೇಹಧರ್ಮವೆಂತಲೇ ಹೇಳ ಬಹುದು. ದೇಹತ್ಯಾಗಮಾಡಿದಾಗ ಸ್ವಾಮಿಗಳ ವಯಸ್ಸು ಮೂವತ್ತರ ಮೇಲೆ,ನಲವತ್ತರ ಒಳಗೆ ಇರಬಹುದು; ಇಂತಹ ಚಿಕ್ಕವಯಸ್ಸಿನಲ್ಲಿ ದೇಹ ತ್ಯಾಗಮಾಡಿದ್ದರಿಂದ ನಮ್ಮಂತೆ ಅವರ ಪರಿಚಯಸ್ಥರೆಲ್ಲರಿಗೂ ಪರಮಾವಧಿ ದುಃಖವಾದದ್ದು ಸ್ವಾಭಾವಿಕವೇ ಸರಿ. ಶ್ರೀ ಸ್ವಾಮಿಗಳ ಕುಟುಂಬವಿರು ವದು, ಅವರ ಹೊಟ್ಟೆಯಲ್ಲಿ ಒಂದು ಗಂಡು, ಒಂದು ಹೆಣ್ಣು ಹೀಗೆ ಎರಡು ಸಂತತಿಗಳಿರುವವು. ೩ನೇ ಜ್ಞಾನೇಶ್ವರ ಸ್ವಾಮಿಗಳ ತರುವಾಯ ಅವರ

ತೇಜಸ್ವಿಗಳಾದ ಹತ್ತು, ಹನ್ನೆರಡು ವರ್ಷಗಳವಯಸ್ಸಿನ"ಭುಜಂಗ"ಎಂಬ ಹೆಸರಿನ ಹೊಟ್ಟೆಯ ಮಕ್ಕಳು, ಇನೆಭುಜಂಗಸ್ವಾಮಿಗಳೆಂಬ ಹೆಸರಿನಿಂದ ಪೀಠವನ್ನು ಅಲಂಕರಿಸಿರುವರು. ಈ ಮೂರನೇಬಾಲಭುಜಂಗಸ್ವಾಮಿಗಳು ಇದೇಶ್ರಾವಣ ಕೃಷ್ಣಚತುರ್ಥಿಯದಿವಸ ಕೃಷ್ಣದೀಕ್ಷಿತರೊಡನೆ ನಮ್ಮಲ್ಲಿಗೆ ಸಂಚಾರಕ್ಕೆಬರಲು, ಆಗ ಈ ಚರಿತ್ರದ ಮುದ್ರಣಕಾರ್ಯವು ಆರಂಭವಾಯಿತು. ಪ್ರಾಮುಖ್ಯವಾಗಿ ಮಠದ ಸಾಲತೀರಿಸುವದಕ್ಕಾಗಿಯೇ ಈ ಚರಿತ್ರವು ಬರೆದದ್ದಾಗಿರುವದು! ಆದ್ದರಿಂದ ಪರಮಹಂಸರ ಕೃಪೆಯಿಂದ ಮಠದಸಾಲತೀರಿ, ಮಠದಪ್ರಸಿದ್ಧಿಯಾಗಿ ಲೋಕಕ್ಕೆ ಕಲ್ಯಾಣದ ದಾರಿಯು ತೋರಲೆಂದು ನಾನು ಮನಃಪೂರ್ವಕವಾಗಿ ಪರಮಹಂಸರನ್ನು ಪ್ರಾರ್ಥಿಸಿ ನಮಸ್ಕರಿಸಿ, ಚರಿತ್ರಲೇಖನವನ್ನು ಮುಗಿಸುವೆನು!

**ಶ್ರೀ ಕೃಷ್ಣಾರ್ಪಣಮಸ್ತು.**

ಜಯಮಂಗಲಂ ನಿತ್ಯ ಶುಭಮಂಗಲಂ.

---

**ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ ಇವರು ಹಾವೇರಿಯಲ್ಲಿ ತಮ್ಮ ವೆಂಕಟೇಶ ಪ್ರೇಸಿನಲ್ಲಿ ಮುದ್ರಿಸಿ ಪ್ರಸಿದ್ಧಪಡಿಸಿದರು.**

೧೯೩೪ನೇ ಇಸ್ವಿಯಲ್ಲಿ

# ತಯಾರಾದ ಹೊಸಪುಸ್ತಕಗಳು

---

| | | |
|---|---|---|
| ೧ | ಸತ್ವಸಾರ | ೧-೮-೦ |
| ೨ | ಸ್ವರಾಜ್ಯಸುಗಂಧ | ೧-೦-೦ |
| ೩ | ಕಲಿಕುಠಾರ, ೨ನೇಭಾಗ | ೧-೦-೦ |



# ಪ್ರಿಂಟಿನಲ್ಲಿರುವ ಪುಸ್ತಕಗಳು

೪ ದುರ್ಗಹ ಬಚ್ಚುಗತ್ತಿ, ೧ನೇಭಾಗ

೫ ನಳಚರಿತ್ರ

೬ ದಾಂಪತ್ಯ

೭ ಸಾಹಿತ್ಯ.

